# ವಸಾಹತು ಶಿಕ್ಷಣ : ಕನ್ನಡ ಸಾಹಿತ್ಯದ ಪ್ರತಿಕ್ರಿಯೆ ಹಾಗೂ ನಿರ್ವಚನ

(ಆಯ್ದ ಕಾದಂಬರಿಗಳನ್ನು ಅನುಲಕ್ಷಿಸಿ)

ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧನಾ ವಿದ್ಯಾರ್ಥಿ
**ಶಿವಕುಮಾರ ಸಿ.**

ಮಾರ್ಗದರ್ಶಕರು
**ಡಾ. ಕೆ.ಸಿ. ಶಿವಾರೆಡ್ಡಿ**





ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬





೨೦೧೬

# ವಸಾಹತು ಶಿಕ್ಷಣ : ಕನ್ನಡ ಸಾಹಿತ್ಯದ ಪ್ರತಿಕ್ರಿಯೆ ಹಾಗೂ ನಿರ್ವಚನ

**(ಆಯ್ದ ಕಾದಂಬರಿಗಳನ್ನು ಅನುಲಕ್ಷಿಸಿ)**

ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ



ಸಂಶೋಧನಾ ವಿದ್ಯಾರ್ಥಿ

**ಶಿವಕುಮಾರ ಸಿ.**

ಮಾರ್ಗದರ್ಶಕರು

**ಡಾ. ಕೆ.ಸಿ. ಶಿವಾರೆಡ್ಡಿ**



**ಭಾಷಾಂತರ ಅಧ್ಯಯನ ವಿಭಾಗ**
**ಭಾಷಾ ನಿಕಾಯ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೬೮೩

**೨೦೧೬**

## ಮಾರ್ಗದರ್ಶಕರ ದೃಢೀಕರಣ ಪತ್ರ

ಶಿವಕುಮಾರ ಸಿ ಇವರು **'ವಸಾಹತು ಶಿಕ್ಷಣ : ಕನ್ನಡ ಸಾಹಿತ್ಯದ ಪ್ರತಿಕ್ರಿಯೆ ಹಾಗೂ ನಿರ್ವಚನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಮತ್ತು ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿ : 26.05.2016
ಸ್ಥಳ : ವಿದ್ಯಾರಣ್ಯ

(ಡಾ. ಕೆ.ಸಿ. ಶಿವಾರೆಡ್ಡಿ)
ಸಹ ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ

## ಸಂಶೋಧಕರ ಪ್ರಮಾಣ ಪತ್ರ

**'ವಸಾಹತು ಶಿಕ್ಷಣ : ಕನ್ನಡ ಸಾಹಿತ್ಯದ ಪ್ರತಿಕ್ರಿಯೆ ಹಾಗೂ ನಿರ್ವಚನ'** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಕೆ.ಸಿ.ಶಿವಾರೆಡ್ಡಿ, ಸಹ ಪ್ರಾಧ್ಯಾಪಕರು, ಭಾಷಾಂತರ ಅಧ್ಯಯನ ವಿಭಾಗ, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾ ಪ್ರಬಂಧವನ್ನು ಯಾವುದೇ ಪದವಿ ಇಲ್ಲವೇ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ

ದಿ : 26.05.2016
ಸ್ಥಳ : ವಿದ್ಯಾರಣ್ಯ

**(ಶಿವಕುಮಾರ ಸಿ)**
ಸಂಶೋಧಕ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ

# ಪರಿವಿಡಿ

## ಅಧ್ಯಾಯ ೧ : ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನ

ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

## ಹಿನ್ನೆಲೆ

ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಬ್ರಿಟಿಷರು ಸ್ಥಳೀಯ ಪ್ರಭುತ್ವಗಳ ಅಸ್ಥಿರತೆಯ ಲಾಭ ಪಡೆದು ಇಲ್ಲಿ ತಮ್ಮ ಪ್ರಭುತ್ವ ಸ್ಥಾಪಿಸಿದರು. ಭಾರತದ ಬಹುಭಾಗವನ್ನು ತಮ್ಮ ವಶಕ್ಕೆ ಪಡೆದು ಎರಡು ನೂರು ವರ್ಷಗಳಿಗೂ ಮಿಗಿಲಾಗಿ ಆಳ್ವಿಕೆ ನಡೆಸಿದರು. ಹದಿನೇಳನೇ ಶತಮಾನದ ಆರಂಭದ ಕಾಲಕ್ಕೆ ವಾಣಿಜ್ಯ ಉದ್ದೇಶದಿಂದ ಭಾರತಕ್ಕೆ ಬಂದ ಈಸ್ಟ್ ಇಂಡಿಯಾ ಕಂಪನಿಯು ೧೬೧೩ರಲ್ಲಿ ಜಹಾಂಗೀರನ ಅನುಮತಿ ಪಡೆದು ಸೂರತ್ ನಗರದಲ್ಲಿ ತನ್ನ ವ್ಯಾಪಾರಿ ಸಂಸ್ಥೆಯನ್ನು ಸ್ಥಾಪಿಸಿತು. ಅನಂತರ ಮಚಲೀಪಟ್ಟಣ, ಮದ್ರಾಸ್, ಹೂಗ್ಲಿ, ಬೊಂಬಾಯಿ, ಕಲ್ಕತ್ತಾ ನಗರಗಳಿಗೆ ತನ್ನ ವ್ಯಾಪಾರವನ್ನು ವಿಸ್ತರಿಸಿತು. ಹದಿನೇಳನೇ ಶತಮಾನದ ಕೊನೆಗೆ ಭಾರತದ ಪ್ರಮುಖ ನಗರಗಳನ್ನು ತನ್ನ ವ್ಯಾಪಾರದ ಕೇಂದ್ರಗಳನ್ನಾಗಿಸಿಕೊಂಡಿತು.

ಈಸ್ಟ್ ಇಂಡಿಯಾ ಕಂಪನಿಯ ಆಡಳಿತವು ಸಿಪಾಯಿದಂಗೆಯ ಅನಂತರ ೧೮೫೮ರಲ್ಲಿ ಇಂಗ್ಲೆಂಡಿನ ರಾಣಿಯ ಆಡಳಿತಕ್ಕೆ ವರ್ಗಾವಣೆಗೊಂಡಿತು. ಭಾರತದ ಮೇಲೆ ಪ್ರಭುತ್ವ ಸಾಧಿಸಿದ ಇಂಗ್ಲೆಂಡಿನ ರಾಣಿಯು 'ಇರುವ ರಾಜ್ಯವನ್ನು ಇನ್ನು ವಿಸ್ತರಿಸಬೇಕೆಂಬ ಆಸೆ ನಮಗಿಲ್ಲ. ದೇಶದ ರಾಜರುಗಳ ಹಕ್ಕು ಬಾಧ್ಯತೆಗಳನ್ನು ಗೌರವವನ್ನೂ ನಮ್ಮ ಹಕ್ಕು ಬಾಧ್ಯತೆ ಗೌರವಗಳಿಗೆ ಸರಿಸಮವೆಂದು ಭಾವಿಸಿ ಗೌರವಿಸುತ್ತೇವೆ. ಮತಭೇದವೆಣಿಸದೆ ಸರ್ವರಿಗೂ ಸಮಾನತೆಯಾಗಬೇಕೆಂದೂ ಕಾನೂನಿನ ದೃಷ್ಟಿಯಲ್ಲಿ ಮತದ ನೆವದಿಂದಾಗಲಿ, ಆಚಾರದ ನೆವದಿಂದಾಗಲಿ ಯಾರೊಬ್ಬರಿಗೂ ಪಕ್ಷಪಾತವನ್ನಾಗಲಿ ಅಥವಾ ಪಕ್ಷಾಘಾತವನ್ನಾಗಲಿ ಮಾಡಕೂಡದೆಂದೂ ನಮ್ಮ ರಾಜಚಿತ್ತವಿದೆಯೆಂದು ಸಾರುತ್ತೇವೆ. ನಮ್ಮ ಪ್ರಜೆಗಳಿಗೆ ಅವರು ಯಾವ ಜನಾಂಗದವರಾಗಲಿ, ಯಾವ ಧರ್ಮದವರಾಗಲಿ ವಿದ್ಯಾಸಾಮರ್ಥ್ಯ ಕರ್ತವ್ಯ ಬುದ್ಧಿಗಳಿದ್ದರೆ ಭೇದವಿಲ್ಲದೆ ಸ್ಥಾನಮಾನ ಗೌರವಾಧಿಕಾರಗಳು ದೊರೆಯುತ್ತವೆಂದೂ ಎಲ್ಲರೂ ತಿಳಿಯುವಂತೆ ಸಾರುತ್ತೇವೆ' ಎಂದು ಹೇಳಿದರು. ಈ ಮಾತುಗಳಲ್ಲಿ ಕೆಲ ಮಾತುಗಳಿಗೆ ಮಾತ್ರ ಅವರು ತಕ್ಕುದಾಗಿ ನಡೆದುಕೊಂಡರು.

ಬ್ರಿಟಿಷರ ಆಡಳಿತವು ಭಾರತದೆಲ್ಲೆಡೆ ಹರಡಿದ ಕಾಲಕ್ಕೆ ಪಶ್ಚಿಮ ದೇಶಗಳ ಕ್ರೈಸ್ತ ಪಾದ್ರಿಗಳು ಕ್ರೈಸ್ತಧರ್ಮ ಪ್ರಚಾರಕ್ಕಾಗಿ ಭಾರತಕ್ಕೆ ಬಂದರು. ಹಾಗೆ ಬಂದವರು ವಿದ್ಯಾಭ್ಯಾಸದ ಪ್ರಚಾರದಲ್ಲಿ ತೊಡಗಿ ವಿದ್ಯಾಲಯಗಳನ್ನು ತೆರೆದರು. ಓದಲು ಬಂದ ಶಾಲೆಯ ಮಕ್ಕಳ ಮನಸ್ಸಿನಲ್ಲಿ ಕ್ರೈಸ್ತ ಮತದ ತತ್ವಗಳನ್ನು ತುಂಬಲು ಪ್ರಯತ್ನಿಸಿದರು. ಭಾರತದಲ್ಲಿ ಮಿಷನರಿಗಳು ಶಾಲೆ ಮತ್ತು ಕಾಲೇಜುಗಳನ್ನು ಸ್ಥಾಪನೆ ಮಾಡಿದ್ದು

ಕ್ರಾಂತಿಕಾರಕ ಬದಲಾವಣೆ. ಏಕೆಂದರೆ ಅದುವರೆಗೂ ಇಲ್ಲಿ ಚಾಲ್ತಿಯಲ್ಲಿದ್ದ ಸಾಂಪ್ರದಾಯಿಕ ಶಿಕ್ಷಣ ಪದ್ಧತಿಯು ಕೆಲವೇ ವರ್ಗದವರಿಗೆ ಮೀಸಲಾಗಿತ್ತು. ಹಲವು ತಳ ಸಮುದಾಯಗಳನ್ನು ಅಕ್ಷರ ಕಲಿಕೆಯಿಂದ ಹೊರಗಿಡಲಾಗಿತ್ತು. ಇಂಥ ಸಂದರ್ಭದಲ್ಲಿ ಭಾರತೀಯ ಪರಿಸರದಲ್ಲಿ ಮಿಷನರಿಗಳು ಆರಂಭಿಸಿದ ಶಾಲೆಗಳು ಸಮಾಜದ ಎಲ್ಲ ವರ್ಗದ ಜನರಿಗೂ ಶಿಕ್ಷಣದಲ್ಲಿ ಅವಕಾಶಗಳನ್ನು ಕಲ್ಪಿಸಿದವು. ಇದು ಭಾರತೀಯ ಸಾಮಾಜಿಕ ಬದುಕಿನಲ್ಲಿ ಉಂಟಾದ ದೊಡ್ಡ ಬದಲಾವಣೆ. ಅಲ್ಲದೇ ಬ್ರಿಟಿಷ್ ಸರ್ಕಾರವು ಸ್ಥಳೀಯರ ಶಿಕ್ಷಣದ ಬಗ್ಗೆ ಚಿಂತಿಸಲು ಕಾರಣವಾಯಿತು. ೧೮೦೦ರ ಆರಂಭದ ಕಾಲಕ್ಕಾಗಲೇ ಕಲ್ಕತ್ತಾದ ಸುತ್ತಮುತ್ತಲ ಪ್ರದೇಶಗಳಲ್ಲಿ ಇಂಗ್ಲಿಷ್ ಶಾಲೆಗಳು ಆರಂಭಗೊಂಡಿದ್ದವು. ಬ್ರಿಟಿಷ್ ಸರ್ಕಾರವು ಈಸ್ಟ್ ಇಂಡಿಯಾ ಕಂಪನಿಯ ವ್ಯಾಪಾರದ ಹಕ್ಕನ್ನು ಮುಂದುವರೆಸಲು ೧೮೧೩ರಲ್ಲಿ ಚಾರ್ಟರ್ ಕಾಯ್ದೆಯನ್ನು ಜಾರಿಗೆ ತಂದಿತು. ಈ ಕಾಯ್ದೆಯಲ್ಲಿ ಬ್ರಿಟಿಷರ ಆಡಳಿತಕ್ಕೆ ಒಳಗಾಗಿರುವ ಜನರಿಗೆ ಉಪಯುಕ್ತ ಜ್ಞಾನ ಮತ್ತು ನೈತಿಕ ಬೆಳವಣಿಗೆಯನ್ನು ವೃದ್ಧಿಗೊಳಿಸಲು ಸೌಲಭ್ಯಗಳನ್ನು ಒದಗಿಸಬೇಕೆಂದು ಹೇಳಲಾಗಿತ್ತು. ಅದರಿಂದಾಗಿ ಈಸ್ಟ್ ಇಂಡಿಯಾ ಕಂಪನಿಯು ತನ್ನ ಆದಾಯದಲ್ಲಿ ಸ್ಥಳೀಯರ ಶಿಕ್ಷಣಕ್ಕಾಗಿ ಒಂದು ಲಕ್ಷ ರೂಪಾಯಿಗಳನ್ನು ಮೀಸಲಾಗಿಟ್ಟಿತು.

೧೮೧೬ರಲ್ಲಿ ಕಲ್ಕತ್ತಾದಲ್ಲಿ ಬೈದ್ಯನಾಥ ಮುಖರ್ಜಿ ಅವರು ಆಗಿನ ಸುಪ್ರೀಂಕೋರ್ಟ್‌ನ ಮುಖ್ಯನ್ಯಾಯಾಧೀಶರಾದ 'ಸರ್ ಹೈಡ್ ಈಸ್ಟ್'ನನ್ನು ಕಂಡು, ಹಲವಾರು ಪ್ರಮುಖ ಹಿಂದೂಗಳು ತಮ್ಮ ಮಕ್ಕಳಿಗೆ ಯುರೋಪಿಯನ್ ಮಾದರಿಯ ಶಿಕ್ಷಣ ನೀಡುವ ವ್ಯವಸ್ಥೆಗಾಗಿ ಕಾತರರಾಗಿದ್ದಾರೆ, ಅದಕ್ಕಾಗಿ ಒಂದು ಸಭೆಯನ್ನು ಕರೆಯಬೇಕೆಂದು ಕೋರಿಕೊಂಡನು. ಸರ್ ಹೈಡ್ ಈಸ್ಟ್ ಕರೆದ ಸಭೆಯಲ್ಲಿ ಐವತ್ತಕ್ಕೂ ಹೆಚ್ಚು ಹಿಂದೂಗಳು ಭಾಗವಹಿಸಿದ್ದರು. ಯುರೋಪಿಯನ್ ಮಾದರಿಯ ಶಿಕ್ಷಣದ ಜಾರಿಗಾಗಿ ಒತ್ತಾಯಿಸಿ ಐವತ್ತು ಸಾವಿರ ರೂಪಾಯಿಗಳ ಚಂದಾ ಹಣವನ್ನು ನೀಡಿದರು.

೧೮೧೭ರಲ್ಲಿ ಕಲ್ಕತ್ತಾದಲ್ಲಿ ಹಿಂದೂ ಕಾಲೇಜು ಹಾಗೂ ಸ್ಕೂಲ್ ಆಫ್ ಸೊಸೈಟಿಗಳು ಸ್ಥಾಪನೆಗೊಂಡವು. ಈ ಎರಡು ವಿದ್ಯಾಕೇಂದ್ರಗಳ ಸ್ಥಾಪನೆ ಸರ್ಕಾರದ ಪ್ರಯತ್ನವಾಗಿರಲಿಲ್ಲ. ಆದರೆ ಸ್ಥಾಪನೆಯ ಹಿಂದೆ ಬ್ರಿಟಿಷ್ ಅಧಿಕಾರಿಗಳ ಶ್ರಮವಿತ್ತು. ಈ ಎಲ್ಲ ಬೆಳವಣಿಗೆಗಳು ಭಾರತದಲ್ಲಿ ಯುರೋಪಿಯನ್ ಮಾದರಿಯ ಶಿಕ್ಷಣ ವ್ಯವಸ್ಥೆಯು ಜಾರಿಯಾಗಲು ವೇದಿಕೆಯನ್ನು ಸೃಷ್ಟಿಸಿದವು.

ಈಸ್ಟ್ ಇಂಡಿಯಾ ಕಂಪನಿಯು ಸ್ಥಳೀಯರ ವಿದ್ಯಾಭ್ಯಾಸಕ್ಕಾಗಿ ಮೀಸಲಾಗಿರಿಸಿದ್ದ ಒಂದು ಲಕ್ಷ ರೂಪಾಯಿಗಳನ್ನು ಹೇಗೆ ಬಳಸಬೇಕು ಎನ್ನುವ ವಿಚಾರವಾಗಿ ಚರ್ಚೆಗಳು ನಡೆದವು. ಚರ್ಚೆಯ ಸಂದರ್ಭದಲ್ಲಿ ಒಂದು ಗುಂಪು ಭಾರತೀಯ ಪಾರಂಪರಿಕ ಶಿಕ್ಷಣದ ಪರವಾಗಿತ್ತು. ಮತ್ತೊಂದು ಗುಂಪು ಪಾಶ್ಚಾತ್ಯ ಶಿಕ್ಷಣದ ಪರವಾಗಿತ್ತು. ಈ ಎರಡು ಗುಂಪಿನವರು ಪ್ರಬಲವಾಗಿ ತಮ್ಮ ತಮ್ಮ ವಾದಗಳನ್ನು ಮಂಡಿಸಿದ

ಕಾರಣದಿಂದಾಗಿ ಈ ಸಮಸ್ಯೆ ಮತ್ತಷ್ಟು ಜಟಿಲಗೊಂಡಿತು. ಈ ಹಂತದಲ್ಲಿ ಕಲ್ಕತ್ತಾದಲ್ಲಿ ಸಂಸ್ಕೃತ ಕಾಲೇಜನ್ನು ಸ್ಥಾಪನೆ ಮಾಡುವ ಪ್ರಸ್ತಾಪಕ್ಕೆ ರಾಜಾರಾಮ್ ಮೋಹನರಾಯ್ ಅವರು ವಿರೋಧವನ್ನು ವ್ಯಕ್ತಪಡಿಸಿದರು. ಸಂಸ್ಕೃತ ಕಾಲೇಜಿನ ಬದಲಾಗಿ ಉದಾರವಾದಿ ಪ್ರಜ್ಞಾವಂತ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಬೇಕು. ಅದಕ್ಕಾಗಿ ಗಣಿತ, ರಸಾಯನಶಾಸ್ತ್ರ, ಅಂಗರಚನಾಶಾಸ್ತ್ರ ಮೊದಲಾದವುಗಳ ಕಲಿಕೆಗೆ ಶಿಕ್ಷಣ ಕ್ರಮದಲ್ಲಿ ಅವಕಾಶ ಕಲ್ಪಿಸಬೇಕೆಂದು ಕೋರಿ ಅವರು ೧೮೨೩ ಡಿಸೆಂಬರ್ ೧೧ ರಂದು ಗವರ್ನರ್ ಜನರಲ್ ಅವರಿಗೆ ಮನವಿಯೊಂದನ್ನು ಸಲ್ಲಿಸಿದರು. ಇದರ ಫಲವಾಗಿ ೧೮೩೩ರಲ್ಲಿ ಸಾರ್ವಜನಿಕ ಶಿಕ್ಷಣ ಸಮಿತಿಯು ಕೆಲವು ಇಂಗ್ಲಿಷ್ ಶಾಲೆಗಳನ್ನು ಆರಂಭಿಸಿತು.

ಈಸ್ಟ್ ಇಂಡಿಯಾ ಕಂಪನಿಯು ಸ್ಥಳೀಯರ ವಿದ್ಯಾಭ್ಯಾಸಕ್ಕೆ ಮೀಸಲಿಟ್ಟಿದ್ದ ಒಂದು ಲಕ್ಷ ರೂಪಾಯಿಗಳನ್ನು ಹೇಗೆ ಬಳಸಬೇಕು ಎನ್ನುವ ವಿಚಾರವಾಗಿ ಹತ್ತು ಜನರಿದ್ದ ಸಮಿತಿಯಲ್ಲಿ ಯಾವುದೇ ಒಮ್ಮತ ಅಭಿಪ್ರಾಯ ಮೂಡಲಿಲ್ಲ. ಈ ಎರಡು ಗುಂಪಿನವರು ತಮ್ಮ ತಮ್ಮ ವಾದಗಳನ್ನು ಲಿಖಿತ ರೂಪದಲ್ಲಿ ಗವರ್ನರ್ ಜನರಲ್ ಅವರಿಗೆ ಒಪ್ಪಿಸಿದರು. ಲಾರ್ಡ್ ಥಾಮಸ್ ಬ್ಯಾಬಿಂಗ್ಟನ್ ಮೆಕಾಲೆಯು ಭಾರತಕ್ಕೆ ಬಂದಾಗ – ಗವರ್ನರ್ ಜನರಲ್ ಆತನನ್ನು ಸಮಿತಿಯ ಅಧ್ಯಕ್ಷನಾಗಿ ನೇಮಿಸಿದನು. ಲಾರ್ಡ್ ಮೆಕಾಲೆಯು ಭಾರತೀಯರಿಗೆ ಯಾವ ಬಗೆಯ ಶಿಕ್ಷಣವನ್ನು ನೀಡಬೇಕೆಂಬ ಪ್ರಶ್ನೆಗೆ ಉತ್ತರವಾಗಿ ೧೮೩೫ ಫೆಬ್ರವರಿ ೨ ರಂದು ಒಂದು ಪರಿಪತ್ರವನ್ನು ಸಿದ್ಧಪಡಿಸಿದನು. ಅದು ಭಾರತೀಯರ ವಿದ್ಯಾಭ್ಯಾಸ ಕ್ರಮದಲ್ಲಿ ಗುರುತರವಾದ ಬದಲಾವಣೆಗೆ ಕಾರಣವಾದ 'ಮೆಕಾಲೆಯ ಟಿಪ್ಪಣಿ' ಎಂದು ಹೆಸರಾಯಿತು. ಆ ಟಿಪ್ಪಣಿಯು ಭಾರತೀಯ ಭಾಷೆಗಳು ಮೌಲ್ಯಯುತವಾಗಿಲ್ಲ, ಇಂಗ್ಲಿಷ್ ಎಲ್ಲ ದೃಷ್ಟಿಯಿಂದಲೂ ಸರ್ವ ಶ್ರೇಷ್ಠವಾದುದು. ಹಾಗಾಗಿ ಭಾರತೀಯರ ಅಭಿವೃದ್ಧಿಗೆ ಬೇಕಾದ ಶಿಕ್ಷಣವನ್ನು ಸ್ಥಳೀಯ ಭಾಷೆಗಳಿಗಿಂತ ಬೇರೊಂದು ಭಾಷೆಯ ಮೂಲಕ ನೀಡಬೇಕಾಗಿದೆ ಎನ್ನುವುದನ್ನು ಒತ್ತಿ ಹೇಳಿತು. ಈ ಮೆಕಾಲೆ ಟಿಪ್ಪಣಿಯನ್ನು ಲಾರ್ಡ್ ವಿಲಿಯಂ ಬೆಂಟಿಂಕ್ ಒಪ್ಪಿ ೧೮೩೫ ಮಾರ್ಚ್ ೨ ರಂದು ಸಹಿ ಮಾಡಿ ಇಂಗ್ಲಿಷ್ ಶಿಕ್ಷಣದ ಜಾರಿಗೆ ಕಾರಣನಾದನು. ಮುಂದೆ ಲಾರ್ಡ್ ಹಾರ್ಡಿಂಜನು ಸಾರ್ವಜನಿಕ ಉದ್ಯೋಗಗಳಲ್ಲಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಇಂಗ್ಲಿಷ್ ಶಿಕ್ಷಣ ಪಡೆದವರಿಗೆ ಹಾಗೂ ಕನಿಷ್ಠ ವಿದ್ಯಾರ್ಹತೆಯನ್ನು ಪಡೆದವರಿಗೆ ಆದ್ಯತೆ ನೀಡಬೇಕು ಎನ್ನುವ ಆದೇಶ ಹೊರಡಿಸಿದನು. ಈ ಎಲ್ಲ ಕಾರಣಗಳಿಂದಾಗಿ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಜಾರಿಗೆ ಬಂದು ಮನ್ನಣೆ ಗಳಿಸಿತು.

ಇಂಗ್ಲಿಷ್ ಶಿಕ್ಷಣವು ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಬದಲಾವಣೆಯನ್ನು ತಂದಿತು. ಶಾಲೆ ಕಾಲೇಜುಗಳಲ್ಲಿ ಶಿಕ್ಷಿತರಾದ ಯುವಕರ ಒಂದು ವರ್ಗ ಪಾಶ್ಚಾತ್ಯ ಶಿಕ್ಷಣದ ಕಾರಣದಿಂದಾಗಿ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದರು. ಇದರ

ಪರಿಣಾಮವಾಗಿ ಕೆಲ ತರುಣರು 'ಹಿಂದೂ' ಎಂಬುದೆಲ್ಲವೂ ತಿರಸ್ಕೃತವಾದವೆಂದು ಇಂಗ್ಲಿಷ್ ಸ್ವೀಕೃತವಾದುದೆಂದು ವಾದಿಸತೊಡಗಿದರು. ತರುಣರ ಆ ರೀತಿಯ ವರ್ತನೆಯನ್ನು ಗಮನಿಸಿ ಒಂದು ಕಾಲಕ್ಕೆ ಇಂಗ್ಲಿಷ್ ಶಿಕ್ಷಣಬೇಕೆಂದು ಒತ್ತಾಯಿಸಿದ ರಾಜರಾಮ್ ಮೋಹನರಾಯರೇ ದಿಗಿಲುಗೊಂಡರು.

ಒಂದೆಡೆ ಪಾಶ್ಚಾತ್ಯ ಜ್ಞಾನ, ವಿಜ್ಞಾನದ ಅರಿವಿಗೆ ಅವಕಾಶ ಮಾಡಿಕೊಟ್ಟ ಇಂಗ್ಲಿಷ್ ಶಿಕ್ಷಣವು ಕೆಲಮಟ್ಟಿಗೆ ಭಾರತೀಯ ತರುಣರು ಸ್ವಧರ್ಮ, ಸ್ವವಿಚಾರಗಳಿಂದ ವಿಮುಖರಾಗಲೂ ಕಾರಣವಾಯಿತು. ಭಾರತದ ಅನೇಕ ಸುಧಾರಕರು ಈ ಅಪಮೌಲ್ಯೀಕರಣದ ವಿರುದ್ಧ ದನಿ ಎತ್ತಿದರು. ಸ್ವಾಮಿ ವಿವೇಕಾನಂದ, ರವೀಂದ್ರನಾಥ ಠಾಕೂರ್, ಮಹಾತ್ಮಗಾಂಧಿ, ಶ್ರೀ ಅರವಿಂದರು ಈ ಮೊದಲಾದ ಚಿಂತಕರು ಇಂಗ್ಲಿಷ್ ಶಿಕ್ಷಣ ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಉಂಟುಮಾಡಿದ ಸಂಘರ್ಷದ ನೆಲೆಗಳನ್ನು ಗುರುತಿಸಿದ್ದಾರೆ. ನಮ್ಮ ದೇಶಕ್ಕೆ ಇಂಗ್ಲಿಷ್ ಶಿಕ್ಷಣದ ಮೂಲಕ ಏನನ್ನು ಪಡೆದುಕೊಳ್ಳಬೇಕು? ಎಷ್ಟನ್ನು ಪಡೆದುಕೊಳ್ಳಬೇಕು? ಎನ್ನುವ ಚಿಂತನೆಯನ್ನು ನಡೆಸಿದ್ದಾರೆ. ಈ ಜಿಜ್ಞಾಸೆ ಕಳೆದ ಒಂದು ಶತಮಾನದಿಂದ ನಡೆಯುತ್ತಲೇ ಬಂದಿದೆ. ಈ ವಸಾಹತು ಶಿಕ್ಷಣದಿಂದ ಏರ್ಪಟ್ಟ ಸಂಘರ್ಷಕ್ಕೆ ಚರಿತ್ರಕಾರರು ಹಾಗೂ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಕರು ಪ್ರತಿಕ್ರಿಯಿಸಿದಂತೆಯೆ ಬರಹಗಾರರೂ ತಮ್ಮ ಪತಿಕ್ರಿಯೆಗಳನ್ನು ದಾಖಲಿಸಿದ್ದಾರೆ. ಕನ್ನಡದ ಸಂದರ್ಭದಲ್ಲಿ 'ಕಾದಂಬರಿ ಸಾಹಿತ್ಯ' ನಿಖರ ರೂಪ ಪಡೆಯುತ್ತಿದ್ದ ಕಾಲಕ್ಕೆ ಆ ಕಾಲದ ಕಾದಂಬರಿಕಾರರು ತಮ್ಮ ಸಮಕಾಲೀನ ಬದುಕಿನಲ್ಲಿನ ಬಹು ಚರ್ಚಿತ ಸಂಗತಿಗಳನ್ನು ಕಾದಂಬರಿಗಳ ಕಥನದ ಭಾಗವಾಗಿಸಿಕೊಂಡಿರುವುದು ವೇದ್ಯವಾಗಿರುವ ಸಂಗತಿ. ಹೀಗೆ ಹೊಸ ಕಾಲದ ಶಿಕ್ಷಣ ಪದ್ಧತಿಯನ್ನು ಹತ್ತಿರದಿಂದ ಗಮನಿಸಿದ ಹಾಗೂ ಈ ಶಿಕ್ಷಣ ಪದ್ಧತಿಯಿಂದಲೇ ಅಕ್ಷರವಂತರಾದವರು ಅದನ್ನು ಪರಿಭಾವಿಸಿರುವ ಬಗೆಯನ್ನು ಈ ಅಧ್ಯಯನ ಶೋಧಿಸಲು ಪ್ರಯತ್ನಿಸಿದೆ.

ವಸಾಹತುಶಾಹಿಯ ಸಂಸ್ಕೃತಿಯು ಜಾರಿಗೊಳಿಸಿದ ಶಿಕ್ಷಣ ಪದ್ಧತಿಯ ಭಾಗವಾಗಿ ಸೃಷ್ಟಿಗೊಂಡ ವಿದ್ಯಾವಂತ ಸಮುದಾಯ ನಡೆದುಕೊಂಡ ಬಗೆಗಳನ್ನು ಹಾಗೂ ಆ ವಿದ್ಯಾವಂತ ಸಮುದಾಯದಿಂದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದುಕಿನಲ್ಲಿ ಉಂಟಾದ ಸಂಘರ್ಷಾತ್ಮಕ ನೆಲೆಗಳನ್ನು ಕನ್ನಡ ಸಂವೇದನೆ ಮುಖ್ಯ ವಿಚಾರವಾಗಿ ಚಿಂತಿಸಿದೆ. ಸಾಹಿತ್ಯದ ವಸ್ತುವನ್ನಾಗಿ ಸ್ವೀಕರಿಸಿ ವಿಶ್ಲೇಷಣೆಗೆ ಒಳಪಡಿಸಿದೆ. ಇಂಥ ಸಂಘರ್ಷಾತ್ಮಕ ನೆಲೆಗಳನ್ನು ಕನ್ನಡ ಲೇಖಕರು ವಿಭಿನ್ನ ನೆಲೆಗಳಲ್ಲಿ ಗಂಭೀರವಾಗಿ ಚಿಂತಿಸಿದ ಮಾದರಿಗಳು ಅನೇಕ. ಆಧುನಿಕ ಶಿಕ್ಷಣವನ್ನು ಪಡೆದ ಯುವ ಸಮುದಾಯದ ವರ್ತನೆಗಳು ಕಾಲಕಾಲಕ್ಕೆ ಭಿನ್ನ ಬಗೆಗಳಲ್ಲಿ ಸಾಹಿತ್ಯ ಪಠ್ಯಗಳಲ್ಲಿ ಕಥನವಾಗಿವೆ.

## ೧.೧ ಉದ್ದೇಶ

ಆಧುನಿಕ ಶಿಕ್ಷಣವನ್ನು ಪಡೆದ ಯುವ ಸಮುದಾಯದ ಆದರ್ಶ, ಪ್ರಭಾವ, ಪರಿಣಾಮಗಳು ಅನೇಕ. ಆ ಸಮುದಾಯ ನಮ್ಮ ಸಮಾಜದಲ್ಲಿ ನಡೆದುಕೊಂಡ ರೀತಿ ನೀತಿಗಳು ಹಲವು ಬಗೆಯವು. ಈ ಬಗೆಗಳಲ್ಲಿ ಆಧುನಿಕ ಶಿಕ್ಷಣಾರ್ಥಿಗಳು ನಡೆದುಕೊಂಡ ಕ್ರಮ, ಅದರ ಸಾಂಸ್ಕೃತಿಕ ಪ್ರಭಾವ, ಪರಿಣಾಮಗಳು ಕಾದಂಬರಿಗಳಲ್ಲಿ ಯಾವ ಬಗೆಗಳಲ್ಲಿ ಚಿತ್ರಿತವಾಗಿವೆ ಎಂಬುದು ಅಧ್ಯಯನಕ್ಕೆ ಕುತೂಹಲಕರವಾಗಿ ಕಂಡಿತು. ಆಯ್ದ ಕಾದಂಬರಿಗಳಲ್ಲಿ ವಸಾಹತು ಶಿಕ್ಷಣವನ್ನು ಪಡೆದ ವರ್ಗದ ಸ್ವಭಾವಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಪಾರಂಪರಿಕ ಶಿಕ್ಷಣ ಪದ್ಧತಿ ಮತ್ತು ವಸಾಹತುಶಾಹಿ ಶಿಕ್ಷಣಗಳ ಸಂಘರ್ಷ ಭಾರತೀಯ ಸಾಂಸ್ಕೃತಿಕ ಚರಿತ್ರೆಯಲ್ಲಿ ಮುಖ್ಯ ಸ್ಥಾನ ಪಡೆದಿದೆ. ಭಾರತೀಯ ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯು ಅನೇಕ ಸಮುದಾಯಗಳನ್ನು ಶಿಕ್ಷಣದಿಂದ ದೂರವಿಟ್ಟಿತ್ತು. ಅಲ್ಲದೇ ಅದು ತರತಮಗಳಿಂದ ಕೂಡಿದ್ದ ಶಿಕ್ಷಣ ವ್ಯವಸ್ಥೆಯಾಗಿತ್ತು. ಇದಕ್ಕೆ ಭಾರತೀಯ ಸಾಂಸ್ಕೃತಿಕ ಚರಿತ್ರೆಯ ಭಾಗಗಳಾದ ಪುರಾಣ ಕತೆಗಳಲ್ಲಿಯೇ ಆಧಾರಗಳು ದೊರೆಯುತ್ತವೆ. ಮಹಾಭಾರತ ಕಥನದ ಕರ್ಣ, ಏಕಲವ್ಯ, ಶಂಭೂಕ ಈ ಮೊದಲಾದವರ ಕಥನಗಳು ಪಾರಂಪರಿಕ ಶಿಕ್ಷಣ ವ್ಯವಸ್ಥೆಯಲ್ಲಿದ್ದ ತರತಮಗಳನ್ನು ನಿಚ್ಚಳವಾಗಿ ಬಿಂಬಿಸಿವೆ. ಅಂತಹ ಕ್ರೂರ ವ್ಯವಸ್ಥೆಯ ಪ್ರತಿಮೆಗಳಾಗಿ ಈ ಪುರಾಣ ಪಾತ್ರಗಳು ಚಿತ್ರಿತಗೊಂಡಿವೆ. ಈ ರೂಪಕಗಳು ಆಧುನಿಕ ಸಂದರ್ಭದಲ್ಲಿ ಮರು ಸೃಷ್ಟಿ ಪಡೆದಿವೆ. ಈ ಪಾತ್ರ ಮತ್ತು ಸನ್ನಿವೇಶಗಳನ್ನು ಪುನರ್ ಸೃಷ್ಟಿಸಿರುವ ಅನೇಕ ಕೃತಿಗಳನ್ನು ಗಮನಿಸಬಹುದಾಗಿದೆ. ಪಾರಂಪರಿಕ ಶಿಕ್ಷಣದಿಂದ ಉಂಟಾದ ಅಸಮಾನತೆಯ ನೆಲೆಗಳನ್ನು, ಜ್ಞಾನದ, ಅಧಿಕಾರದ ಸಂಘರ್ಷಾತ್ಮಕ ನೆಲೆಗಳನ್ನು ಭಾರತೀಯ ಸಾಹಿತ್ಯ ಹಾಗೂ ಆಧುನಿಕ ಕನ್ನಡ ಸಾಹಿತ್ಯ ನಿರಂತರವಾಗಿ ವಿಶ್ಲೇಷಿಸಿದೆ.

ಭಾರತದಲ್ಲಿ ಏಕರೂಪಿ ಶಿಕ್ಷಣ ವ್ಯವಸ್ಥೆಯು ಜಾರಿಗೆ ಬಂದದ್ದು, ಬ್ರಿಟಿಷರಿಗೆ ದೇಶದ ಮೇಲೆ ಹಿಡಿತ ಸಾಧಿಸುವ ಸಾಧನವಾಗಿಯೂ ಬಳಕೆಯಾಯಿತು. ಈ ಶಿಕ್ಷಣ ನೀತಿ ಅದುವರೆಗೂ ಭಾರತದಲ್ಲಿ ಜಾರಿಯಲ್ಲಿದ್ದ ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯನ್ನು ಪಲ್ಲಟಗೊಳಿಸಿತು. ಪರಿಣಾಮವಾಗಿ ಕೆಲವೇ ಸಮುದಾಯಗಳ ಸ್ವತ್ತಾಗಿದ್ದ ಶಿಕ್ಷಣ ಸಮಾಜದ ಎಲ್ಲ ವರ್ಗದವರ ಹಕ್ಕಾಗಿ ಮಾರ್ಪಟ್ಟಿತು. ಅದರಿಂದಾಗಿ ಅನೇಕ ತಳ ಸಮುದಾಯಗಳ ಯುವಕರು ಶಿಕ್ಷಿತರಾಗಲು ಸಾಧ್ಯವಾಯಿತು.

ಆಧುನಿಕ ಶಿಕ್ಷಣದ ಪರಿಣಾಮವಾಗಿ ಶಿಕ್ಷಣ ಪಡೆದ ತರುಣ ಸಮುದಾಯವು ಭಾರತೀಯ ಪರಿಸರದಲ್ಲಿ ಪರಂಪರಾಗತವಾಗಿ ರೂಢಿಯಿಂದ ನಡೆದುಕೊಂಡು ಬಂದ

ವರ್ಣ ವ್ಯವಸ್ಥೆ, ಸಹಗಮನ ಪದ್ಧತಿ, ಬಾಲ್ಯವಿವಾಹ, ಸ್ತ್ರೀ ಶಿಕ್ಷಣದ ನಿರಾಕರಣೆ, ಭೂ ಒಡೆತನದ ಪ್ರಶ್ನೆಗಳು, ಶಿಕ್ಷಣದ ಹಕ್ಕಿನ ಪ್ರಶ್ನೆಗಳು ಮೊದಲಾದ ಸಾಮಾಜಿಕ ಅನಿಷ್ಟಗಳನ್ನು ಪ್ರಶ್ನೆ ಮಾಡಿದರು. ಈ ವಿಚಾರಗಳ ಬಗ್ಗೆ ವ್ಯಾಪಕವಾದ ಚರ್ಚೆಗಳು ನಡೆದವು. ಹಿಂದೂ ಧರ್ಮದ ಈ ಬಗೆಯ ಸಾಮಾಜಿಕ ಅನಿಷ್ಟಗಳನ್ನು, ಸಾಮಾಜದ ಏಳಿಗೆಗೆ ತೊಡಕಾಗಿರುವ ಪದ್ಧತಿಗಳನ್ನು, ಮಾನವನಲ್ಲಿ ಭೇದವೆಣಿಸುವ ನಂಬಿಕೆಗಳನ್ನು ತೊಡೆದು ಹಾಕಬೇಕೆಂಬ ಜಾಗೃತಿ ಉಂಟಾಯಿತು. ನವ ಸುಧಾರಣಾ ಚಿಂತನಾ ಕ್ರಮಗಳನ್ನು ಜಾರಿಗೊಳಿಸುವುದನ್ನು ಒತ್ತಾಯಿಸಿ ರಾಷ್ಟ್ರವ್ಯಾಪ್ತಿ ಜಾಗೃತಿಯ ಆಂದೋಲನಗಳು ನಡೆದವು. ಇಂಥ ಪ್ರಶ್ನೆಗಳನ್ನು ಕನ್ನಡದ ಹಲವು ಲೇಖಕರು ತಮ್ಮ ಕೃತಿಗಳಲ್ಲಿ ಮುಖ್ಯ ಭಿತ್ತಿಯನ್ನಾಗಿಸಿಕೊಂಡಿದ್ದಾರೆ. ಸಾಮಾಜಿಕ ಮತ್ತು ರಾಜಕೀಯ ಹೋರಾಟಗಳ ಸಂದರ್ಭಗಳಲ್ಲಿ ಆ ಸಂಗತಿಗಳು ಚರ್ಚಿತಗೊಳ್ಳುವಂತೆ ಮಾಡಿದ್ದಾರೆ.

ಪರಂಪರಾಗತವಾದ ನಂಬಿಕೆ, ಆಚರಣೆಗಳನ್ನು ಮರುವಿಮರ್ಶೆ ಮಾಡಿ ಅದರೊಡನೆ ಬ್ರಿಟಿಷ್ ವಸಾಹತುಶಾಹಿಯ ಪರಿಣಾಮದಿಂದ ಜಾರಿಗೆ ಬಂದ ಆಧುನಿಕ ಚಿಂತನೆಗಳನ್ನು ವಿಮರ್ಶೆ ಮಾಡಲಾಯಿತು. ಆಧುನಿಕ ಶಿಕ್ಷಣ ಪಡೆದ ಯುವ ಸಮುದಾಯದ ಹುಸಿ ಆದರ್ಶಗಳನ್ನು ಹಾಗೂ ವರ್ತನೆಗಳನ್ನು ಆ ಕಾಲದ ಕನ್ನಡದ ಬರಹಗಾರರು ಸೂಕ್ಷ್ಮವಾಗಿ ವಿಶ್ಲೇಷಿಸಿದ್ದಾರೆ. ಸಾಂಪ್ರದಾಯಿಕ ಶಿಕ್ಷಣದಲ್ಲಿದ್ದ ತರತಮ ಭೇದ-ಭಾವ ಮತ್ತು ಕ್ರೌರ್ಯಗಳನ್ನು ಪ್ರಶ್ನಿಸಿದಂತೆ ಆಧುನಿಕ ಶಿಕ್ಷಣದ ಸ್ವೇಚ್ಛಾವರ್ತನೆಯ ಪರಿಣಾಮಗಳನ್ನು ಪರಾಮರ್ಶಿಸಿದ್ದಾರೆ.

ಈ ಚರ್ಚೆಗಳನ್ನು ಮುಂದುಮಾಡಿಕೊಂಡು ಶತಮಾನದ ಕನ್ನಡ ಸಾಹಿತ್ಯದಲ್ಲಿ ಆಯ್ದ ಕಾದಂಬರಿಗಳ ಪ್ರಾತಿನಿಧಿಕ ಪಾತ್ರಗಳ ವಿಶ್ಲೇಷಣೆಯ ಮೂಲಕ ಕನ್ನಡ ಕಾದಂಬರಿ ಜಗತ್ತು ಈ ವಸಾಹತು ಶಿಕ್ಷಣದ ಬಗ್ಗೆ ರೂಪಿಸಿರುವ ಸ್ವೀಕಾರ ಮತ್ತು ನಿರಾಕರಣೆಯ ಚಿಂತನೆಗಳ ವಿಶ್ಲೇಷಣೆ ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

### ೧.೨ ವ್ಯಾಪ್ತಿ

ಆಧುನಿಕ ಶಿಕ್ಷಣದ ಬಗೆಗಿನ ಜಿಜ್ಞಾಸೆ ಕಥೆ, ಕಾದಂಬರಿ, ಕಾವ್ಯ, ನಾಟಕ, ಪ್ರಬಂಧ ಮೊದಲಾದ ಹಲವು ಸಾಹಿತ್ಯ ಪ್ರಕಾರಗಳಲ್ಲಿ ವಿಶ್ಲೇಷಣೆಗೆ ಒಳಗಾಗಿದೆ. ಪ್ರಸ್ತುತ ಅಧ್ಯಯನದ ವಿಷಯದ ವ್ಯಾಪ್ತಿಯು ವಿಸ್ತಾರವಾದುದು. ಹೀಗೆ ವಿಶ್ಲೇಷಣೆಗೆ ಒಳಪಡಿಸಿದ ಸಾಹಿತ್ಯ ಪಠ್ಯಗಳು ಅಪಾರ ಸಂಖ್ಯೆಯಲ್ಲಿ ಪ್ರಕಟಗೊಂಡಿವೆ. ಹಾಗಾಗಿ ಈ ಅಧ್ಯಯನವನ್ನು ಆಯ್ದ ಕಾದಂಬರಿಗಳನ್ನು ಅನುಲಕ್ಷಿಸಿ ನಡೆಸಲಾಗಿದೆ. ಹೊಸಗನ್ನಡ ಕಾದಂಬರಿಯು ವಿಸ್ತಾರವಾದ ಸಾಹಿತ್ಯ ಪ್ರಕಾರ. ಆದ್ದರಿಂದ ನವೋದಯ ಪೂರ್ವ, ನವೋದಯ ಹಾಗೂ ನವ್ಯ ಕಾಲಘಟ್ಟದ ಪ್ರಾತಿನಿಧಿಕ ಕಾದಂಬರಿಗಳ ಅಧ್ಯಯನ ನಡೆಸಿ ವಸಾಹತು ಶಿಕ್ಷಣದ

ಬಗೆಗಿನ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯಾನಂತರದ ಲೇಖಕರ ಪ್ರತಿಕ್ರಿಯೆಯನ್ನು ನಿರ್ವಚಿಸುವ ಪ್ರಯತ್ನ ಮಾಡಲಾಗಿದೆ.

ಆಧುನಿಕ ಕನ್ನಡದ ಆರಂಭದ ಮೂರು ಕಾದಂಬರಿಗಳಾದ 'ಇಂದಿರಾಬಾಯಿ', 'ಇಂದಿರಾ' ಮತ್ತು 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಗಳನ್ನು ಅಧ್ಯಯನ ನಡೆಸಿ ವಸಾಹತು ಶಿಕ್ಷಣವನ್ನು ಕುರಿತು ನವೋದಯ ಪೂರ್ವದ ಚಿಂತನೆಗಳನ್ನು ವಿಶ್ಲೇಷಿಸಲಾಗಿದೆ. ಕುವೆಂಪು ಮತ್ತು ಕಾರಂತರ ಕಾದಂಬರಿಗಳಲ್ಲಿ ಶಿಕ್ಷಿತ ಪಾತ್ರಗಳ ಅಧ್ಯಯನದ ಮೂಲಕ ನವೋದಯದ ಚಿಂತನ ಕ್ರಮವನ್ನು ಅರ್ಥೈಸಲಾಗಿದೆ. ಲಂಕೇಶರ 'ಬಿರುಕು', ಅನಂತಮೂರ್ತಿಯವರ 'ಭಾರತೀಪುರ', ಪೂರ್ಣಚಂದ್ರ ತೇಜಸ್ವಿಯವರ 'ಕರ್ವಾಲೋ', ಶ್ರೀಕೃಷ್ಣ ಆಲನಹಳ್ಳಿ ಅವರ 'ಕಾಡು', 'ಪರಸಂಗದ ಗೆಂಡೆತಿಮ್ಮ' ಚಂದ್ರಶೇಖರ ಕಂಬಾರರ 'ಕರಿಮಾಯಿ' ಕಾದಂಬರಿಗಳ ಅಧ್ಯಯನದ ಮೂಲಕ ನವ್ಯ ಕಾದಂಬರಿಗಳ ಕಥನಗಳಲ್ಲಿ ನಿರ್ವಹಿಸಿರುವ ಶಿಕ್ಷಿತ ಪಾತ್ರಗಳ ಮೂಲಕ ಕಾದಂಬರಿಕಾರರ ನಿಲುವುಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಹೀಗೆ ನವೋದಯ ಪೂರ್ವ, ನವೋದಯ ಹಾಗೂ ನವ್ಯ ಪಂಥದ ಆಯ್ದ ಬರಹಗಾರರ ಆಯ್ದ ಕಾದಂಬರಿಗಳಲ್ಲಿ ವಸಾಹತುಶಾಹಿ ಶಿಕ್ಷಣ ಕ್ರಮದ ಬಗ್ಗೆ ತಾಳಿರುವ ನಿಲುವುಗಳನ್ನು ನಿರ್ವಚಿಸುವ ಪ್ರಯತ್ನವಾಗಿ ಈ ಅಧ್ಯಯನವನ್ನು ನಡೆಸಲಾಗಿದೆ. ಆಯ್ದ ಕಾದಂಬರಿಗಳ ವಿಶ್ಲೇಷಣೆಗೆ ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಮಿತಿಗೊಳಿಸಲಾಗಿದೆ.

### ೧.೩ ಸ್ವರೂಪ

ವಸಾಹತುಶಾಹಿಯ ಸ್ವರೂಪ, ಅದು ಭಾರತೀಯ ರಾಜಕೀಯ ಮತ್ತು ಸಾಂಸ್ಕೃತಿಕ ಪರಿಸರದ ಮೇಲೆ ಉಂಟುಮಾಡಿದ ಪರಿಣಾಮಗಳನ್ನು ಕುರಿತು ಈಗಾಗಲೇ ಹಲವು ಅಧ್ಯಯನಗಳು ನಡೆದಿವೆ. ಕನ್ನಡ ಸಾಹಿತ್ಯ ವಸಾಹತುಶಾಹಿ ಚಿಂತನೆಗೆ ತೆರೆದುಕೊಂಡ ಬಗೆ, ಅದರಿಂದ ಪಡೆದ ಪ್ರೇರಣೆ, ಅದರ ನಿಲುವುಗಳಿಗೆ ವ್ಯಕ್ತಪಡಿಸಿದ ಪ್ರತಿರೋಧ – ಈ ಬಗೆಯ ಚರ್ಚೆಗಳನ್ನು ಹಲವು ಕೃತಿಗಳು ಮಂಡಿಸಿವೆ. ವಸಾಹತುಶಾಹಿ ಎಂದರೇನು? ಅದರ ಸ್ವರೂಪ, ಲಕ್ಷಣಗಳು ಯಾವುವು? ಈ ಬಗೆಯ ಚಿಂತನೆ ಈಗಾಗಲೇ ಸಾಕಷ್ಟು ನಡೆದಿದೆ. ಆದ್ದರಿಂದ ಅದರ ವಿವರಣೆ ವಿಶ್ಲೇಷಣೆಗೆ ಹೋಗದೆ ಸಾಹಿತ್ಯ ಕೃತಿಗಳ ಅಧ್ಯಯನ ಹಾಗೂ ಅವುಗಳಲ್ಲಿ ಪ್ರಸ್ತುತ ವಿಷಯದ ವಿಶ್ಲೇಷಣೆಯ ಸಂದರ್ಭದಲ್ಲಿಯೇ ವಸಾಹತುಶಾಹಿ ನೀತಿ ಮತ್ತು ವಸಾಹತು ಶಿಕ್ಷಣದ ಸ್ವರೂಪ ಮತ್ತು ತಾತ್ವಿಕತೆಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕಾದಂಬರಿಗಳಲ್ಲಿ ಕಾದಂಬರಿಕಾರರು ರೂಪಿಸಿರುವ ಆಧುನಿಕ ಶಿಕ್ಷಣವನ್ನು ಪಡೆದ ಪಾತ್ರಗಳು ಹಾಗೂ ಆಧುನಿಕ ಶಿಕ್ಷಣವನ್ನು

ಪಡೆಯದ ಪಾತ್ರಗಳು, ಆ ಪಾತ್ರಗಳ ನಡುವಿನ ಭಿನ್ನತೆ ಮತ್ತು ಆ ಮೂಲಕ ವಸಾಹತು ಶಿಕ್ಷಣವನ್ನು ಕುರಿತಂತೆ ಕಾದಂಬರಿಕಾರರ ಧೋರಣೆಗಳನ್ನು ಗುರುತಿಸಲಾಗಿದೆ.

ಈ ಅಧ್ಯಯನವನ್ನು ಆರು ಅಧ್ಯಾಯಗಳಾಗಿ ವಿಭಜಿಸಿಕೊಳ್ಳಲಾಗಿದೆ. ಮೊದಲನೇ ಅಧ್ಯಾಯ **ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ**. ಕನ್ನಡದ ಇದುವರೆವಿಗಿನ ಸಾಹಿತ್ಯ ಸಂಶೋಧನೆಗಳಲ್ಲಿ ಶಿಕ್ಷಣ ಕುರಿತಂತೆ ಬರಹಗಾರರ ಚಿಂತನೆಗಳನ್ನು ಅವರ ಸೃಜನಶೀಲ ಕೃತಿಗಳ ಮೂಲಕ ಶೋಧಿಸುವ ಪ್ರಯತ್ನಗಳು ಅಷ್ಟಾಗಿ ನಡೆದಿಲ್ಲ. ಹಾಗಾಗಿ ಆಧುನಿಕ ಶಿಕ್ಷಣವನ್ನು ಕುರಿತ ವಿಚಾರಗಳನ್ನು ಶೋಧಿಸಿಕೊಳ್ಳಲಾಗಿದೆ.

ಎರಡನೇ ಅಧ್ಯಾಯ **ಇದುವರೆಗಿನ ಅಧ್ಯಯನದ ಸಮೀಕ್ಷೆ**. ಪ್ರಸ್ತುತ ಅಧ್ಯಯನ ವಿಷಯಕ್ಕೆ ಪೂರಕವಾದ ಪೂರ್ವ ಸಂಶೋಧನಾ ಸಾಹಿತ್ಯದ ಪರಾಮರ್ಶೆಯನ್ನು ನಡೆಸಲಾಗಿದೆ. ಅಲ್ಲದೇ ಪ್ರಸ್ತುತ ಅಧ್ಯಯನದ ಅವಶ್ಯಕತೆಯನ್ನು ನಿರೂಪಿಸಲಾಗಿದೆ.

ಮೂರನೇ ಅಧ್ಯಾಯ **ವಸಾಹತುಶಿಕ್ಷಣ : ರಾಷ್ಟ್ರೀಯ ಚಿಂತಕರ ಪ್ರತಿಕ್ರಿಯೆಗಳು**. ಈ ಅಧ್ಯಾಯದಲ್ಲಿ ಭಾರತದಲ್ಲಿ ವಸಾಹತು ಶಿಕ್ಷಣ ಜಾರಿಯಾದ ಚಾರಿತ್ರಿಕ ಘಟನೆ, ಅದರಿಂದುಂಟಾದ ಪರಿಣಾಮಗಳನ್ನು ವಿವರಿಸಲಾಗಿದೆ. ರಾಜರಾಮ್ ಮೋಹನರಾಯ್, ರವೀಂದ್ರನಾಥ ಠಾಕೂರ್, ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧಿ, ಶ್ರೀಅರವಿಂದರು, ರಾಮ ಮನೋಹರ ಲೋಹಿಯಾ ಈ ಚಿಂತಕರು ವಸಾಹತು ಶಿಕ್ಷಣ ಕುರಿತಂತೆ ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಕ್ರೂಢೀಕರಿಸಿ ಅವರ ನಿಲುವುಗಳನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೇ ಅಧ್ಯಾಯ **ಆಧುನಿಕ ಕನ್ನಡದ ಮೂರು ಕಾದಂಬರಿಗಳು**. ಈ ಅಧ್ಯಾಯದಲ್ಲಿ ವಸಾಹತು ಶಿಕ್ಷಣವು ಕಾದಂಬರಿಯ ರಚನೆಯ ಮೇಲೆ ಬೀರಿದ ಪ್ರಭಾವಗಳನ್ನು ಹಾಗೂ ಕನ್ನಡದ ಆರಂಭದ ಕಾದಂಬರಿಗಳ ಪ್ರೇರಣೆಗಳನ್ನು ಗುರುತಿಸಲಾಗಿದೆ. 'ಇಂದಿರಾಬಾಯಿ', 'ಇಂದಿರ', 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಗಳು ವಸಾಹತು ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆಗಳನ್ನು ನಿರ್ವಚಿಸಲಾಗಿದೆ.

ಭಾರತೀಯ ಸಾಹಿತ್ಯದ ಮೇಲೆ ಭಾವಗೀತೆ, ಸಣ್ಣಕತೆ, ಕಾದಂಬರಿಯಂತಹ ಪಾಶ್ಚಾತ್ಯ ಸಾಹಿತ್ಯ ಪ್ರಕಾರಗಳು ಪ್ರಭಾವಿಸಿದವು. ಆರಂಭದಲ್ಲಿ ಬಂಗಾಳಿ ಭಾಷೆಯ ಮೇಲಾದ ಈ ಪ್ರಭಾವಗಳು ಅನಂತರದಲ್ಲಿ ಇತರ ಭಾರತೀಯ ಭಾಷೆಗಳ ಮೇಲೂ ಉಂಟಾಯಿತು. ಪಾಶ್ಚಾತ್ಯ ಸಾಹಿತ್ಯದಿಂದ 'ಕಾದಂಬರಿ' ಪ್ರಕಾರವನ್ನು ಎರವಲು ಪಡೆಯಲಾಯಿತು. ಹತ್ತೊಂಬತ್ತನೇ ಶತಮಾನದ ಆರಂಭ ಕಾಲಕ್ಕೆ – 'ಇಂಗ್ಲಿಷ್ ಶಿಕ್ಷಣದಿಂದ ಆಧುನಿಕತೆ, ಅದರಿಂದ ಸಮಾಜದ ಉನ್ನತಿ' ಎನ್ನುವ ಸಿದ್ಧಾಂತದ ಹಿನ್ನಲೆಯಲ್ಲಿ ಕಾದಂಬರಿಗಳು ರಚಿತಗೊಂಡವು. ಯುರೋಪಿನ ವಾಸ್ತವವಾದದ ಪರಿಕಲ್ಪನೆಯ ಮಾದರಿಗಳನ್ನು ಅನುಸರಿಸಿ ಭಾರತೀಯ 'ಕಾದಂಬರಿ' ಪ್ರಕಾರ ರೂಪುಗೊಂಡ ವಿವರಗಳನ್ನು ಹಲವು ಅಧ್ಯಯನಗಳು ನಡೆಸಿವೆ.

ರಾಷ್ಟ್ರೀಯತೆಯ ಆಶಯಗಳು, ಪಾಶ್ಚಿಮಾತ್ಯ ಸುಧಾರಣೆಯ ತತ್ವಗಳು, ಸ್ತ್ರೀ ಶಿಕ್ಷಣ, ವಿಧವಾ ವಿವಾಹ ಮತ್ತು ಬಾಲ್ಯ ವಿವಾಹದ ನಿಷೇಧ – ಈ ಸಂಗತಿಗಳು ಕನ್ನಡದ ಆರಂಭದ ಕಾದಂಬರಿಗಳನ್ನು ಪ್ರೇರೇಪಿಸಿವೆ. ಚಿಕ್ಕ ವಯಸ್ಸಿಗೆ ವಿಧವೆಯಾಗುವ ಇಂದಿರಾಬಾಯಿಯು ಸಮಾಜ ಸುಧಾರಕ ಅಮೃತರಾಯ ಹಾಗೂ ಆತನ ಹೆಂಡತಿ ಜಲಜಾಕ್ಷಿಯರ ಸಹಕಾರದಿಂದ ಶಿಕ್ಷಣ ಪಡೆಯುತ್ತಾಳೆ. ಆಧುನಿಕ ಶಿಕ್ಷಣ ಪಡೆದು ಕಮಲಾಪುರಕ್ಕೆ ಅಸಿಸ್ಟೆಂಟ್ ಕಮಿಷನರ್ ಆಗುವ ಭಾಸ್ಕರರಾಯನನ್ನು ಮದುವೆಯಾಗುತ್ತಾಳೆ. ವಿಧವಾ ವಿವಾಹದಂಥ ಸಾಮಾಜಿಕ ಸಮಸ್ಯೆಯನ್ನು ಚರ್ಚಿಸಿರುವ ಈ ಕಥನವು ಆಧುನಿಕ ಶಿಕ್ಷಣ ಪದ್ಧತಿಯ ಬಗ್ಗೆ ಪರ ಹಾಗೂ ವಿರುದ್ಧವಾದ ನಿಲುವುಗಳನ್ನು ಪ್ರಕಟಿಸುತ್ತಲೇ ಶಿಕ್ಷಣದ ಸಾರ್ಥಕತೆಯನ್ನು ನಿರೂಪಿಸುತ್ತದೆ.

'ಇಂದಿರಾಬಾಯಿ' ಕಾದಂಬರಿಯಲ್ಲಿ 'ಇಂಗ್ಲಿಷ್ ಶಿಕ್ಷಣ'ವು ಧರ್ಮ ಸಂಘರ್ಷದ ವಿಷಯವಾಗಿ ನಿರೂಪಿತಗೊಂಡಿದೆ. ಭೀಮರಾಯ ಮತ್ತು ಅಂಬಾಬಾಯಿಯಂತಹ ಪಾತ್ರಗಳು 'ಇಂಗ್ಲಿಷ್' ಕಲಿಕೆಯಿಂದ ಜಾತಿ ಕೆಟ್ಟು ಹೋಗುತ್ತದೆ ಎಂದು ನಂಬಿಕೊಂಡಿವೆ. ಕಮಲಾಪುರದ ಧಾರ್ಮಿಕ ಗುರು ಇಂಗ್ಲಿಷ್ ಶಿಕ್ಷಣವು ಮನುಷ್ಯನನ್ನು ಕಡುಭ್ರಷ್ಟಗೊಳಿಸುವ ಸಾಧನವಾಗಿದೆ ಎಂದು ತಿಳಿದಿದ್ದಾನೆ. ಹೀಗೆ ಸಮಾಜದ ಒಂದು ವರ್ಗ ಇಂಗ್ಲಿಷ್ ಶಿಕ್ಷಣ ಭಾರತೀಯ ಪರಂಪರೆಯನ್ನು ಅಪಮೌಲ್ಯಗೊಳಿಸುವ ತಂತ್ರಗಾರಿಕೆ ಎಂದು ಭಾವಿಸುತ್ತದೆ.

ಸ್ತ್ರೀ ಶಿಕ್ಷಣದ ಅವಶ್ಯಕತೆಯನ್ನು ಬಿಂಬಿಸುವ ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಕಾದಂಬರಿಯಲ್ಲಿಯೂ ಇಂಗ್ಲಿಷ್ ಶಿಕ್ಷಣವು ವ್ಯಕ್ತಿತ್ವವನ್ನು ನಾಶಪಡಿಸುವ ಸಾಧನ ಎನ್ನುವ ಅಭಿಪ್ರಾಯ ವ್ಯಕ್ತವಾಗಿದೆ. 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯಲ್ಲಿ ಪಂತರ ನಾರಪ್ಪನ ಅತಿಯಾದ ಬೆತ್ತದ ಶಿಕ್ಷೆಯಿಂದಾಗಿ ಹೆದರಿಕೊಂಡ ಮಕ್ಕಳು ಶಿಕ್ಷಣದಿಂದ ವಿಮುಖರಾಗುತ್ತಾರೆ. ಇಂಥ ಸಂದರ್ಭದಲ್ಲಿ ಸದಾಶಿವ ದೀಕ್ಷಿತರು ಕಲಿಸುವ ಕ್ರಮದ ಬಗ್ಗೆ ಪಂತರ ನಾರಪ್ಪನಿಗೆ ಬುದ್ಧಿವಾದ ಹೇಳುತ್ತಾರೆ. ಸಾಂಪ್ರದಾಯಿಕ ಶಿಕ್ಷಣ ಪದ್ಧತಿಯಲ್ಲಿ ದಂಡನೆಯ ಮೂಲಕ ಮಕ್ಕಳಿಗೆ ಕಲಿಸುವ ಕ್ರಿಯೆಯಿಂದ ಆಗುವ ಅನಾಹುತಗಳ ವಿಶ್ಲೇಷಣೆ ಇದೆ.

ಆರಂಭಕಾಲದ ಈ ಮೂರು ಕಾದಂಬರಿಗಳಲ್ಲಿ ಹೊಸ ಶಿಕ್ಷಣವನ್ನು ಕುರಿತ ಜಿಜ್ಞಾಸೆ, ಹೊಸ ಶಿಕ್ಷಣದ ಸ್ವೀಕಾರ ಮತ್ತು ನಿರಾಕರಣೆಯ ಪ್ರಶ್ನೆಗಳು, ಸಮಾಜ ಮತ್ತು ಕುಟುಂಬ ವ್ಯವಸ್ಥೆಯಲ್ಲಿ ಹೊಸ ಶಿಕ್ಷಣವನ್ನು ಪಡೆದ ಸಮುದಾಯದ ವರ್ತನೆಗಳು ಯಾವ ಬಗೆಯವು ಎಂಬುದನ್ನು ಅಧ್ಯಯನ ಮಾಡಲಾಗಿದೆ. ವಸಾಹತು ಶಿಕ್ಷಣದ ಜಾರಿಯ ಬಗ್ಗೆ ಆತಂಕ ವ್ಯಕ್ತಪಡಿಸಿದರೂ ಬದಲಾದ ಕಾಲಕ್ಕೆ ಈ ಶಿಕ್ಷಣ ಪದ್ಧತಿ ಅವಶ್ಯಕ ಎಂಬುದನ್ನು ಒಪ್ಪಿಕೊಳ್ಳುತ್ತವೆ. ಅದರೊಂದಿಗೆ ಪರಂಪರಾಗತವಾಗಿ ಸಾಗಿ ಬಂದ

ಧಾರ್ಮಿಕ ಮತ್ತು ಸಾಮಾಜಿಕ ನಂಬಿಕೆಗಳಿಗೆ ಈ ಶಿಕ್ಷಣ ಧಕ್ಕೆ ಉಂಟುಮಾಡಬಾರದು ಎಂದು ಬಯಸುತ್ತವೆ. ಹೀಗಾಗಿ ಗುಲ್ವಾಡಿ ವೆಂಕಟರಾಯರು, ಕೆರೂರು ವಾಸುದೇವಾಚಾರ್ಯರು ಮತ್ತು ಎಂ.ಎಸ್, ಪುಟ್ಟಣ್ಣನವರು ಹಿಂಜರಿಕೆಯಿಂದಲೇ ವಸಾಹತು ಶಿಕ್ಷಣವನ್ನು ಒಪ್ಪಿಕೊಂಡಿರುವುದನ್ನು ಗುರುತಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಐದನೇ ಅಧ್ಯಾಯ **ನವೋದಯ ಪಂಥದ ಆಯ್ದ ಕಾದಂಬರಿಗಳು** ಈ ಅಧ್ಯಾಯದಲ್ಲಿ ಕುವೆಂಪು ಮತ್ತು ಶಿವರಾಮ ಕಾರಂತರ ಕಾದಂಬರಿಗಳ ಅಧ್ಯಯನ ನಡೆಸಿ ವಸಾಹತು ಶಿಕ್ಷಣ ಕುರಿತು ಈ ಇಬ್ಬರು ಬರಹಗಾರರ ಚಿಂತನೆಗಳನ್ನು ಗ್ರಹಿಸಲಾಗಿದೆ. ಅದಕ್ಕೆ ಪೂರಕವಾಗಿ ಕುವೆಂಪು ಮತ್ತು ಕಾರಂತರ ಶೈಕ್ಷಣಿಕ ಬರಹಗಳ ವಿಚಾರಗಳನ್ನು ತೌಲನಿಕವಾಗಿ ನೋಡಲಾಗಿದೆ. ಈ ಇಬ್ಬರು ಕನ್ನಡ ನವೋದಯ ಸಂದರ್ಭದ ಬಹುಮುಖ್ಯ ಬರಹಗಾರರು. ತಮ್ಮ ಬದುಕು ಮತ್ತು ಬರಹಗಳಿಂದ ಕನ್ನಡಿಗರಲ್ಲಿ ವೈಚಾರಿಕತೆಯನ್ನು ಬೆಳೆಸುವ ಪ್ರಯತ್ನ ಮಾಡಿದವರು. 'ಕನ್ನಡದ ಕಾದಂಬರಿ' ಸಂದರ್ಭದಲ್ಲಿ ಈ ಇಬ್ಬರು ಬರಹಗಾರರ ಕೊಡುಗೆ ಅಮೂಲ್ಯವಾದುದು.

ಕುವೆಂಪು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮಲೆನಾಡಿನ ಮೂಲೆಗೆ ಆಧುನಿಕ ವಿಚಾರಧಾರೆಗಳು, ಚಿಂತನಕ್ರಮಗಳು ಹಾಗೂ ಆಧುನಿಕತೆಯ ಯಂತ್ರಗಳು ಪ್ರವೇಶ ಪಡೆದ ಚಾರಿತ್ರಿಕ ಸಂಗತಿಗಳನ್ನು ನಿರೂಪಿಸಿದ್ದಾರೆ. ಮತಾಂತರದ ಉದ್ದೇಶದಿಂದ ಮಲೆನಾಡಿನ ಹಳ್ಳಿಗಳಿಗೆ ಬಂದ ಕ್ರೈಸ್ತ ಪಾದ್ರಿಗಳು ಜನರನ್ನು ಆಕರ್ಷಿಸುವುದಕ್ಕಾಗಿ ಸ್ಕೂಲು ಮತ್ತು ಆಸ್ಪತ್ರೆಯಂತಹ ಆಧುನಿಕ ವ್ಯವಸ್ಥೆಗಳನ್ನು ಕಾರ್ಯರೂಪಕ್ಕೆ ತರುತ್ತಾರೆ. ಕಾದಂಬರಿಯ ಹಲವು ಸನ್ನಿವೇಶಗಳಲ್ಲಿ ಪಾದ್ರಿ ಜೀವರತ್ನಯ್ಯನ ಮತಾಂತರದ ಕ್ರಿಯೆಯನ್ನು ಪ್ರತಿರೋಧಿಸಿದ ಆ ಕಾಲಮಾನದ ಮಲೆನಾಡಿನ ಜನ ಸ್ಕೂಲು ಮತ್ತು ಆಸ್ಪತ್ರೆಯಂತಹ ಆಧುನಿಕ ವ್ಯವಸ್ಥೆಗಳನ್ನು ಸ್ವಾಗತಿಸುತ್ತಾರೆ. ಸಾಂಪ್ರದಾಯಿಕ ಶಿಕ್ಷಣ ನೀತಿಯಿಂದಾಗಿ ನಿರಾಸೆಗೊಂಡಿದ್ದ ಇವರಿಗೆ 'ಸ್ಕೂಲು' ಹೊಸ ಬೆಳಕಿನಂತೆ ಗೋಚರಿಸುತ್ತದೆ. ಇಂತಹ ಸ್ಕೂಲಿನ ಕಾರಣದಿಂದಾಗಿ ಅಕ್ಷರ ಕಲಿತ ತಲೆಮಾರಿನ ಕಥನವಾಗಿ 'ಕಾನೂರು ಹೆಗ್ಗಡಿತಿ' ಕಾದಂಬರಿಯನ್ನು ಅರ್ಥೈಸಿಕೊಳ್ಳಲಾಗಿದೆ.

ಹೂವಯ್ಯ ಮತ್ತು ರಾಮಯ್ಯ ಮೈಸೂರಿನಲ್ಲಿ ಶಿಕ್ಷಣ ಪಡೆದು ಮಲೆನಾಡಿಗೆ ಹಿಂದಿರುಗಿ ತಮ್ಮದೇ ಆದ ಕಾರಣಗಳಿಂದಾಗಿ ಕಾನೂರಿನಲ್ಲಿಯೇ ಉಳಿಯುತ್ತಾರೆ. ಈ ಇಬ್ಬರು ಶಿಕ್ಷಿತ ತರುಣರ ಆಗಮನವೇ ಕಾನೂರಿಗೆ ಆಧುನಿಕತೆಯ ಆಗಮನದಂತೆ ಗೋಚರವಾಗುತ್ತದೆ. ಹೂವಯ್ಯ ಇಂಗ್ಲಿಷ್ ಶಿಕ್ಷಣದಿಂದ ದೊರೆತ ಹೊಸ ಜ್ಞಾನದ ಪ್ರತಿನಿಧಿಯಾಗಿ ಚಿತ್ರಿತನಾಗಿದ್ದಾನೆ. ಮತ್ತೊಂದೆಡೆ ಈ ಶಿಕ್ಷಣ ವ್ಯವಸ್ಥೆಯ ವೈಫಲ್ಯದಂತೆ ರಾಮಯ್ಯನ ಪಾತ್ರ ನಿರೂಪಿತಗೊಂಡಿದೆ. 'ಮಲೆಗಳಲ್ಲಿ ಮದುಮಗಳು' ಕಥನದ ಕಾಲಕ್ಕೆ 'ಬಿಡುಗಡೆಯ ಭಾಗ್ಯ'ದಂತೆ ಗೋಚರವಾಗುವ ಆಧುನಿಕ ಶಿಕ್ಷಣ ಕ್ರಮ 'ಕಾನೂರು ಹೆಗ್ಗಡಿತಿ'ಯ ಕಥನದ ಕಾಲಕ್ಕೆ ಅದರ ಸಾಧಕ – ಬಾಧಕಗಳನ್ನು ವಿಶ್ಲೇಷಣೆ ಮಾಡುವ

ಹಂತಕ್ಕೆ ತಲುಪುತ್ತದೆ. ಹೀಗೆ ಕುವೆಂಪು ಮಲೆನಾಡಿನ ಜೀವನಕ್ರಮದಲ್ಲಿ ವಸಾಹತುಶಾಹಿಯ ಶಿಕ್ಷಣಕ್ರಮಕ್ಕೆ ಮುಖಾಮುಖಿಯಾಗಿರುವುದನ್ನು ಗುರುತಿಸಲಾಗಿದೆ.

ಶಿವರಾಮ ಕಾರಂತರ 'ಮರಳಿ ಮಣ್ಣಿಗೆ', 'ಬೆಟ್ಟದ ಜೀವ', 'ಸರಸಮ್ಮನ ಸಮಾಧಿ' ಮತ್ತು 'ಮೂಕಜ್ಜಿಯ ಕನಸುಗಳು' – ಈ ಕಾದಂಬರಿಗಳು ನಿಚ್ಚಳವಾಗಿ ವಸಾಹತು ಶಿಕ್ಷಣದ ವೈಫಲ್ಯಗಳನ್ನು ಎತ್ತಿ ಹಿಡಿದಿವೆ. ಮೂರು ತಲೆಮಾರಿನ ಕಥನವಾದ 'ಮರಳಿ ಮಣ್ಣಿಗೆ' ಕಾದಂಬರಿಯ ರಾಮ ಐತಾಳರಿಗೆ ತಮ್ಮ ಮಗನಿಗೆ ವೈದಿಕ ವೃತ್ತಿಗೆ ಬದಲಾಗಿ ಇಂಗ್ಲಿಷ್ ಶಿಕ್ಷಣ ಕೊಡಿಸಬೇಕೆಂಬ ಅಭಿಲಾಷೆಯುಂಟಾಗುತ್ತದೆ. ಇದರ ಫಲವಾಗಿ ಬಿ.ಎಲ್. ಓದುವ ಲಚ್ಚ (ಲಕ್ಷ್ಮೀನಾರಾಯಣ) ನಗರದ ಮೋಹಕ್ಕೆ ಸಿಲುಕಿ ಬದುಕನ್ನು ನಾಶಮಾಡಿಕೊಳ್ಳುತ್ತಾನೆ. ಅವನ ಮಗ ರಾಮ ವಿದ್ಯಾವಂತನಾದರೂ ತನ್ನ ಓದಿಗೆ ತಕ್ಕುದಾದ ಕೆಲಸ ಸಿಗದೆ ಪರಿತಪಿಸಿ ಮತ್ತೆ ಕೊಡಿಯಾಲಕ್ಕೆ ವಾಪಸ್ಸು ಬರುತ್ತಾನೆ. ಹೀಗೆ ಕಾರಂತರು ಪಶ್ಚಿಮ ಘಟ್ಟದ ನಗರ ಹಾಗೂ ಹಳ್ಳಿಗಳಲ್ಲಿ ಇಂಗ್ಲಿಷ್ ಶಿಕ್ಷಣದಿಂದ ಉಂಟಾದ ಪರಿಣಾಮಗಳನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. 'ಬೆಟ್ಟದ ಜೀವ' ಕಾದಂಬರಿಯ ಗೋಪಾಲಯ್ಯನ ಮಗ 'ಶಂಭೂ' ಕೂಡ ಹೆಚ್ಚಿಗೆ ಓದಿಕೊಂಡಿದ್ದರಿಂದ ಮನೆ ಬಿಟ್ಟು ಹೋದ ಎನ್ನುವ ಅಭಿಪ್ರಾಯ ಕಾದಂಬರಿಯಲ್ಲಿ ವ್ಯಕ್ತಗೊಂಡಿದೆ. 'ಸರಸಮ್ಮನ ಸಮಾಧಿ'ಯ ಅಣ್ಣಪ್ಪಕಮ್ತಿಯ ಹೆಂಡತಿ ತಾನು ಇಂಗ್ಲಿಷ್ ಕಲಿತದ್ದೇ ದಾಂಪತ್ಯದ ವಿರಸಕ್ಕೆ ಕಾರಣ ಎಂದು ಕೊಂಡಿದ್ದಾಳೆ. 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಸೀತೆಗೆ ಇಂಗ್ಲಿಷ್ ಕಲಿಯುವುದು ಧರ್ಮ ಬಾಹಿರವಾದುದು ಎನಿಸುತ್ತದೆ. ಕುವೆಂಪು ಮತ್ತು ಶಿವರಾಮಕಾರಂತರು ವಸಾಹತು ಶಿಕ್ಷಣದ ಬಗ್ಗೆ ತಳೆದ ನಿಲುವನ್ನು ಅವರ ಕಾದಂಬರಿಗಳ ಪಾತ್ರಗಳ ಅಧ್ಯಯನದಿಂದ ಕಂಡುಕೊಳ್ಳಲು ಪ್ರಯತ್ನಿಸಲಾಗಿವೆ. ಈ ರೀತಿಯಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡದ ಬರಹಗಾರರು ವಸಾಹತು ಶಿಕ್ಷಣದ ಬಗ್ಗೆ ಹೊಂದಿದ್ದ ನಿಲವುಗಳನ್ನು ಚರ್ಚಿಸಲಾಗಿದೆ.

ಆರನೇ ಅಧ್ಯಾಯ **ನವ್ಯ ಪಂಥದ ಆಯ್ದ ಕಾದಂಬರಿಗಳು** ವಸಾಹತು ಶಿಕ್ಷಣದ ಪ್ರತಿನಿಧಿಗಳಾದ ಹಾಗೂ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದಿಂದ ಪ್ರಭಾವಿತರಾದ ನವ್ಯ ಸಾಹಿತಿಗಳು ಈ ಶಿಕ್ಷಣ ಕ್ರಮವನ್ನು ಪರಿಭಾವಿಸಿರುವ ಬಗೆಯನ್ನು ಅರಿಯುವ ಉದ್ದೇಶದಿಂದ 'ಬಿರುಕು', 'ಭಾರತೀಪುರ', 'ಕರ್ವಾಲೋ', 'ಕಾಡು', 'ಪರಸಂಗದ ಗೆಂಡೆತಿಮ್ಮ' ಮತ್ತು 'ಕರಿಮಾಯಿ' ಕಾದಂಬರಿಗಳನ್ನು ಅಧ್ಯಯನ ನಡೆಸಲಾಗಿದೆ.

ನವ್ಯ ಕಾಲಕ್ಕೆ ಭಾರತಕ್ಕೆ ತನ್ನದೇಯಾದ ಶಿಕ್ಷಣದ ಕ್ರಮವಿರಬೇಕು ಎನ್ನುವ ಚಿಂತನೆಗಳು ಬಲವಾಗಿ ಬೆಳೆದವು. 'ಬಿರುಕು' ಕಾದಂಬರಿಯ 'ಬಸವರಾಜ' ಪಿಎಚ್.ಡಿ. ಪದವಿ ಪಡೆಯಲು ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆಯುತ್ತಾನೆ. ಆತ ಹಲವು ಗೊಂದಲಗಳಲ್ಲಿ ಸಿಲುಕುತ್ತಾನೆ. 'ಭಾರತೀಪುರ'ದ 'ಜಗನ್ನಾಥ' ವಿದೇಶದಲ್ಲಿ ಶಿಕ್ಷಣ ಪಡೆದುಕೊಂಡು ಬಂದವನು 'ಭಾರತೀಪುರ'ವನ್ನು ಮೌಢ್ಯದಿಂದ ಮುಕ್ತಿಗೊಳಿಸುತ್ತೇನೆಂದು

ಪ್ರಯತ್ನಿಸಿ ಸೋಲುತ್ತಾನೆ. 'ಕರ್ವಾಲೊ' ಕಾದಂಬರಿಯಲ್ಲಿ ಸಸ್ಯ ವಿಜ್ಞಾನಿ ಕರ್ವಾಲೊ ಮತ್ತು ಅನಕ್ಷರಸ್ಥ ಮಂದಣ್ಣ ಈ ಇಬ್ಬರಲ್ಲಿ ಯಾರ ತಿಳಿವು ಮಹತ್ವದ್ದು ಎನ್ನುವ ಜಿಜ್ಞಾಸೆಗಳು ಚರ್ಚಿತಗೊಂಡಿವೆ. 'ಕಾಡು' ಕಾದಂಬರಿಯ ಕಿಟ್ಟಿ ಶಾಲೆಗೆ ಹೋಗುವುದನ್ನು ನಿರಾಕರಿಸುತ್ತಾನೆ. 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯ ಶಾಲಾ ಮಾಸ್ತರ ಶಿವಣ್ಣ ಗೆಂಡೆತಿಮ್ಮನ ಹೆಂಡತಿ ಮರಂಕಿಯೊಂದಿಗೆ ಅನೈತಿಕ ಸಂಬಂಧ ಬೆಳೆಸಿ ಗೆಂಡೆತಿಮ್ಮ ಮತ್ತು ಮರಂಕಿಯರ ಬದುಕಿನ ನಾಶಕ್ಕೆ ಕಾರಣವಾಗುತ್ತಾನೆ. 'ಕರಿಮಾಯಿ' ಕಾದಂಬರಿಯಲ್ಲಿ ಬಿ.ಎ, ಎಲ್. ಎಲ್. ಬಿ, ಓದಿಕೊಂಡ ಗುಡಸೀಕರ ಶಿವಾಪುರದ ಹಲವು ತಲ್ಲಣಗಳಿಗೆ ಕಾರಣವಾಗುತ್ತಾನೆ. ಆ ಕಾಲಮಾನದ ಬರಹಗಾರರ ಶಿಕ್ಷಣದ ಬಗೆಗಿನ ನಿಲುವುಗಳು ಯಾವ ಬಗೆಯವು ಎಂಬುದನ್ನು ಅವರುಗಳು ತಮ್ಮ ಕಾದಂಬರಿಗಳ ಪಾತ್ರ ಪೋಷಣೆಯಲ್ಲಿ ತೆಗೆದುಕೊಂಡ ನಿರ್ಧಾರಗಳಿಂದ ಗ್ರಹಿಸುವ ಮೂಲಕ ಅವರ ಪ್ರತಿಕ್ರಿಯೆಗಳನ್ನು ವಿಶ್ಲೇಷಿಸಲಾಗಿದೆ. ಹೀಗೆ ಸ್ವಾತಂತ್ರ್ಯಾನಂತರದಲ್ಲಿ ಕನ್ನಡದ ಬರಹಗಾರರು ಇಂಗ್ಲಿಷ್ ಶಿಕ್ಷಣ ಪದ್ಧತಿಯ ಬಗ್ಗೆ ಹೊಂದಿದ್ದ ಅಭಿಪ್ರಾಯಗಳನ್ನು ವಿಶ್ಲೇಷಣೆ ಮಾಡಲಾಗಿದೆ.

'ಸಮಾರೋಪ'ದಲ್ಲಿ ಅಧ್ಯಯನದ ಫಲಿತಗಳನ್ನು ವಿವರಿಸಲಾಗಿದೆ. ಅನುಬಂಧದಲ್ಲಿ 'ಮೆಕಾಲೆ ಪರಿಪತ್ರ'ದ ಕನ್ನಡ ಅನುವಾದವನ್ನು ನೀಡಲಾಗಿದೆ. ಇದು ಮುಂದೆ ಅಧ್ಯಯನ ಮಾಡುವವರಿಗೆ ಸಹಕಾರಿಯಾಗಬಹುದೆಂದು ನಂಬಲಾಗಿದೆ. ಅಲ್ಲದೆ ಆಯ್ದ ನಾಟಕಗಳ ಶಿಕ್ಷಣ ಚಿಂತನೆಗಳು ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ್ದರಿಂದ ಅನುಬಂಧದಲ್ಲಿ ನೀಡಲಾಗಿದೆ.

**೧.೪ ವಿಧಾನ**

ಈ ಅಧ್ಯಯನ ವಸ್ತು ಕೇಂದ್ರಿತವಾದದ್ದು. ಸಾಹಿತ್ಯದಲ್ಲಿ ಶಿಕ್ಷಣ ಕುರಿತ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಸಂಘರ್ಷಾತ್ಮಕ ನೆಲೆಗಳನ್ನು ಮುಖ್ಯವಾಗಿ ಗಮನಿಸಲಾಗಿದೆ. ವಿಷಯಕ್ಕೆ ಅಗತ್ಯವಾದ ಮಾಹಿತಿಗಳನ್ನು ಸಂಗ್ರಹಿಸಿ ಅವುಗಳನ್ನು ವಿಶ್ಲೇಷಣಾತ್ಮಕ ವಿಧಾನದಿಂದ ಅಧ್ಯಯನ ಮಾಡಲಾಗಿದೆ. ವಿಷಯಕ್ಕೆ ಪೂರಕವಾದ ವಿಚಾರಗಳ ಶೋಧನೆ ಮತ್ತು ತೌಲನಿಕ ಅಧ್ಯಯನ ನಡೆಸಲಾಗಿದೆ.

ಮಾಹಿತಿ ಸಂಗ್ರಹಣೆ, ಅವುಗಳ ವಿಶ್ಲೇಷಣೆ, ಆ ವಿಚಾರಗಳ ತಾತ್ವಿಕತೆಯನ್ನು ಗುರುತಿಸಿ ಆ ಮೂಲಕ ವಸಾಹತು ಶಿಕ್ಷಣ ಪದ್ಧತಿಗೆ ಕನ್ನಡ ಸಾಹಿತ್ಯದ ಕೆಲವು ಕಾದಂಬರಿಕಾರರು ತಮ್ಮ ಪಠ್ಯಗಳಲ್ಲಿ ತೋರಿದ ಪ್ರತಿಕ್ರಿಯೆ ಯಾವ ಬಗೆಯದು ಎಂಬುದನ್ನು ನಿರೂಪಿಸಲಾಗಿದೆ.

ಅಧ್ಯಾಯ – ೨

## ಇದುವರೆಗಿನ ಅಧ್ಯಯನದ ಸಮೀಕ್ಷೆ

ಕನ್ನಡದಲ್ಲಿ ಶಿಕ್ಷಣ ಪದ್ಧತಿಗಳನ್ನು ನಿರೂಪಿಸುವ ಹಲವು ಕೃತಿಗಳು ರಚಿತಗೂಂಡಿವೆ. ಕರ್ನಾಟಕದ ಹಲವು ವಿಶ್ವವಿದ್ಯಾನಿಲಯಗಳಲ್ಲಿ ಶಿಕ್ಷಣಶಾಸ್ತ್ರ ಒಂದು ಅಧ್ಯಯನದ ವಿಷಯವಾಗಿದ್ದು, ವಿವಿಧ ರಾಷ್ಟ್ರಗಳಲ್ಲಿ ರೂಪುಗೊಂಡಿರುವ ಶಿಕ್ಷಣ ಪದ್ಧತಿಗಳನ್ನು ಪಠ್ಯಗಳಲ್ಲಿ ಅಳವಡಿಸಲಾಗಿದೆ. ಕನ್ನಡದ ಕೆಲವು ನಿಯತಕಾಲಿಕೆಗಳು ಶಿಕ್ಷಣಕ್ಕೆ ಸಂಬಂಧಿಸಿದ ಹಲವು ಸಂಗತಿಗಳನ್ನು ನಿರಂತರವಾಗಿ ಚರ್ಚಿಸಿವೆ. ಕನ್ನಡದ ಕೆಲವು ಬರಹಗಾರರ ಶೈಕ್ಷಣಿಕ ಚಿಂತನೆಗಳನ್ನು ಕುರಿತು ಬಿಡಿ ಬಿಡಿ ಅಧ್ಯಯನಗಳು ನಡೆದಿವೆ; ಲೇಖನಗಳು ಪ್ರಕಟಗೊಂಡಿವೆ. ಸಾಹಿತ್ಯದಲ್ಲಿ ಶಿಕ್ಷಣ, ಶಿಕ್ಷಣದಲ್ಲಿ ಸಾಹಿತ್ಯ ಕುರಿತಂತೆ ಕೆಲವು ಕೃತಿಗಳು ಪ್ರಕಟಗೊಂಡಿವೆ. ಆದರೆ ಒಟ್ಟಾರೆಯಾಗಿ ಒಂದು ನಿರ್ದಿಷ್ಟ ಕಾಲಮಾನದ ಸೃಜನಶೀಲ ಕೃತಿಗಳಲ್ಲಿ ಅದರಲ್ಲೂ ಕಾದಂಬರಿಗಳ ವಸ್ತು ಹಾಗೂ ಪಾತ್ರ ನಿರ್ವಹಣೆಯಲ್ಲಿ ಶಿಕ್ಷಣವನ್ನು ಕುರಿತ ಕಾದಂಬರಿಕಾರರ ಪ್ರತಿಕ್ರಿಯೆಗಳನ್ನು ದಾಖಲಿಸುವ ಪ್ರಯತ್ನಗಳು ಅಷ್ಟಾಗಿ ನಡೆದಿಲ್ಲ.

ಶಿಕ್ಷಣ ಮತ್ತು ಸಾಹಿತ್ಯ ಈ ಎರಡು ಅಧ್ಯಯನ ಶಿಸ್ತುಗಳು ಪರಸ್ಪರ ಪೂರಕವಾದವು. ಶಿಕ್ಷಣದ ಹಲವು ಹಂತಗಳಲ್ಲಿ ಸಾಹಿತ್ಯ ಕೃತಿಗಳ ಅಧ್ಯಯನ ನಡೆಯುತ್ತದೆ. ಸಾಹಿತ್ಯ ಕೃತಿಗಳಲ್ಲಿ ಶೈಕ್ಷಣಿಕ ಕ್ಷೇತ್ರದ ಬಿಕ್ಕಟ್ಟುಗಳ ಬಗ್ಗೆ ಚರ್ಚೆಗಳು ನಡೆದಿವೆ. ಹಲವು ಬರಹಗಾರರು ಶೈಕ್ಷಣಿಕ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಶಿಕ್ಷಣ ಕುರಿತ ಪಠ್ಯಗಳನ್ನು ರೂಪಿಸಿದ್ದಾರೆ. ಹಲವು ಸೃಜನಶೀಲ ಕೃತಿಗಳು ಶೈಕ್ಷಣಿಕ ಪಠ್ಯಗಳಾಗಿ ಬಳಕೆಯಾಗಿವೆ. ಈ ರೀತಿಯಲ್ಲಿ ಶಿಕ್ಷಣ ಮತ್ತು ಸಾಹಿತ್ಯ ಕ್ಷೇತ್ರಗಳ ಈ ಕೊಳು ಕೊಡುಗೆಗಳು ನಿರಂತರವಾಗಿ ನಡೆಯುವ ಪ್ರಕ್ರಿಯೆಗಳಾಗಿವೆ.

ಶಿಕ್ಷಣ ಮತ್ತು ಸಾಹಿತ್ಯ ಈ ಎರಡು ಅಧ್ಯಯನ ಶಿಸ್ತುಗಳ ಬಗ್ಗೆ ಪ್ರತ್ಯೇಕವಾಗಿ ವ್ಯಾಪಕವಾದ ಸಂಶೋಧನೆಗಳು ನಡೆದಿವೆ. ಶಿಕ್ಷಣದಲ್ಲಿ ಭಾಷೆಯ ಬಳಕೆಯನ್ನು ಕುರಿತ ಅಧ್ಯಯನಗಳು ಸಾಕಷ್ಟು ನಡೆದಿವೆ. ಸೃಜನಶೀಲ ಕೃತಿಗಳಲ್ಲಿ ಚಿತ್ರಿತಗೊಂಡಿರುವ ಪಾತ್ರಗಳ ಅಧ್ಯಯನದ ಹಿನ್ನೆಲೆಯಲ್ಲಿ ಶಿಕ್ಷಣ ಚಿಂತನೆಗಳನ್ನು ವಿಶ್ಲೇಷಣೆ ನಡೆಸುವುದು ಅಗತ್ಯವಾಗಿದೆ.

ಪ್ರಸ್ತುತ ಅಧ್ಯಯನದ ವಸ್ತುವನ್ನು ಕುರಿತ ನೇರವಾದ ಅಧ್ಯಯನಗಳು ನಡೆದಿಲ್ಲ. ಆದರೆ ಈ ಸಂಶೋಧನಾ ವಿಷಯಕ್ಕೆ ಪೂರಕವಾದ ಹಲವು ಅಧ್ಯಯನಗಳು ನಡೆದಿವೆ. ಈ ರೀತಿಯ ಪೂರಕವಾದ ಸಂಶೋಧನಾ ಸಾಹಿತ್ಯವನ್ನು ಸಮೀಕ್ಷೆ ನಡೆಸಿರುವುದು ಪ್ರಸ್ತುತ ಅಧ್ಯಯನದ ಚೌಕಟ್ಟನ್ನು ನಿರ್ಧರಿಸಿಕೊಳ್ಳಲು ಸಹಾಯಕವಾಗಿದೆ. ಆದುದರಿಂದ

ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಸಂಶೋಧನ ಗ್ರಂಥಗಳನ್ನು ಹಾಗೂ ಸಾಹಿತ್ಯ ಕೃತಿಗಳ ಸಮೀಕ್ಷೆ ನಡೆಸಲಾಗಿದೆ.

ಭಾರತೀಯ ಸಾಹಿತ್ಯದಲ್ಲಿ ವಸಾಹತುಶಾಹಿಯನ್ನು ತಾತ್ವಿಕವಾಗಿ ವಿರೋಧಿಸಿದ ಬಗೆ ಈಗಾಗಲೇ ನಿರೂಪಿತಗೊಂಡಿದೆ. ಕನ್ನಡ ಸಾಹಿತ್ಯವೂ ಇದಕ್ಕೆ ಹೊರತಾಗಿಲ್ಲ. 'ನಾಡು ನುಡಿಯ ರೂಪಕ : ರಾಷ್ಟ್ರ, ಆಧುನಿಕತೆ ಮತ್ತು ಕನ್ನಡದ ಮೊದಲ ಕಾದಂಬರಿಗಳು' – ಶಿವರಾಮ ಪಡಿಕ್ಕಲ್, 'ವಸಾಹತುಶಾಹಿ ಸಂಸ್ಕೃತಿಗೆ ಆಧುನಿಕ ಕನ್ನಡ ಕಾವ್ಯ ತೋರಿದ ಪ್ರತಿಕ್ರಿಯೆ' – ಕೆ ಸಿ ಶಿವಾರೆಡ್ಡಿ, 'ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು' – ಐ ಜೆ ಮ್ಯಾಗೇರಿ – ಈ ಕೃತಿಗಳಲ್ಲದೆ, ಕನ್ನಡ ಸಾಹಿತ್ಯವು ವಸಾಹತುಶಾಹಿ ಆಡಳಿತಕ್ಕೆ ತೋರಿದ ಪ್ರತಿಕ್ರಿಯೆಗಳನ್ನು ನಿರೂಪಿಸುವ ಹಲವು ಅಧ್ಯಯನಗಳು ಈಗಾಗಲೇ ನಡೆದಿವೆ.

ಕನ್ನಡದ ಬಹುತೇಕ ಬರಹಗಾರರು ಅಧ್ಯಾಪನ ಕಾರ್ಯದಲ್ಲಿ ತೊಡಗಿಕೊಂಡಿದ್ದವರು. ಶಿಕ್ಷಣ ಕ್ಷೇತದಲ್ಲಿ ಉನ್ನತ ಹುದ್ದೆಗಳನ್ನು ನಿರ್ವಹಿಸಿದ್ದವರು, ಶಿಕ್ಷಣದ ಬಗ್ಗೆ ಹಲವು ಪ್ರಯೋಗಗಳನ್ನುನಡೆಸಿದವರು. ಹಲವರು ಶಿಕ್ಷಣದ ಬಗ್ಗೆ ದೃಢವಾಗಿ ಮಾತನಾಡಬಲ್ಲವರಾಗಿದ್ದರು. ಬಹುತೇಕ ಸಾಹಿತಿಗಳು ಶಿಕ್ಷಣ ಕ್ಷೇತ್ರದ ವಿವಿಧ ಸಮಸ್ಯಗಳಿಗೆ ಪರಿಹಾರಗಳನ್ನು ಸೂಚಿಸಿರುವ ಹಲವು ಉದಾಹರಣೆಗಳನ್ನು ಗಮನಿಸಬಹುದಾಗಿದೆ. ಆದುದರಿಂದ ಕನ್ನಡದ ಪ್ರಮುಖ ಸಾಹಿತಿಗಳ ಶಿಕ್ಷಣ ಚಿಂತನೆಗಳನ್ನು ಬಹು ಬಗೆಯಲ್ಲಿ ಅಧ್ಯಯನ ಮಾಡುವ ಅವಕಾಶಗಳಿವೆ.

**ಸಂಶೋಧನಾ ಮಹಾ ಪ್ರಬಂಧಗಳು**

ವಸಾಹತುಶಾಹಿಯು ಭಾರತೀಯ ಪರಿಸರಕ್ಕೆ ಆಧುನಿಕತೆಯನ್ನು ತಂದುಕೊಟ್ಟಿತು. ವಸಾಹತುಶಾಹಿ ನೀತಿಯು ಕನ್ನಡ ಸಾಹಿತ್ಯದ ಮೇಲೆ ಬೀರಿರುವ ಪ್ರಭಾವಗಳನ್ನು ಕುರಿತ ಸಾಕಷ್ಟು ಚರ್ಚೆಗಳು ನಡೆದಿವೆ. ಕನ್ನಡ ಭಾಷೆ ಮತ್ತು ಸಾಹಿತ್ಯ ವಸಾಹತುಶಾಹಿಯಿಂದಾಗಿ ತನ್ನ ವಸ್ತು ಮತ್ತು ಅಭಿವ್ಯಕ್ತಿ ಕ್ರಮದಲ್ಲಿ ಹೊಸತನವನ್ನು ಪಡೆಯಿತು. ಇಂತಹ ಚಾರಿತ್ರಿಕ ಸಂಗತಿಯನ್ನು ಅಧ್ಯಯನ ನಡೆಸಿದ ಶ್ರೀನಿವಾಸ ಹಾವನೂರ ಅವರು ೧೯೬೩ ರಲ್ಲಿ ಪುಣೆ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿ ಪಿಎಚ್.ಡಿ ಪದವಿ ಪಡೆದ ಪ್ರೌಢಪ್ರಬಂಧ 'ಹೊಸಗನ್ನಡ ಅರುಣೋದಯ'. ಇದು ಆಧುನಿಕ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಆರಂಭದ ಕಾಲದ ಬಗ್ಗೆ ನಡೆದಿರುವ ವಿಸ್ತೃತವಾದ ಸಂಶೋಧನೆಯಾಗಿದೆ.

ಹೊಸಗನ್ನಡದ ಆರಂಭದಲ್ಲಿ ಕನ್ನಡ ನಾಡು-ನುಡಿ ರೂಪುಗೊಂಡ ವಿವರಗಳನ್ನು ತಿಳಿಸುವ ಆಶಯದಿಂದ ಈ ಪ್ರಬಂಧ ನಿರೂಪಿತಗೊಂಡಿದೆ. ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಅಧ್ಯಯನದ ದೃಷ್ಟಿಯಿಂದ ಇದು ಅತ್ಯಂತ ಮಹತ್ವದ್ದು. ಕನ್ನಡ ಭಾಷೆ ಮತ್ತು ಸಂಸ್ಕೃತಿಯು ಇತರ ಭಾಷೆ ಮತ್ತು ಸಂಸ್ಕೃತಿಗಳ ಪ್ರೇರಣೆಗೆ ಒಳಗಾದ

ಸಂದರ್ಭದಲ್ಲಿ ಉಂಟಾದ ಸಂಕ್ರಮಣ ಸ್ಥಿತಿಯ ಬಗ್ಗೆ ಇಲ್ಲಿ ಅಧ್ಯಯನ ನಡೆಸಲಾಗಿದೆ. ೧೯೦೦ರವರೆಗಿನ ಕಾಲಮಿತಿಯನ್ನು ಗುರುತಿಸಿಕೊಂಡಿರುವ ಸಂಶೋಧಕರು ಪ್ರಬಂಧದಲ್ಲಿ ಒಂದು ಶತಮಾನದಲ್ಲಿ ರೂಪುಗೊಂಡಿರುವ ಹೊಸಗನ್ನಡ ಸಾಹಿತ್ಯಕ್ಕೆ ಆರಂಭದ ಕಾಲದಲ್ಲಿ ದೊರೆತ ಪ್ರೇರಣೆ ಮತ್ತು ಪ್ರಭಾವಗಳನ್ನು ನಿರೂಪಿಸುವ ಪ್ರಯತ್ನವನ್ನು ಮಾಡಿದ್ದಾರೆ. ಮುನ್ನುಡಿಯಲ್ಲಿ ಹಾ.ಮಾ.ನಾಯಕ ಅವರು ವ್ಯಕ್ತಪಡಿಸಿರುವ 'ಹೊಸಗನ್ನಡ ಅರುಣೋದಯ ಒಂದು ಅಪರೂಪದ ಆಕರ ಗ್ರಂಥ; ಶ್ರೇಷ್ಠವಾದ ಸಂಶೊಧನ ಗ್ರಂಥ. ನಮ್ಮ ಸಾಹಿತ್ಯ ಚರಿತ್ರೆಯ ಮುಂದಿನ ಸಂಶೋಧಕರು ಇದಕ್ಕೆ ಹೊಸ ವಿಷಯಗಳನ್ನು ಸೇರಿಸಬಹುದು. ಇದರ ಕೊರತೆಗಳನ್ನು ಹೇಳಬಹುದು. ಆದರೆ ಇದನ್ನು ಅಭ್ಯಸಿಸದೆ, ಆಧಾರವಾಗಿಟ್ಟುಕೊಳ್ಳದೆ, ೧೯ನೇ ಶತಮಾನಕ್ಕೆ ಸಂಬಂಧಿಸಿದ ಕೆಲಸ ಮಾಡುವುದು ಮಾತ್ರ ಖಂಡಿತ ಸಾಧ್ಯವಿಲ್ಲ' ಎನ್ನುವ ಅಭಿಪ್ರಾಯ ಈ ಪ್ರೌಢ ಪ್ರಬಂಧದ ಮಹತ್ವವನ್ನು ತಿಳಿಸುತ್ತದೆ.

ಪ್ರಬಂಧವನ್ನು ಪೂರ್ವಾರ್ಧ ಮತ್ತು ಉತ್ತರಾರ್ಧ ಎಂದು ಎರಡು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಪೂರ್ವಾರ್ಧದಲ್ಲಿ ಹೊಸಗನ್ನಡದ ಉಗಮಕ್ಕೆ ಕಾರಣವಾದ ಸಂಗತಿಗಳ ಬಗ್ಗೆ ಚರ್ಚಿಸುತ್ತಲೆ ಕನ್ನಡದಲ್ಲಿ ಮೂಡಿದ ಹೊಸ ಸಾಹಿತ್ಯ ಪ್ರಕಾರಗಳಿಗೆ ಪ್ರೇರಣೆಯಾದ ಸಂಗತಿಗಳನ್ನು ಗುರುತಿಸಿ ಅವುಗಳ ಪ್ರಾಮುಖ್ಯತೆಯನ್ನು ವಿವರಿಸಿದ್ದಾರೆ.

ಹದಿನೆಂಟನೇ ಶತಮಾನದ ಆರಂಭಕ್ಕೆ ಪಾಶ್ಚಾತ್ಯ ಸಂಸ್ಕೃತಿ ಮತ್ತು ಚಿಂತನೆಗಳು ಭಾರತೀಯ ಪರಿಸರವನ್ನು ಪ್ರವೇಶಿಸಿದ್ದವು. ಶಿಕ್ಷಣ ನೀಡುವ ನೆಪದಲ್ಲಿ ಧರ್ಮಬೋಧನೆಗೆ ತೊಡಗಿಸಿಕೊಳ್ಳಲು ಹವಣಿಸುತ್ತಿದ್ದ ಮಿಶನರಿ ಜನರ ಆಗಮನ–ಈ ಎಲ್ಲ ಸಂಘರ್ಷಗಳ ನಡುವೆ ಕನ್ನಡ ಭಾಷೆ ಮತ್ತು ಸಾಹಿತ್ಯ ಹೊಸರೂಪ ಪಡೆದುಕೊಂಡದ್ದನ್ನು ಇಲ್ಲಿ ನಿರೂಪಿಸಲಾಗಿದೆ.

ಸಾಹಿತ್ಯ ರಚನೆಯಲ್ಲಿ ಹೊಸ ಪ್ರಕಾರಗಳು ಪ್ರವರ್ಧಮಾನಕ್ಕೆ ಬರುತ್ತಿದ್ದು ಅದರ ಪ್ರಸಾರಕ್ಕೆ ಕಾರಣ ಮುದ್ರಣ ಮತ್ತು ಗ್ರಂಥೋದ್ಯಮ. ಕನ್ನಡ ನಾಡಿನಲ್ಲಿ ಮಿಶನರಿ ಜನರು ನಡೆಸಿದ ಸಾಹಿತ್ಯದ ಕೆಲಸಗಳು ಮತ್ತು ಆ ಕೆಲಸಗಳಲ್ಲಿ ತೊಡಗಿಸಿಕೊಂಡವರ ಬಗ್ಗೆ ವಿವರಗಳನ್ನು ಕಲೆ ಹಾಕಲಾಗಿದೆ. ಆಡಳಿತಕ್ಕಾಗಿ ಬಂದ ಬ್ರಿಟಿಷರು ವಿವಿಧ ಉದ್ದೇಶಗಳ ಹಿನ್ನೆಲೆಯಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಕೆಲಸಗಳನ್ನು ಕೈಗೊಂಡರು. ಈ ಸಂಗತಿಗಳು ಹೊಸಗನ್ನಡ ಅರುಣೋದಯಕ್ಕೆ ಪ್ರೇರಣೆಯಾದ ಬಗೆಯನ್ನು ವಿವರಿಸಲಾಗಿದೆ.

ಮುಮ್ಮಡಿ ಕೃಷ್ಣರಾಜರ ಜೀವನ ಮತ್ತು ವ್ಯಕ್ತಿತ್ವನ್ನು ಕುರಿತ ವಿವರಗಳು ಹಾಗೂ ಅವರ ಕಾಲದಲ್ಲಿ ರಚಿತಗೊಂಡ ಸಾಹಿತ್ಯದ ಬಗ್ಗೆ ಅವಲೋಕನ ನಡೆಸಲಾಗಿದೆ. ಪಾಶ್ಚಾತ್ಯ ಸಂಸ್ಕೃತಿಯು ಹೊಸಗನ್ನಡ ಸಾಹಿತ್ಯದ ಉದಯಕ್ಕೆ ಪ್ರೇರಣೆಯಾಯಿತು. ಹೊಸಗನ್ನಡ ಸಾಹಿತ್ಯದ ಸತ್ವವೆಲ್ಲ ಈ ನಾಡಿನ ಧಾರ್ಮಿಕ ವಾಙ್ಮಯಕಾರರು ರೂಪಿಸಿದ್ದು ಎನ್ನುವುದನ್ನು ನೆನೆಯುತ್ತಾ ಅದುವರೆಗಿನ ಕನ್ನಡ ಸಾಹಿತ್ಯದಲ್ಲಿನ ವಿವಿಧ ಧಾರ್ಮಿಕ ಕವಿಗಳ ಪ್ರೇರಣೆಯನ್ನು ಗುರುತಿಸಲಾಗಿದೆ. ಯಕ್ಷಗಾನದ ಕವಿಗಳು ಸಾಹಿತ್ಯ ಪ್ರಸಾರದಲ್ಲಿ ತೊಡಗಿಕೊಂಡದ್ದನ್ನು ವಿಶ್ಲೇಷಿಸಲಾಗಿದೆ.

ಮೈಸೂರು ಲೇಖಕರು, ಕರಾವಳಿ ಲೇಖಕರು, ಮದ್ರಾಸ್ ಕನ್ನಡ ಪಂಡಿತರು, ಮುಂಬಾಯಿ ಕರ್ನಾಟಕದವರು, ಉತ್ತರ ಕರ್ನಾಟಕದವರು ಎಂಬ ವಿಭಾಗಗಳಲ್ಲಿ ಹೊಸಗನ್ನಡ ಅರುಣೋದಯದ ಸಂದರ್ಭದಲ್ಲಿ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿದ್ದ ಸಾಹಿತಿಗಳ ಪರಿಚಯ ಮಾಡಿಕೊಡಲಾಗಿದೆ.

ಉತ್ತರಾರ್ಧದಲ್ಲಿ ಸಾಹಿತ್ಯದ ಕಾಲ, ವಿಭಾಗ ಮತ್ತು ಪ್ರಾಚೀನ ಕೃತಿಗಳ ಪರಿಷ್ಕರಣೆಯಿಂದ ಉಂಟಾದ ನವ ಪ್ರೇರಣೆಗಳನ್ನು ಕುರಿತು ಚರ್ಚಿಸಲಾಗಿದೆ. ಆ ಕಾಲಕ್ಕಾಗಲೆ ಇಂಗ್ಲಿಷರು ಜಾರಿಗೆ ತಂದಿದ್ದ ಶಿಕ್ಷಣ ಪದ್ಧತಿಯಿಂದಾಗಿ ಶಾಲೆಗಳಲ್ಲಿ ಕನ್ನಡ ಕಲಿಯುವವರಿಗಾಗಿ ರೂಪಿಸಿದ ವ್ಯಾಕರಣಗಳು, ಶಬ್ದಕೋಶಗಳು, ಇಂಗ್ಲಿಷ್–ಕನ್ನಡ, ಕನ್ನಡ–ಇಂಗ್ಲಿಷ್ ನಿಘಂಟುಗಳ ರಚನೆ ಈ ಕ್ರಿಯೆಗಳಿಂದಾಗಿ ಕನ್ನಡ ಭಾಷೆ ತನ್ನ ಅಂತಃಸತ್ವವನ್ನು ಹೆಚ್ಚಿಸಿಕೊಂಡಿದ್ದನ್ನು ಸಾಹಿತ್ಯದ ಪ್ರೇರಣೆಗಳಲ್ಲಿ ಬಹುಮುಖ್ಯವಾದ ಸಂಗತಿ ಎಂದು ನಿರೂಪಿಸಲಾಗಿದೆ.

ಕಾಳಿದಾಸನ ಶಾಕುಂತಲ ನಾಟಕಗಳು, ಇಂಗ್ಲಿಷಿನಿಂದ ಅನುವಾದಿತಗೊಂಡ ನಾಟಕಗಳಿಂದ ಉಂಟಾದ ಸಂಚಲನ ಮತ್ತು ನಾಟಕಗಳಿಗಿಂತ ಭಿನ್ನ ಎನಿಸಿದ ಪ್ರಹಸನಗಳು ರೂಪುಗೊಂಡ ಬಗೆಯನ್ನು ಮತ್ತು ಅದು ಹೊಸಗನ್ನಡ ಸಾಹಿತ್ಯದ ನಿರ್ಮಾಣಕ್ಕೆ ವೇದಿಕೆಯಾಗಿ ಬಳಕೆಯಾದುದನ್ನು ವಿಶ್ಲೇಷಿಸಲಾಗಿದೆ.

ಬೈಬಲ್‌ನ ಅನುವಾದ, ಭಕ್ತಿ ಬರೆಹಗಳು, ಧರ್ಮಗಳ ಪರಸ್ಪರ ಟೀಕೆಗಳಿಂದಾದ ಸಂಘರ್ಷವನ್ನುಗುರುತಿಸಲಾಗಿದೆ. ಆ ಕಾಲಕ್ಕಾಗಲೇ ಇಂಗ್ಲಿಷಿನ ಪ್ರಭಾವದಿಂದ ರೂಪುಗೊಂಡಿರುವ ಕಥನ ಮಾದರಿಗಳ ಬಗ್ಗೆ ಚರ್ಚೆ ನಡೆದಿದೆ. ಸಾಹಿತ್ಯದಿಂದ ಹೊರತಾದ ಚರಿತ್ರೆ, ಕಾನೂನು, ವ್ಯವಹಾರ, ವಿಜ್ಞಾನ ಸಾಹಿತ್ಯ ಮುಂತಾದ ಅನ್ಯಶಿಸ್ತುಗಳಲ್ಲಿ ಉಂಟಾದ ಹೊಸ ಬದಲಾವಣೆಗಳನ್ನು ಗುರುತಿಸಲಾಗಿದೆ. ಮುದ್ರಣ ಯಂತ್ರಗಳ ನಿರ್ಮಾಣದಿಂದಾಗಿ ಆ ಕಾಲಕ್ಕೆ ಪ್ರಬಲ ಸಮೂಹ ಮಾಧ್ಯಮವಾಗಿ ರೂಪುಗೊಂಡ ಪತ್ರಿಕೆಗಳು ಕನ್ನಡ ಸಾಹಿತ್ಯದ ಹೊಸತನಕ್ಕೆ ಕಾರಣವಾಗಿ ಅವು ಬೇರೆ ಬೇರೆ ಭಾಗಗಳಲ್ಲಿ ಪ್ರಸಾರಗೊಂಡು ವಿಸ್ತಾರಗೊಳ್ಳಲು ನೆರವಾದದ್ದನ್ನು ಗ್ರಹಿಸಲಾಗಿದೆ. 'ಇದನ್ನು ೧೯ನೆಯ ಶತಮಾನದ

ಸಾಹಿತ್ಯ ಚರಿತ್ರೆ ಎನ್ನುವುದಕ್ಕಿಂತ ಆ ಕಾಲದ ಸಾಹಿತ್ಯಿಕ ಹಿನ್ನಲೆಯನ್ನು, ಸಾಧನ ಸಾಮಗ್ರಿಯನ್ನು ವ್ಯವಸ್ಥಿತವಾಗಿ ಕ್ರೋಢೀಕರಿಸಿ ವಿವೇಚಿಸಲಾದ ಕೃತಿಯೆಂದು ಪರಿಭಾವಿಸತಕ್ಕದ್ದು' ಎನ್ನುವ ಸಂಶೋಧಕರ ಮಾತುಗಳು ಪ್ರೌಢ ಪ್ರಬಂಧದ ಸ್ವರೂಪವನ್ನು ಸೂಚಿಸುತ್ತವೆ. ಶ್ರೀನಿವಾಸ ಹಾವನೂರರ ಅಧ್ಯಯನದಲ್ಲಿ ಆಧುನಿಕ ಕನ್ನಡದ ಸಾಹಿತ್ಯ ಪ್ರೇರಣೆಗಳನ್ನು ಗುರುತಿಸಿದ್ದಾರೆ. ಆ ಪ್ರೇರಣೆಗಳಲ್ಲಿ ಇಂಗ್ಲಿಷ್ ಶಿಕ್ಷಣವೂ ಒಂದು. ಆದುದರಿಂದ ಕನ್ನಡದ ಆರಂಭದ ಕಾದಂಬರಿಗಳು ರೂಪುಗೊಳ್ಳಲು ಕನ್ನಡದ ಪರಿಸರಕ್ಕೆ ಒದಗಿದ ಒತ್ತಡದ ವಿವರಗಳಿವೆ. ಈ ಹಿನ್ನೆಲೆಯಲ್ಲಿ ಈ ಪ್ರೌಢ ಪ್ರಬಂಧದಸಂಗತಿಗಳು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿವೆ.

(ರಾ.ಯ. ಧಾರವಾಡಕರ ಅವರು ೧೯೭೧ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿ ಪಿಎಚ್.ಡಿ. ಪದವಿ ಪಡೆದ ಸಂಶೋಧನ ಮಹಾಪ್ರಬಂಧ 'ಹೊಸಗನ್ನಡ ಉದಯಕಾಲ'.) ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ ನಡೆಸಿದ ಈ ಸಂಶೋಧನೆ ಶ್ರೀನಿವಾಸ ಹಾವನೂರರು ಮಂಡಿಸಿದ 'ಹೊಸಗನ್ನಡ ಅರುಣೋದಯ' ಅಧ್ಯಯನದಲ್ಲಿನ ಕೊರತೆಗಳನ್ನು ನೀಗಿಸಿದೆ. ಈ ಎರಡು ಸಂಶೋಧನಾ ಪ್ರಬಂಧಗಳನ್ನು ಒಟ್ಟುಗೂಡಿಸಿದರೆ ಸಮಗ್ರ ಕರ್ನಾಟಕದಲ್ಲಿ ಹೊಸಗನ್ನಡ ಸಾಹಿತ್ಯದ ಉಗಮ ಕಾಲದಲ್ಲಿ ಉಂಟಾದ ಭಾಷಿಕ ಹಾಗೂ ಸಾಹಿತ್ಯಿಕ ಸಂಘರ್ಷಗಳ ಚರಿತ್ರೆಯನ್ನು ಅರಿಯಬಹುದಾಗಿದೆ. 'ಹೊಸಗನ್ನಡ ಉದಯಕಾಲದ ಮೊದಲು', 'ಉದಯ ಕಾಲದ ಶೈಕ್ಷಣಿಕ ಆಡಳಿತಗಾರರು', 'ಅನುಭವಿಗಳು', 'ಸಾಹಿತ್ಯಕರು' ಎಂಬ ನಾಲ್ಕು ಅಧ್ಯಾಯಗಳಲ್ಲಿ ನಿರೂಪಿತಗೊಂಡಿರುವ ಸಂಶೋಧನೆ ವ್ಯಕ್ತಿಕೇಂದ್ರಿತ ನೆಲೆಯಲ್ಲಿ ಸಾಗುತ್ತದೆ. ಹೊಸಗನ್ನಡ ಸಾಹಿತ್ಯದ ಪ್ರೇರಣೆ ಮತ್ತು ಪ್ರಭಾವಗಳನ್ನು ಕೇಂದ್ರವಾಗಿಸಿಕೊಂಡಿರುವ ಈ ಅಧ್ಯಯನದಲ್ಲಿ ಉತ್ತರ ಕರ್ನಾಟಕದಲ್ಲಿ ಹೊಸಗನ್ನಡ ಸಾಹಿತ್ಯ ಸೃಷ್ಟಿಗೆ ಕಾರಣರಾದ ವ್ಯಕ್ತಿಗಳ ಪರಿಚಯವನ್ನು ನೀಡಲಾಗಿದೆ.

'ಹೊಸಗನ್ನಡದ ಉದಯಕಾಲದ ಮೊದಲು' ಎನ್ನುವ ಅಧ್ಯಾಯದಲ್ಲಿ ಪಂಪನಿಂದ ಮೊದಲುಗೊಂಡು ಮುದ್ದಣನವರೆಗೆ ಕನ್ನಡ ಸಾಹಿತ್ಯಕ್ಕೆ ಹೊಸತನ ನೀಡಿದ ಕವಿಗಳ ಕಾವ್ಯ ಸ್ವರೂಪವನ್ನು ಕುರಿತು ಚರ್ಚಿಸಿದ್ದಾರೆ. ಆ ಮುಖೇನ ಕನ್ನಡ ಸಾಹಿತ್ಯ ಎಲ್ಲ ಕಾಲಗಳಲ್ಲಿಯೂ ಹೊಸ ಹೊಸ ರೂಪಗಳನ್ನು ಪಡೆದುಕೊಂಡಿದ್ದನ್ನು ವಿಶ್ಲೇಷಿಸಿ ವಿಷಯಕ್ಕೆ ಸೂಕ್ತ ಪೀಠಿಕೆಯನ್ನು ನೀಡಿದ್ದಾರೆ.

ಧಾರವಾಡದಲ್ಲಿ ರೂಪುಗೊಂಡ ವಿದ್ಯಾವರ್ಧಕ ಸಂಘ, ಅದರ ಕಾರ್ಯ ಚಟುವಟಿಕೆಗಳನ್ನು ಮತ್ತು ಗ್ರಂಥಕರ್ತರ ಸಮ್ಮೇಳನ ನಡೆದು ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡವರಿಗೆ ದೊರೆತ ಉತ್ತೇಜನಗಳನ್ನು ವಿವರಿಸಿದ್ದಾರೆ.

ಕರ್ನಾಟಕದ ಏಕೀಕರಣ ಚಳವಳಿ ಆರಂಭಗೊಂಡು-ಅದರಿಂದಾಗಿ ಉತ್ತರ ಕರ್ನಾಟಕ ಏಕೀಕರಣದ ಬಗ್ಗೆ ತೋರಿದ ಅಭಿಮಾನ, ನಾಡು-ನುಡಿ-ಸಾಹಿತ್ಯದ ಬಗೆಗಿನ



See page 21

ಜಾಗೃತಿಯು ಹೊಸಗನ್ನಡ ಸಾಹಿತ್ಯದ ಉಗಮಕ್ಕೆ ಕಾರಣವಾದ ಸಂಗತಿಗಳನ್ನು ವಿಶ್ಲೇಷಿಸಲಾಗಿದೆ. ಮುದ್ರಣ ಯಂತ್ರಗಳ ಪ್ರಸಾರ, ಸರ್ಕಾರಿ ಮತ್ತು ಖಾಸಗಿ ಮುದ್ರಣಾಲಯಗಳ ಸ್ಥಾಪನೆಯಿಂದಾಗಿ ಸಾಹಿತ್ಯದ ರಚನೆಗೆ ದೊರಕಿದ ಉತ್ತೇಜನ ಮತ್ತು ಇಂಥ ಹಲವು ಪ್ರಯತ್ನಗಳನ್ನು ಅವಲೋಕಿಸಲಾಗಿದೆ. ಅನುವಾದ ಕಾರ್ಯಗಳು ಕನ್ನಡವನ್ನು ಪ್ರೇರೇಪಿಸಿದ ಸಂಗತಿ ಮತ್ತು ಹೊಸಗನ್ನಡದ ಉದಯದ ಲಕ್ಷಣಗಳನ್ನು ಕುರಿತು ಚರ್ಚಿಸಲಾಗಿದೆ.

'ಉದಯಕಾಲದ ಶೈಕ್ಷಣಿಕ ಆಡಳಿತಗಾರರು' ಈ ಅಧ್ಯಾಯದಲ್ಲಿ ಕನ್ನಡ ನಾಡಿನಲ್ಲಿ ಆಧುನಿಕ ಶಿಕ್ಷಣ ಜಾರಿಗೆ ಬಂದ ಸಂದರ್ಭದ ಚರ್ಚೆಯಿದೆ. ಅದರಲ್ಲಿಯೂ ವಿಲಿಯಂ ಎಂ. ರಸೆಲ್, ಹುಯಿಲಗೋಳ ಭುಜಂಗರಾಯರು, ಡೆಪ್ಯುಟಿ ಚೆನ್ನಬಸಪ್ಪ ಹಾಗೂ ರೊಡ್ಡ ಶ್ರೀನಿವಾಸರಾಯರು ಬ್ರಿಟಿಷ್ ಸರ್ಕಾರದ ವಿವಿಧ ಶೈಕ್ಷಣಿಕ ಹುದ್ದೆಗಳಲ್ಲಿದ್ದರು. ಅವರು ತಮ್ಮ ಆಡಳಿತದ ಅವಧಿಯಲ್ಲಿ ಕರ್ನಾಟಕದ ಶಿಕ್ಷಣದಲ್ಲಿ ಕನ್ನಡ ಭಾಷೆಗೆ ಮಾನ್ಯತೆ ದೊರೆಯಬೇಕೆಂದು ಶ್ರಮ ಪಟ್ಟರು. ಈ ಸಂಗತಿಗಳು ಪ್ರಸ್ತುತ ಅಧ್ಯಯನದಲ್ಲಿ ವಸಾಹತು ಶಿಕ್ಷಣ ಜಾರಿಗೊಂಡ ಬಗೆಯನ್ನು ವಿವರಿಸಲು ನೆರವಾಗಿದೆ.

ಶಿವರಾಮ ಪಡಿಕ್ಕಲ್ ಅವರು ಬಿ.ಎ. ವಿವೇಕ ರೈ ಅವರ ಮಾರ್ಗದರ್ಶನದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುವ ಪಿಎಚ್.ಡಿ ಮಹಾಪ್ರಬಂಧ ನಾಡು ನುಡಿಯ ರೂಪಕ. ಈ ಸಂಶೋಧನಾ ಮಹಾ ಪ್ರಬಂಧವನ್ನು ಮಂಗಳೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ೨೦೦೧ ರಲ್ಲಿ ಪ್ರಕಟಿಸಿದೆ.

> ವಸಾಹತುಕರಣ, ವಸಾಹತುಶಾಹಿ ಆಧುನಿಕತೆಯು ಕರ್ನಾಟಕದಲ್ಲಿ ತಲೆದೋರಿದ ರೀತಿ, ರಾಷ್ಟ್ರೀಯ ಮತ್ತು ಭಾಷಿಕ ಅಸ್ಮಿತೆಗಳು ರೂಪುಗೊಂಡ ಬಗೆ ಮೊದಲಾದ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಮೊದಲ ಕಾದಂಬರಿಗಳನ್ನು ಈ ಪುಸ್ತಕದಲ್ಲಿ ಚರ್ಚಿಸಲಾಗಿದೆ[೧]

ಎನ್ನುವ ಲೇಖಕರು ತಮ್ಮ ಅಧ್ಯಯನದ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ. 'ನಾವೆಲ್ ಸಿದ್ಧಾಂತ; ಸಮಾಜಶಾಸ್ತ್ರೀಯ ವಿವರಣೆ', 'ರಾಷ್ಟ್ರ, ಆಧುನಿಕತೆ ಮತ್ತು ಮೊದಲ ಕಾದಂಬರಿಗಳು', 'ಪ್ರಮುಖ ಲೇಖಕರು ಮತ್ತು ವಾಸ್ತವಿಕ ನಿರೂಪಣೆಯ ರಾಜಮಾರ್ಗ', 'ಇತರ ಕಾದಂಬರಿಕಾರರು ಮತ್ತು ಮೆಲೋಡ್ರೆಮ್ಯಾಟಿಕ್ ನಿರೂಪಣೆ', 'ಕೆಲವು ಕಾದಂಬರಿಗಳ ಅಧ್ಯಯನ', 'ಮೊದಲ ಕಾದಂಬರಿಗಳು ಮತ್ತು ಗಣ್ಯ ಓದುವ ವರ್ಗ' – ಹೀಗೆ ತಮ್ಮ ಅಧ್ಯಯನವನ್ನು ಆರು ಅಧ್ಯಾಯಗಳಾಗಿ ವಿಂಗಡಿಸಿಕೊಂಡಿದ್ದಾರೆ. ಈ ಪ್ರೌಢ ಪ್ರಬಂಧವು 'ಕಾದಂಬರಿ' ಪರಿಕಲ್ಪನೆ ರೂಪುಗೊಂಡ ಬಗೆಯನ್ನು ವಿಭಿನ್ನವಾಗಿ ಚರ್ಚಿಸಿದೆ. ಸಾಹಿತ್ಯ ವಿಮರ್ಶೆ ಮತ್ತು ಕನ್ನಡ ಕಾದಂಬರಿ, ನಾವೆಲ್‌ನ ಸಾಮಾನ್ಯ ಲಕ್ಷಣಗಳು, ನಾವೆಲ್‌ನ ಸಿದ್ಧಾಂತ, ಕಾದಂಬರಿಯ ಸಮಾಜಶಾಸ್ತ್ರೀಯ ವಿವರಣೆಯ ಸಿದ್ಧಾಂತ' ಈ

ಉಪಶೀರ್ಷಿಕೆಗಳಲ್ಲಿ ಕಾದಂಬರಿ ಪ್ರಕಾರ ಕನ್ನಡದಲ್ಲಿ ರೂಪುತಳೆದ ಬಗೆಯನ್ನು ವಿವರಿಸಿದೆ. ಕಾದಂಬರಿಯ ಹುಟ್ಟಿನ ಚಾರಿತ್ರಿಕ ಸನ್ನಿವೇಶವನ್ನು ಗ್ರಹಿಸಲಾಗಿದೆ. ಅಲ್ಲದೇ ಕಾದಂಬರಿಯ ಸಮಾಜಶಾಸ್ತ್ರೀಯ ವಿವರಣೆ, ಕನ್ನಡ ಕಾದಂಬರಿಗಳ ವಸ್ತು, ಆಶಯ, ಆಕೃತಿ, ಒಂದು ಸಾಂಸ್ಕೃತಿಕ ರೂಪವಾಗಿ ಅದು ಸಂಸ್ಕೃತಿಯನ್ನೂ, ವ್ಯಕ್ತಿತ್ವಗಳನ್ನೂ ರೂಪಿಸಿದ ಬಗೆ ಹಾಗೂ ಒಟ್ಟಾರೆಯಾಗಿ ಕನ್ನಡ ಕಾದಂಬರಿಯ ಪ್ರಕಾರದ ಬೆಳವಣಿಗೆಯನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ರಾಷ್ಟ್ರ ಮತ್ತು ಕಾದಂಬರಿ, ಕರ್ನಾಟಕದ ಸಾಂಸ್ಕೃತಿಕ ಸ್ಥಿತಿ, ಕನ್ನಡ ಮೊದಲ ಕಾದಂಬರಿಗೆ ಹಿನ್ನೆಲೆಯಾದ ಪೂರ್ವ ಪ್ರಯತ್ನಗಳು–ಈ ಉಪಶೀರ್ಷಿಕೆಗಳಲ್ಲಿ ಕನ್ನಡದ ಆರಂಭದ ಕಾದಂಬರಿಗಳ ಬಗ್ಗೆ ಚರ್ಚಿಸಲಾಗಿದೆ. ಭಾರತದ ವಿವಿಧ ಭಾಷೆಗಳಲ್ಲಿ ರಚಿತಗೊಂಡ ಕಾದಂಬರಿಗಳ ವಿವರವನ್ನು ನೀಡಲಾಗಿದೆ. ಇಂಥ ಸಂದರ್ಭದಲ್ಲಿ ಕನ್ನಡ ಕಾದಂಬರಿ ಪ್ರಕಾರ ರೂಪು ತಳೆಯಲು ಕನ್ನಡ ಸಾಹಿತ್ಯ ಭೂಮಿಕೆ ಸಿದ್ಧಗೊಂಡ ಬಗೆಯನ್ನು ಶೋಧಿಸಲಾಗಿದೆ.

> ಕನ್ನಡದ ಮೊದಲ ಕಾದಂಬರಿಗಳ ಸಿದ್ಧಾಂತವನ್ನು ಮಂಡಿಸಲು–ವಸಾಹತುಶಾಹಿ ಆಡಳಿತ, ಅದಕ್ಕೆ ಎದುರಾಗಿ ರೂಪುಗೊಳ್ಳುತ್ತಿದ್ದ ರಾಷ್ಟ್ರ ಕಲ್ಪನೆ, ವಸಾಹತು ಆಧುನಿಕತೆಯು ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಬಗೆ ತೆರೆಯುತಿದ್ದ ರೀತಿ, ಉದೀಯಮಾನ ಇಂಗ್ಲೀಷ್ ವಿದ್ಯಾವಂತ ವರ್ಗ, ಅದರ ಸಾಂಸ್ಕೃತಿಕ ಕಾಳಜಿಗಳು ಮೊದಲಾದವುಗಳ ವಿವರಣೆ ಅಗತ್ಯ[೨]

ಎನ್ನುವ ಸಂಶೋಧಕರು ವಸಾಹತುಶಾಹಿ ನೆಲೆಯ ವಿವಿಧ ಆಯಾಮಗಳ ಬಗ್ಗೆ ಚರ್ಚಿಸಿದ್ದಾರೆ. ಪರಿಕಲ್ಪನಾತ್ಮಕ ಚೌಕಟ್ಟು: ಅರ್ಥಶೋಧನೆಯಾಚೆಗೆ, ಕನ್ನಡ ಮೊದಲ 'ಕಾದಂಬರಿ'ಯ ವಿಭಿನ್ನ ನೆಲೆಗಳು, ಸಾಕ್ಷಾತ್ಕಾರಗೊಳ್ಳುವ ಆದರ್ಶದ ಕಲ್ಪನೆ ಮತ್ತು ಸಮಾಜ ಸುಧಾರಣಾವಾದಿ ಕಾದಂಬರಿಗಳು, ಆದರ್ಶದ ವೈಭವೀಕರಣ ಮತ್ತು ಪುನರುತ್ಥಾನವಾದಿ ಕಾದಂಬರಿಗಳು, ನಾಶವಾಗುತ್ತಿರುವ ಆದರ್ಶ ಮತ್ತು ಎಂ.ಎಸ್. ಪುಟ್ಟಣ್ಣನವರ ಕಾದಂಬರಿಗಳು–ಈ ಉಪಶೀರ್ಷಿಕೆಗಳಲ್ಲಿ ಕನ್ನಡದ ಆರಂಭದ ಕಾದಂಬರಿಗಳ ಸ್ವರೂಪದ ಬಗ್ಗೆ ಚರ್ಚೆ ನಡೆದಿದೆ. ಕನ್ನಡ ಕಾದಂಬರಿಯು ಆರಂಭ ಕಾಲಘಟ್ಟದಲ್ಲಿ ತನ್ನ ರೂಪವನ್ನು ನಿರ್ಧರಿಸಿಕೊಂಡ ಸಂಗತಿಗಳನ್ನು ಇಲ್ಲಿ ವಿವರವಾಗಿ ಚರ್ಚಿಸಲಾಗಿದೆ.

'ಇಂದಿರಾಬಾಯಿ' (೧೮೯೯), 'ವಾಗ್ದೇವಿ' (೧೯೦೫) ಈ ಕಾದಂಬರಿಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಈ ಕಥನಗಳು ಆದರ್ಶ ಮತ್ತು ವಾಸ್ತವಿಕ ನೆಲೆಗಳನ್ನು ರೂಢಿಸಿಕೊಂಡು ಬೆಳೆದ ಪರಿಯನ್ನು ಪರಿಚಯಿಸಲಾಗಿದೆ. ಪಾತ್ರಗಳ ಮನೋಭಾವದ

ಹಿನ್ನೆಲೆ, ಆ ಕಾಲದ ಕಥನದ ರೂಪ ಮತ್ತು ಅದರ ವಿನ್ಯಾಸ ಕ್ರಮಗಳನ್ನು ವಿಶ್ಲೇಷಿಸಲಾಗಿದೆ. ಗಳಗನಾಥರ ಪ್ರಬುದ್ಧ ಪದ್ಮನಯನೆ (೧೮೯೮), ಕೆರೂರ ವಾಸುದೇವಾಚಾರ್ಯರ ಸಾಮಾಜಿಕ ವಾತಾವರಣವುಳ್ಳ ಇಂದಿರಾ (೧೯೦೮) ಕಾದಂಬರಿಗಳ ಬಗ್ಗೆ ಬರೆಯುತ್ತಾ ಈ ಇಬ್ಬರು ಕಾದಂಬರಿಕಾರರು ಪಡೆದ ಪ್ರೇರಣೆ ಮತ್ತು ಪ್ರಭಾವಗಳನ್ನು ಗುರುತಿಸಿದ್ದಾರೆ. ರಾಷ್ಟ್ರೀಯ ಸುಧಾರಣಾವಾದವು ಈ ಕಾದಂಬರಿಕಾರರ ಮೇಲೆ ಬೀರಿದ ಪ್ರಭಾವನ್ನು ಕುರಿತು ಚರ್ಚಿಸಲಾಗಿದೆ.

> ಆಧುನಿಕವಿದ್ಯಾಭ್ಯಾಸವನ್ನುಪಡೆದೂಪ್ರಾಚೀನಸಂಸ್ಕಾರಗಳನ್ನು ಮೈಗೂಡಿಸಿಕೊಂಡಿರುವ ಪಾತ್ರಗಳಾದ ದೇವಯಾನಿ, ರಮಾಕಾಂತ, ಇಂದಿರೆಯರೇ ಈ ಕಾದಂಬರಿಯ ಆದರ್ಶ ಪಾತ್ರಗಳು. ಸುಧಾರಣಾವಾದಿಗಳನ್ನು ಕೆರೂರರು ತಾವು ವಿಡಂಬನೆಗೆ ಗುರಿ ಮಾಡಿರುವುದು ಗಮನಾರ್ಹ. ಸಾಮಾಜಿಕ ವಿಚಾರಗಳಲ್ಲಿ ಪ್ರಗತಿಪರ ದೃಷ್ಟಿಯನ್ನು ಹೊಂದಿದ್ದರೂ ಹೊಸ ಬದುಕು ಭಾರತೀಯರ ನೆಲೆಗಟ್ಟಿನ ಮೇಲೆಯೇ ರೂಪಿತವಾಗಬೇಕೆಂದು ವಾದಿಸುತ್ತಿದ್ದ ಕೆರೂರರು ಇವೆರಡರ ವಿಚಿತ್ರ ಬೆಸುಗೆಯನ್ನು ಸಾಧಿಸುತ್ತಾರೆ[೩]

ಎನ್ನುವ ಮೂಲಕ ಆದರ್ಶ ಮತ್ತು ವಾಸ್ತವದ ಪರಿಕಲ್ಪನೆಗಳು ಆ ಕಾಲದ ಕಾದಂಬರಿಗಳಲ್ಲಿ ಯೋಜಿತಗೊಂಡಿರುವುದನ್ನು ಚರ್ಚಿಸಲಾಗಿದೆ.

'ಕೆಲವು ಕಾದಂಬರಿಗಳ ಅಧ್ಯಯನ' ಎನ್ನುವ ಅಧ್ಯಾಯದಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಆರಂಭದ ಕಾದಂಬರಿಗಳಾದ 'ಇಂದಿರಾಬಾಯಿ', 'ಮಾಡಿದ್ದುಣ್ಣೋ ಮಹಾರಾಯ', 'ಮಾಧವ ಕರುಣಾ ವಿಲಾಸ', 'ದುರ್ಗೇಶ ನಂದಿನಿ', 'ಚೋರಗ್ರಹಣ ತಂತ್ರ' – ಕಾದಂಬರಿಗಳನ್ನು ವಿಶ್ಲೇಷಿಸಲಾಗಿದೆ. ಆ ಮೂಲಕ ಕನ್ನಡದ ಮೊದಲ ಕಾದಂಬರಿಗಳು ಆಧುನಿಕ ರಾಷ್ಟ್ರ, ಅದರ ರಾಷ್ಟ್ರೀಯತೆ, ಆಧುನಿಕತೆ ಮತ್ತು ಆಧುನಿಕ ವ್ಯಕ್ತಿತ್ವಗಳನ್ನು ನಿರೂಪಿಸುವ ಕಥನಗಳಾಗಿವೆ ಎನ್ನುವುದನ್ನು ಸ್ಪಷ್ಟೀಕರಿಸಲಾಗಿದೆ.

> ಎರಡು ಪೀಳಿಗೆಗಳ ನಡುವಿನ ಸಂಘರ್ಷ, ವಿದ್ಯಾಭ್ಯಾಸ ಮತ್ತು ಸ್ತ್ರೀ ಸೆಕ್ಷುಯಾಲಿಟಿಗಳನ್ನು ಇಂದಿರಾಬಾಯಿ ಒಂದಾಗಿ ಹೆಣೆಯುತ್ತದೆ. ಆದುದರಿಂದಲೇ ಸಮಾಜ ಸುಧಾರಣೆಯ ಮುಖ್ಯ ವಸ್ತುವಾಗಿ ಸ್ತ್ರೀ ಈ ಕಾದಂಬರಿಯಲ್ಲಿ ಮೂಡಿಬರುತ್ತಾಳೆ.[೪]

> ಪುಟ್ಟಣ್ಣನವರ ಸಾಂಪ್ರದಾಯಿಕತೆ ಎನ್ನುವುದು ರಾಮಾಯಣದ ಮತ್ತು ಜನಪದ ನೈತಿಕತೆಗಳಿಗಿಂತ ಭಿನ್ನವಾದುದು, ಅದು ೧೯–೨೦ನೆಯ ಶತಮಾನದ ವಿದ್ಯಾವಂತನದು ಎನ್ನುವುದನ್ನು ಈ ಹಿಂದೆ ನಾವು ಗಮನಿಸಿದ್ದೇವೆ.[೫]

> ನೈತಿಕವಾಗಿ ಅನೇಕ ಬಗೆಯ ದ್ವಂದ್ವಗಳನ್ನು ಎದುರಿಸುತ್ತಿದ್ದ ವಿದ್ಯಾವಂತರಿಗೆ ಇಂತಹ ಕೃತಿಗಳ ಮೂಲಕ ಗಳಗನಾಥರು ನೇರವಾದ ಮೌಲ್ಯ ಸರಣಿಯನ್ನು ಒದಗಿಸಿದರು ಎನ್ನುವುದನ್ನು ಅವರ ಕಾದಂಬರಿಗಳ ಜನಪ್ರಿಯತೆಯು ಸಾರುವಂತಿದೆ.[೬]

ಕನ್ನಡದಲ್ಲಿ ಆಧುನಿಕ ಕಾದಂಬರಿಯ ಪರಿಕಲ್ಪನೆಯೇ ಇಲ್ಲದ ಸಂದರ್ಭದಲ್ಲಿ 'ದುರ್ಗೇಶ ನಂದಿನಿ' ಕೃತಿ ಅನುವಾದಗೊಂಡಿರುವುದು ಗಮನಾರ್ಹವಾಗಿದೆ. ತಮ್ಮ ಉದ್ದೇಶವನ್ನು ಬಿ.ವೆಂಕಟಚಾರ್ಯರು ಮುನ್ನುಡಿಯಲ್ಲಿ, 'ಇಂಗ್ಲೀಷಿನಲ್ಲಿರುವ ನಾವೆಲ್‌ಗಳ ಪರಿಚಯ ಕನ್ನಡದ ಓದುಗರಿಗೆ ಅಷ್ಟಾಗಿ ಇಲ್ಲದಿರುವುದರಿಂದ ಪ್ರಸಿದ್ಧ ಬಂಗಾಲಿ ಕಾದಂಬರಿಕಾರರಾದ ಬಾಬು ಬಂಕಿಮರ ಈ ಕಾದಂಬರಿಯನ್ನು ತಾನು ಅನುವಾದಿಸಿದೆ' ಎಂದು ಅವರು ಹೇಳಿದ್ದಾರೆ.

ಶ್ರೀ ವೆಂಕಟಕೃಷ್ಣಯ್ಯನವರು (ಚೋರಗ್ರಹಣ ತಂತ್ರ ಕೃತಿಯ ಕರ್ತೃ) ಮೈಸೂರಿನಲ್ಲಿ ಉನ್ನತ ರಾಜಕೀಯ ಧುರೀಣರೂ ಶಿಕ್ಷಣವೇತ್ತರೂ ಆಗಿದ್ದರೆಂಬುದು ಇಲ್ಲಿ ಗಮನಿಸಬೇಕಾದ ಅಂಶ. ಆದುದರಿಂದ ಪತ್ತೇದಾರಿಯ, ಕುತೂಹಲಕರ ಬರವಣಿಗೆಗಿಂತ ನೀತಿಬೋಧೆ ಎನ್ನುವುದು ಅವರ ಮೊದಲ ಲಕ್ಷ್ಯವಾಗಿದೆ. ಇದರಿಂದಾಗಿ ಪತ್ತೇದಾರಿಯ ಎಲ್ಲ ಲಕ್ಷಣಗಳನ್ನು ಒಳಗೊಂಡು ನೀತಿಕತೆಯೊಂದರ ಹಾದಿಯಲ್ಲಿ ಚೋರಗ್ರಹಣ ತಂತ್ರ ಕಾದಂಬರಿಯ ರಚನಾಕ್ರಮವಿದೆ. ಹೀಗೆ ಆರಂಭ ಕಾಲದ ಐದು ಕಾದಂಬರಿಗಳಲ್ಲಿ ಶಿಕ್ಷಣ ಕುರಿತ ಸಂಗತಿಗಳನ್ನು ಗಮನಿಸಲಾಗಿದೆ. ಈ ಪ್ರೌಢಪ್ರಬಂಧವು ಕನ್ನಡದಲ್ಲಿ ಕಾದಂಬರಿ–ಪ್ರಕಾರವು ರೂಪುಗೊಂಡ ಬಗೆ, ಅದಕ್ಕೆ ಒದಗಿದ ಪ್ರೇರಣೆ, ಪ್ರಭಾವಗಳನ್ನು ಕೇಂದ್ರವಾಗಿಸಿಕೊಂಡ ವಿಶಿಷ್ಟ ಅಧ್ಯಯನವಾಗಿದೆ. 'ಕಾದಂಬರಿ' ಬಗೆಗಿನ ದೀರ್ಘ ಜಿಜ್ಞಾಸೆ ನಡೆದು ಅದು ಸಾಗಿ ಬಂದ ಹಾದಿಯ ಪರಿಚಯವಿದೆ. ಕನ್ನಡದ ಆರಂಭದ ಕಾದಂಬರಿಗಳು ಆಧುನಿಕತೆಗೆ ಮುಖಾಮುಖಿಯಾಗಿರುವ ವಿವರಗಳನ್ನು ಗಮನಿಸಬಹುದು. ಅದರಂತೆ ವಸಾಹತು ಶಿಕ್ಷಣ ಕನ್ನಡ ಕಾದಂಬರಿ ಸಾಹಿತ್ಯವನ್ನು ಪ್ರೇರೇಪಿಸಿದ ಬಗೆಯನ್ನು ಈ ಸಂಶೋಧನಾ ಕೃತಿಯು ಸಾಂದರ್ಭಿಕವಾಗಿ ಚರ್ಚಿಸಿದೆ.

ಈ ಸಂಶೋಧನೆಯು ವಸಾಹತುಶಾಹಿಯ ಆಧುನಿಕತೆಯ ಹಿನ್ನೆಲೆಯಲ್ಲಿ ಕನ್ನಡದ ಆರಂಭದ ಕಾದಂಬರಿಗಳ ಹಿನ್ನಲೆಯನ್ನು ಚರ್ಚಿಸಲಾಗಿದೆ. ಹೀಗೆ ಕನ್ನಡ ಕಾದಂಬರಿಗಳನ್ನು ರೂಪಿಸಿದ ಹಲವು ಸಂಗತಿಗಳಲ್ಲಿ ವಸಾಹತು ಶಿಕ್ಷಣವೂ ಒಂದು. ಆದುದರಿಂದ ನನ್ನ ಅಧ್ಯಯನದ ನಾಲ್ಕನೆ ಅಧ್ಯಾಯದ ವಿಶ್ಲೇಷಣೆಗೆ ಶಿವರಾಮ ಪಡಿಕಲ್ ಅವರ ಸಂಶೋಧನೆ ಸಹಾಯಕವಾಗಿದೆ.

('ವಸಾಹತುಶಾಹಿ ಸಂಸ್ಕೃತಿಗೆ ಆಧುನಿಕ ಕನ್ನಡ ಕಾವ್ಯ ತೋರಿದ ಪ್ರತಿಕ್ರಿಯೆ' ಇದು ಕೆ.ಸಿ.ಶಿವಾರೆಡ್ಡಿ ಅವರು ಕಿ.ರಂ.ನಾಗರಾಜ ಅವರ ಮಾರ್ಗದರ್ಶನದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನ ಮಹಾಪ್ರಬಂಧ.) ಇದು 'ಕನ್ನಡದ ಹಾಡುಪಾಡು' ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. ಕನ್ನಡ ವಿಮರ್ಶೆಯು ಈಗಾಗಲೇ ವಸಾಹತುಶಾಹಿ, ವಸಾಹತುಶಾಹಿ ಸಂಸ್ಕೃತಿ ಕುರಿತು ಹಲವು ಬಗೆಯಲ್ಲಿ ಪ್ರತಿಕ್ರಿಯಿಸಿದೆ. ಆದರೆ ಅದನ್ನು ಪ್ರಧಾನ ಕೇಂದ್ರವಾಗಿರಿಸಿಕೊಂಡು ಅಧ್ಯಯನ ನಡೆಸಿರುವುದು ವಿರಳ.

See page 24

ಕನ್ನಡ ಸಾಹಿತ್ಯ ಇತರ ಭಾಷೆ ಮತ್ತು ಸಾಹಿತ್ಯಕ ಪರಿಸರದ ಪ್ರಭಾವಕ್ಕೆ ಒಳಗಾಗಿ ಆ ಭಾಷೆಗಳ ಮತ್ತು ಸಾಹಿತ್ಯಿಕ ಪರಿಸರಗಳೊಂದಿಗಿನ ಸಂಘರ್ಷದಲ್ಲೇ ಬೆಳೆದಿದೆ. ಅಲ್ಲದೇ ಹೊಸತನವನ್ನು, ಚೈತನ್ಯವನ್ನು ಪಡೆದುಕೊಂಡಿದೆ. ವಸಾಹತುಶಾಹಿ ಪ್ರಭಾವಕ್ಕೆ ಒಳಗಾದ ಕನ್ನಡ ಸಾಹಿತ್ಯ ಇದಕ್ಕೆ ತನ್ನ ಪ್ರತಿರೋಧವನ್ನು ಅಭಿವ್ಯಕ್ತಿಸಿದೆ. ಕನ್ನಡದ ಅಸ್ಮಿತೆಯ ಸಲುವಾಗಿ ನಡೆದ ಪ್ರತಿರೋಧವು ಕನ್ನಡ ನವೋದಯ ಕಾವ್ಯದಲ್ಲಿ ಮೈದಳೆದಿರುವ ಬಗೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಏಳು ಅಧ್ಯಾಯಗಳನ್ನು ಹೊಂದಿರುವ ಈ ಅಧ್ಯಯನ ವಿಶ್ಲೇಷಣಾತ್ಮಕ ಸ್ವರೂಪದ್ದಾಗಿದೆ.

'ಒಂದು ಕಾಲಮಾನದ ವ್ಯವಸ್ಥೆ ಮತ್ತು ಸಂಸ್ಕೃತಿಯ ಸ್ವರೂಪವನ್ನು ಗ್ರಹಿಸಿ ಅದರ ವಿಭಿನ್ನ ಸಂಬಂಧಗಳನ್ನು ವಿಶ್ಲೇಷಿಸುವುದು' ಈ ಮಹಾಪ್ರಬಂಧದ ವ್ಯಾಪ್ತಿಗೆ ಒಳಪಡುತ್ತದೆ ಎಂದು ಆರಂಭದ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯಲ್ಲಿ ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ, 'ನವೋದಯ ಪೂರ್ವಕಾವ್ಯ', 'ಬೇಂದ್ರೆ ಕಾವ್ಯ: ಸ್ಥಳೀಯತೆ, ವಸಾಹತುಶಾಹಿ', 'ಕುವೆಂಪು ಕಾವ್ಯ: ಪುರೋಹಿತಶಾಹಿ, ವಸಾಹತುಶಾಹಿ', 'ಎಂ. ಗೋಪಾಲಕೃಷ್ಣ ಅಡಿಗರ ಕಾವ್ಯ: ಸಮಕಾಲೀನ ರಾಜಕೀಯ ನೆಲೆಗಳು', 'ಚಂದ್ರಶೇಖರ ಕಂಬಾರರ ಕಾವ್ಯ: ಪರಿಸರ, ಸಾಮ್ರಾಜ್ಯಶಾಹಿ, ಸಮಕಾಲೀನ ರಾಜಕಾರಣ'. ಈ ವಿಷಯಗಳ ಅಧ್ಯಯನ ನಡೆಸಲಾಗಿದೆ. ಜೊತೆಗೆ ಈ ಅಧ್ಯಯನದ ಫಲಿತವನ್ನು ಸಮಾರೋಪದಲ್ಲಿ ಚರ್ಚಿಸಲಾಗಿದೆ. ವಿಶೇಷವಾಗಿ ಅನುಬಂಧದಲ್ಲಿ ಕುವೆಂಪು ಅವರ ಕಾದಂಬರಿಗಳು ಹಾಗೂ ನಾಟಕಗಳು ವಸಾಹತುಶಾಹಿಗೆ ನೀಡಿದ ಪ್ರತಿಕ್ರಿಯೆಗಳನ್ನು ಪರಿಶೀಲಿಸಲಾಗಿದೆ. ಕನ್ನಡದ ನವೋದಯ ಸಾಹಿತ್ಯ ವಸಾಹತುಶಾಹಿಗೆ ಪ್ರತಿರೋಧದ ರೂಪದಲ್ಲಿ ಸೃಜನೆಗೊಂಡಿದೆ. ಆದ್ದರಿಂದ ಈ ಪಂಥದ ಪ್ರಮುಖರಾದ ಬೇಂದ್ರೆ ಹಾಗೂ ಕುವೆಂಪು ಅವರ ಕಾವ್ಯದ ಪ್ರತಿಕ್ರಿಯೆಯನ್ನು ವಿಶ್ಲೇಷಿಸಿದ್ದಾರೆ.

ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯಾನಂತರದ ಎರಡೂ ಸಂದರ್ಭಗಳಲ್ಲಿ ಭಾರತದಲ್ಲಿ ಒಂದು ಸಂಕೀರ್ಣ ಸಾಂಸ್ಕೃತಿಕ ಪರಿಸರ ಸೃಷ್ಟಿಯಾಗಿದೆ. ಇದನ್ನು ಕುರಿತ ಅಭಿವ್ಯಕ್ತಿ ಐವತ್ತರ ಮತ್ತು ಅನಂತರದ ದಶಕಗಳಲ್ಲಿ ಪ್ರಕಟಗೊಂಡ ಕನ್ನಡದ ಕಾವ್ಯದಲ್ಲಿ ಅಭಿವ್ಯಕ್ತಿಗೊಂಡಿದೆ. ಈ ದೃಷ್ಟಿಯಿಂದ ಎಂ. ಗೋಪಾಲಕೃಷ್ಣ ಅಡಿಗ ಮತ್ತು ಚಂದ್ರಶೇಖರ ಕಂಬಾರರ ಕಾವ್ಯವನ್ನು ಅಧ್ಯಯನ ಮಾಡಲಾಗಿದೆ ಎಂದು ಸಂಶೋಧಕರು ವಿವರಿಸಿದ್ದಾರೆ.

ವಸಾಹತುಶಾಹಿಯು ದೇಶೀ ಸಂಸ್ಕೃತಿಯ ಬೇರನ್ನು ಸಡಿಲಗೊಳಿಸಿತು. ಇದರ ವಿರುದ್ಧವಾಗಿ ದೇಶಿ ಸಂಸ್ಕೃತಿಯ ಸತ್ವದ ಹುಡುಕಾಟ ಕನ್ನಡದಲ್ಲಿ ಆರಂಭವಾಯಿತು. ದೇಶಿ ಸಂಪ್ರದಾಯದಲ್ಲಿದ್ದ ಮೌಢ್ಯಗಳನ್ನು ವಿರೋಧಿಸುವುದರೊಡನೆ, ಪರಕೀಯವಾದ ಈ ನೆಲಕ್ಕೆ ಒಗ್ಗದ ಆಲೋಚನೆಗಳನ್ನು ವಿರೋಧಿಸಲಾಯಿತು. ವಸಾಹತುಶಾಹಿಯ

ಪ್ರಭಾವ ಮತ್ತು ಅದಕ್ಕೆ ಒಡ್ಡಿದ ಕನ್ನಡ ಕಾವ್ಯ ಪ್ರತಿರೋಧದ ಸ್ವರೂಪವನ್ನು ಈ ಅಧ್ಯಯನದಲ್ಲಿ ಹೀಗೆ ವಿವರಿಸಲಾಗಿದೆ.

> ಅಶಕ್ತ ರಾಷ್ಟ್ರಗಳನ್ನು ವಸಾಹತುಗಳನ್ನಾಗಿ ಪರಿವರ್ತಿಸಿಕೊಂಡು ವಸಾಹತುಶಾಹಿ ತನ್ನ ಅಧಿಕಾರ-ಶಕ್ತಿಗಳಿಂದ ರಾಜಕೀಯ, ಆರ್ಥಿಕ ಹಿಡಿತವನ್ನು ಸಾಧಿಸುವ ಪ್ರಕ್ರಿಯೆಗೆ ವಸಾಹತುವಾದ ಅಥವಾ ವಸಾಹತು ಸಂಸ್ಕೃತಿಯೆಂದು ಸ್ಥೂಲವಾಗಿ ಗುರುತಿಸಿಕೊಳ್ಳಬಹುದು. ಇಂಥ ಸಂಸ್ಕೃತಿಯ ಆಕ್ರಮಣಶೀಲ ನೆಲೆಗಳಿಂದ ಪ್ರತಿರೋಧಗಳನ್ನು ಒಡ್ಡುವ ಆಶಯವು ರಾಷ್ಟ್ರೀಯವಾದ, ದೇಶೀವಾದ, ಪರಿಸರವಾದಗಳೆಂದಾಗಿದೆ[೭]

ವಸಾಹತುಶಾಹಿ: ರಾಷ್ಟ್ರೀಯ-ಕರ್ನಾಟಕದ ಸಂದರ್ಭದಲ್ಲಿ – ಈ ಅಧ್ಯಾಯದಲ್ಲಿ ಭಾರತಕ್ಕೆ ವಸಾಹತುಶಾಹಿಯ ಪ್ರವೇಶ ಹಾಗೂ ಅದರಿಂದ ಉಂಟಾದ ಪರಿಣಾಮಗಳನ್ನು ಗುರುತಿಸಿಸಲಾಗಿದೆ. ಅಲ್ಲದೇ ಕರ್ನಾಟಕದಲ್ಲಿ ವಸಾಹತುಶಾಹಿ ಕಾಲಿರಿಸಿದ ರೀತಿಯನ್ನು ತಿಳಿಸಲಾಗಿದೆ.

> ಬ್ರಿಟಿಷರ ಸಾಂಸ್ಕೃತಿಕ ಹಾಗೂ ವೈಜ್ಞಾನಿಕ ವಿಚಾರಧಾರೆಗಳು ನಮ್ಮ ಮೌಢ್ಯತೆಗೆ, ಧರ್ಮ, ಜಾತಿ ಮೊದಲಾದ ಅನಿಷ್ಠ, ಆಚಾರ, ನಂಬಿಕೆಗಳ ಎಚ್ಚರ ಉಂಟುಮಾಡಿದವು. ಇದರಿಂದ ಹೊಸದೊಂದು ಸಂಸ್ಕೃತಿ ಕ್ರಾಂತಿಯನ್ನು ಹುಟ್ಟುಹಾಕಿದ ಕೀರ್ತಿ ವಸಾಹತು ಸಂಸ್ಕೃತಿಗೆ ಸಲ್ಲುತ್ತದೆ.[೮]

ಬ್ರಿಟಿಷರ ಇಂಗ್ಲಿಷ್ ಶಿಕ್ಷಣದ ಪ್ರಭಾವ ಹೊಸ ಚೈತನ್ಯವನ್ನು, ವೈಜ್ಞಾನಿಕ ಮತಿಯನ್ನು, ಹೊಸ ಎಚ್ಚರವನ್ನು ಉಂಟುಮಾಡಿತು ಎಂದು ವಸಾಹತುಶಾಹಿಯಿಂದಾಗಿ ಭಾರತೀಯರಲ್ಲಾದ ಧನಾತ್ಮಕ ಪ್ರಭಾವಗಳನ್ನು ಗುರುತಿಸಿದ್ದಾರೆ. ಈ ಅನುಕೂಲಗಳ ಪಟ್ಟಿಗೆ ರಾಷ್ಟ್ರೀಯತೆ, ಶೈಕ್ಷಣಿಕ ಪ್ರಗತಿ ಇಲ್ಲಿನ ಮೌಢ್ಯಗಳ ವಿರುದ್ಧ ಭಾರತೀಯ ಸಂಸ್ಕೃತಿಯ ಸುಧಾರಣೆ ಮುಂತಾದವುಗಳನ್ನು ಸೇರಿಸಬಹುದಾಗಿದೆ.

ಕನ್ನಡ ಸಾಹಿತ್ಯದ ಪ್ರತಿಕ್ರಿಯೆಯನ್ನು ವಿವರಿಸುವಂತೆಯೇ ರಾಷ್ಟ್ರೀಯ ಮಟ್ಟದಲ್ಲಿ ಬಂಕಿಮಚಂದ್ರರ 'ಆನಂದಮಠ' ಕೃತಿಯ ಮೂಲಕ ಬಂಗಾಳದಲ್ಲಾದ ಪಲ್ಲಟಗಳನ್ನು ಗ್ರಹಿಸಿದ್ದಾರೆ. 'ವಂದೇಮಾತರಂ' ಹಾಗೂ ಇತರ ಕೃತಿಗಳು ವಿಭಿನ್ನತೆಯ ರಾಷ್ಟ್ರದಲ್ಲಿ ಏಕತೆ ಮೂಡಿಸುವ ಸಾಹಿತ್ಯವಾಗಿವೆ ಎಂದು ಗುರುತಿಸಿದ್ದಾರೆ.

ಬಂಕಿಮಚಂದ್ರರ ಅನಂತರದಲ್ಲಿ ರವೀಂದ್ರನಾಥ ಠಾಕೂರರು ಭಾರತೀಯ ಪರಂಪರೆ ಹಾಗೂ ಪಾಶ್ಚಾತ್ಯ ಸಂಸ್ಕೃತಿಗಳ ಮುಖಾಮುಖಿಯಿಂದ ಉಂಟಾದ ದ್ವಂದ್ವಗಳನ್ನು ತಮ್ಮ ಸಾಹಿತ್ಯದಲ್ಲಿ ವಿಶ್ಲೇಷಿಸಿದ್ದಾರೆ. (ಮನೆ, ಜಗತ್ತು, ಗೋರಾ, ನೌಕಾಘಾತ ಇತ್ಯಾದಿ), ಮುಖ್ಯವಾಗಿ ಬ್ರಿಟಿಷರ ಶಿಕ್ಷಣದಿಂದ ಭಾರತೀಯರಲ್ಲಿ ಹೊಸತನಕ್ಕಿಂತ ಆಘಾತಗಳೆ ಹೆಚ್ಚಾಗಿವೆ ಎಂಬ ಶೈಕ್ಷಣಿಕ ಚಿಂತನೆಯನ್ನು ಗುರುತಿಸಿದ್ದಾರೆ. ಈ ಮೂಲಕ ವಸಾಹತುಶಾಹಿ ಶಿಕ್ಷಣವು ಈ ದೇಶದ ಮೇಲೆ ಬೀರಿರುವ ಪ್ರಭಾವಗಳನ್ನು ಅಧ್ಯಯನ ಮಾಡಬೇಕೆಂಬ

ಹೊಳಹನ್ನು ನೀಡಿದ್ದಾರೆ. ಠಾಕೂರರ ಈ ರೀತಿಯ ಚಿಂತನೆಗಳು ರಾಷ್ಟ್ರದ ಇತರ ಬರಹಗಾರರ ಮೇಲೆ ಬೀರಿದ ಪ್ರಭಾವಗಳನ್ನು ಗುರುತಿಸಲಾಗಿದೆ.

ಮೂರನೇ ಅಧ್ಯಾಯವಾದ 'ನವೋದಯ ಪೂರ್ವಕಾವ್ಯ'ದಲ್ಲಿ ಸಾಹಿತ್ಯಕ ದೇಸಿತನವನ್ನು ದುರ್ಬಲಗೊಳಿಸಿದ ವಸಾಹತುಶಾಹಿಗೆ ಆರಂಭವಾದ ವಿರೋಧವನ್ನು ತತ್ವಪದ, ಜನಪದ ಗೀತೆಗಳ ಚೌಕಟ್ಟಿನಲ್ಲಿ ವಿಶ್ಲೇಷಿಸಲಾಗಿದೆ. ಬೇಂದ್ರೆ ಕಾವ್ಯ: ಸ್ಥಳೀಯತೆ, ವಸಾಹತುಶಾಹಿ, ಕುವೆಂಪು ಕಾವ್ಯ: ಪುರೋಹಿತಶಾಹಿ ಈ ಅಧ್ಯಾಯಗಳಲ್ಲಿ ನವೋದಯ ಸಂದರ್ಭದಲ್ಲಾದ ಪ್ರಕ್ರಿಯೆಗಳಿಗೆ ಬೇಂದ್ರೆ, ಕುವೆಂಪು ಅವರುಗಳ ಕಾವ್ಯಗಳಲ್ಲಿ ವ್ಯಕ್ತಪಡಿಸಿದ ಪ್ರತಿಕ್ರಿಯೆಗಳನ್ನು ಪರಿಶೀಲಿಸಲಾಗಿದೆ. ಸ್ವಾತಂತ್ರ್ಯ ಗಳಿಕೆಯಲ್ಲಾದ ಏರು-ಪೇರುಗಳು, ಇದರೊಡನೆ ಸಾಗಿ ಬಂದ ಏಕೀಕರಣ ಚಳವಳಿ, ಈ ಹಿನ್ನೆಲೆಯಲ್ಲಿ ನಾಡು-ನುಡಿ ಚಿಂತನೆಗಳ ಮೂಲಕ ಇವರ ಕಾವ್ಯದ ನೆಲೆಯನ್ನು ಗ್ರಹಿಸುವ ಪ್ರಯತ್ನ ಮಾಡಲಾಗಿದೆ.

ಬೇಂದ್ರೆ, ಕುವೆಂಪು ಅವರಂತೆಯೇ ಭೂತ-ವರ್ತಮಾನಗಳ ತಾಕಲಾಟ, ಸ್ವಾತಂತ್ರ್ಯಾನಂತರ ಅಪಮೌಲ್ಯಗೊಂಡ ವಿಚಾರಗಳ ಬಗ್ಗೆ ಗೋಪಾಲ ಕೃಷ್ಣ ಅಡಿಗರ ಕಾವ್ಯ, ವಸಾಹತುಶಾಹಿ ಪರಿಣಾಮವಾಗಿ ಗ್ರಾಮೀಣ ಸಂಸ್ಕೃತಿಯಲ್ಲಿ ಉಂಟಾದ ಸಂದಿಗ್ಧತೆಗೆ ವಿರುದ್ಧವಾದ ಸ್ಥಿತಿಯನ್ನು ಅದಕ್ಕೆ ಪರ್ಯಾಯವಾಗಿ ದೇಸಿ ಸತ್ವವನ್ನು ಕಂಡುಕೊಳ್ಳಬೇಕಾದ 'ಸ್ವ ಎಚ್ಚರ'ವನ್ನು ಸೂಚಿಸುವ ಕಂಬಾರರ ಕಾವ್ಯವನ್ನು ಅಧ್ಯಯಕ್ಕೆ ಒಳಗು ಮಾಡಿದ್ದಾರೆ. ಹೀಗೆ ಕಾವ್ಯವನ್ನು ಕೇಂದ್ರವಾಗಿರಿಸಿಕೊಂಡು ನಡೆದಿರುವ ಈ ಅಧ್ಯಯನವನ್ನು ಕನ್ನಡ ಸಾಹಿತ್ಯದ ಇತರ ಪ್ರಕಾರಗಳಿಗೂ ಹಾಗೂ ಇತರ ಸಾಂಸ್ಕೃತಿಕ ಅಭಿವ್ಯಕ್ತಿಗಳ ಸಂದರ್ಭಕ್ಕೂ ಅನ್ವಯಿಸಬಹುದೆಂದು ತಿಳಿಸಿದ್ದಾರೆ. ಆ ಮೂಲಕ ವಿಸ್ತೃತವಾದ ಅಧ್ಯಯನಕ್ಕೆ ಅವಕಾಶವಿರುವುದನ್ನು ಪ್ರಬಂಧಕಾರರು ತಿಳಿಸಿದ್ದಾರೆ.

ಈ ಅಧ್ಯಯನದಲ್ಲಿ ಬಂಕಿಮ ಚಂದ್ರ ಮತ್ತು ರವೀಂದ್ರನಾಥ ಠಾಕೂರರ ಸಾಹಿತ್ಯವನ್ನು ವಿಶ್ಲೇಷಿಸಿದ್ದಾರೆ. ಬ್ರಿಟಿಷರ ಶಿಕ್ಷಣದಿಂದ ಭಾರತೀಯರಲ್ಲಿ ಹೊಸತನಕ್ಕಿಂತ ಆಘಾತಗಳೇ ಹೆಚ್ಚಾಗಿವೆ ಎಂಬುದನ್ನು ವಿವರಿಸಿದ್ದಾರೆ. ಅಲ್ಲದೆ ವಸಾಹತುಶಾಹಿ ಶಿಕ್ಷಣವು ದೇಶದ ಮೇಲೆ ಉಂಟುಮಾಡಿದ ಪ್ರಭಾವಗಳನ್ನು ಕುರಿತು ಅಧ್ಯಯನ ಮಾಡಬಹುದೆಂಬ ಹೊಳಹನ್ನು ಸೂಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ರಾಷ್ಟ್ರೀಯ ಚಿಂತಕರ ಚಿಂತಕರ ಶೈಕ್ಷಣಿಕ ಚಿಂತನೆಗಳನ್ನು ಅರ್ಥೈಸುವಲ್ಲಿ ಕೆ.ಸಿ. ಶಿವಾರೆಡ್ಡಿಯವರ ಸಂಶೋಧನಾ ಪ್ರಬಂಧ ನೆರವಾಗಿದೆ.

'ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು' ಇದು ಐ.ಜೆ.ಮ್ಯಾಗೇರಿ ಅವರು ವೀರೇಶ ಬಡಿಗೇರ ಅವರ ಮಾರ್ಗದರ್ಶನದಲ್ಲಿ ಅಧ್ಯಯನ ನಡೆಸಿ ಕನ್ನಡ

ವಿಶ್ವವಿದ್ಯಾನಿಲಯಕ್ಕೆ (೨೦೦೨) ಸಲ್ಲಿಸಿರುವ ಪಿಎಚ್.ಡಿ. ಮಹಾಪ್ರಬಂಧ.) ಇದನ್ನು ಕನ್ನಡ ಸಾಹಿತ್ಯ ಪರಿಷತ್ತು ೨೦೦೮ ರಲ್ಲಿ ಪ್ರಕಟಿಸಿದೆ. ಈ ಪ್ರಬಂಧದಲ್ಲಿ ಸಂಶೋಧಕರು –

> ವಸಾಹತುಶಾಹಿಯ ಪಡಿನೆರಳಲ್ಲಿ ರೂಪುಗೊಂಡ ಕನ್ನಡ ಸಂಸ್ಕೃತಿಯೊಂದರ ಅಸ್ತಿತ್ವವನ್ನು ಕಾದಂಬರಿಗಳ ಮೂಲಕ ಕಂಡುಕೊಳ್ಳುವುದು ಮತ್ತು ಸಾಂಸ್ಕೃತಿಕ ವಾಗ್ವಾದಗಳನ್ನು ಮಂಡಿಸುವುದು ಈ ಅಧ್ಯಯನದ ಉದ್ದೇಶ್ ಎಂದಿದ್ದಾರೆ.

ಕನ್ನಡದ ಆಯ್ದ ಕಾದಂಬರಿಗಳನ್ನು ಆಕರ ಗ್ರಂಥಗಳನ್ನಾಗಿ ಬಳಸಿಕೊಳ್ಳಲಾಗಿದೆ. ಈ ಕಾದಂಬರಿಗಳ ನಿರ್ಮಾಣದ ಹಿಂದಿರುವ ಪ್ರೇರಣೆ, ಪ್ರಭಾವಗಳ ಬಗ್ಗೆ ಚರ್ಚಿಸಲಾಗಿದೆ. 'ಅಧ್ಯಯನದ ಸ್ವರೂಪ ಮತ್ತು ತಾತ್ವಿಕ ಚೌಕಟ್ಟು', 'ವಸಾಹತುಶಾಹಿಯ ಸ್ವರೂಪ, ತಾತ್ವಿಕತೆ ಮತ್ತು ಚಿಂತನೆ', 'ವಸಾಹತುಶಾಹಿ ಅನುಭವ ಮತ್ತು ಕನ್ನಡ ಸಾಹಿತ್ಯ' 'ವಸಾಹತುಶಾಹಿ ಅನುಭವ ಪ್ರಮುಖ ಕನ್ನಡ ಕಾದಂಬರಿಗಳ ಮೂಲಕ' 'ಅಲೆಮಾರಿ ಅನುಭವಗಳು' 'ಸಮಾರೋಪ' – ಈ ಬಗೆಯಲ್ಲಿ ಅಧ್ಯಾಯಗಳನ್ನು ವಿಂಗಡಿಸಿಕೊಳ್ಳಲಾಗಿದೆ.

'ವಸಾಹತುಶಾಹಿಯ ಸ್ವರೂಪ, ಪರಿಕಲ್ಪನೆ ಮತ್ತು ತಾತ್ವಿಕತೆ' ಎಂಬ ಅಧ್ಯಾಯದಲ್ಲಿ 'ವಸಾಹತುಶಾಹಿ' ಪರಿಕಲ್ಪನೆಯನ್ನು ಕುರಿತು ಸುದೀರ್ಘವಾಗಿ ಚರ್ಚಿಸಲಾಗಿದೆ. ಕಾಲೋನಿ ಎಂದರೆ ವಸಾಹತು. ಅಂದರೆ ವ್ಯಾಪಾರ ಮಳಿಗೆ, ವಲಸೆ ಬಂದವರ ಪ್ರದೇಶ, ವಿದೇಶಿ ಜನರ ಗುಂಪು, ಇತ್ಯಾದಿ ನಿಘಂಟು ಅರ್ಥಗಳಿವೆ. ಇನ್ನೂ ಮುಂದುವರಿದು 'ಹೀನಾಯ ಪ್ರಜ್ಞೆಯಿಂದ ಹಿಂದುಳಿದ ಅಥವಾ ದುರ್ಬಲ ಜನಾಂಗವನ್ನು ಶೋಷಿಸುವ ಅತ್ಯಂತ ದೊಡ್ಡ ಶಕ್ತಿಯೆಂದು ಅರ್ಥೈಸಲಾಗಿದೆ' ಎನ್ನುವ ವಸಾಹತುಶಾಹಿಯ ಪದದ ಅರ್ಥದಿಂದ ಆರಂಭಗೊಂಡು ಭಾರತೀಯ ಸಾಂಸ್ಕೃತಿಕ ಸಂದರ್ಭದಲ್ಲಿ ಅದು ಉಂಟು ಮಾಡಿದ ಪ್ರಭಾವಳಿಯನ್ನು ಗುರುತಿಸಿದ್ದಾರೆ.

ಈ ಅಧ್ಯಾಯದಲ್ಲಿ ಭಾರತೀಯ ನೆಲಕ್ಕೆ ವಸಾಹತುಶಾಹಿ ಕಾಲಿಟ್ಟ ಸಂದರ್ಭವನ್ನು ಗುರುತಿಸಿದ್ದಾರೆ. ಅನಂತರದ ಕಾಲದಲ್ಲಿ ಭಾರತೀಯ ದೇಸಿ ಸಂಸ್ಕೃತಿಯ ಮೇಲೆ ವಸಾಹತುಶಾಹಿಯು ಬೀರಿದ ಪ್ರಭಾವವನ್ನು ಕುರಿತು ಚರ್ಚಿಸಲಾಗಿದೆ. ಆಧುನಿಕ ಚಳವಳಿಗಳು ಮತ್ತು ಚಿಂತನೆಗಳ ಹಿನ್ನೆಲೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ರಾಷ್ಟ್ರೀಯ ಪ್ರಜ್ಞೆ ಹಾಗೂ ವಸಾಹತುಶಾಹಿಯ ವಿರೋಧಿ ನೆಲೆಗಳನ್ನು ಕುರಿತು ಅಭ್ಯಸಿಸಲಾಗಿದೆ.

'ದನಿಯಾಗದ ಸಮುದಾಯಗಳ ಕನಸು' ಉಪಶೀರ್ಷಿಕೆಯಲ್ಲಿ ಭಾರತೀಯ ತಳಸಮುದಾಯದವರು ಶಿಕ್ಷಣದಿಂದ ಹೇಗೆ ವಂಚಿತರಾಗಿದ್ದರು ಎಂಬುದರ ಬಗ್ಗೆ ವಿವರವಿದೆ. ಬ್ರಿಟಿಷರು ಸ್ಥಾಪಿಸಿದ ಇಂಗ್ಲಿಷ್ ಶಾಲೆ ಮತ್ತು ಉದಾರವಾದಿ ಶಿಕ್ಷಣ ಕೆಳಜಾತಿ, ಕೆಳವರ್ಗಗಳ ಭವಿಷ್ಯತ್ತಿನ ಪಾಲಿಗೆ ಭರವಸೆಯ ನೆಲೆಗಳಾಗಿದ್ದವು ಎನ್ನುತ್ತಾರೆ.

ಬಿ.ಆರ್. ಅಂಬೇಡ್ಕರ್ ಮತ್ತು ಕುವೆಂಪು ಅವರನ್ನು ಉದಾಹರಿಸುತ್ತಾ ಆಧುನಿಕ ಶಿಕ್ಷಣದಿಂದ ಉಂಟಾದ ಬದಲಾವಣೆಗಳನ್ನು ದಾಖಲಿಸುತ್ತಾರೆ.

ಗಾಂಧಿ ಮತ್ತು ಮಾರ್ಕ್ಸ್, ಆಧುನಿಕ ಭಾರತೀಯ ಚಿಂತಕರ ಚಿಂತನೆಗಳು, ಗಾಂಧೀಜಿಯವರ ಹೋರಾಟ ಮತ್ತು ಜನತೆಯ ಪ್ರೀತಿ, ಗಾಂಧೀಜಿಯವರ ದೇಸಿ ಚಿಂತನೆ: ಸ್ವರಾಜ್ ಮತ್ತು ಹಿಂದ್ ಸ್ವರಾಜ್ ಉಪಶೀರ್ಷಿಕೆಗಳಲ್ಲಿ ಗಾಂಧಿ ವಸಾಹತುಶಾಹಿಗೆ ತೋರಿದ ನಿಲುವುಗಳನ್ನು ಕುರಿತು ಚರ್ಚಿಸಿದ್ದಾರೆ.

'ವಸಾಹತುಶಾಹಿ ಅನುಭವ ಮತ್ತು ಕನ್ನಡ ಸಾಹಿತ್ಯ' – ಈ ಅಧ್ಯಾಯದಲ್ಲಿ ವಸಾಹತುಶಾಹಿ ಸಂದರ್ಭ ಮತ್ತು ಕನ್ನಡ ಕಾದಂಬರಿಗಳ ಕುರಿತ ಚರ್ಚೆ ನಡೆದಿದೆ. ಕನ್ನಡ ಕಾದಂಬರಿಗಳ ಉಗಮಕ್ಕೆ ಕಾರಣವಾಗಿರುವ ಸಂಸ್ಕೃತಿಯ ತುರ್ತನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಓದುಗ ವರ್ಗ, ಕಥನ ಪರಂಪರೆ ಮತ್ತು ಸಾಂಸ್ಕೃತಿಕ ಕಲ್ಪನೆ ಭಾಷಾಂತರ ಪ್ರಕ್ರಿಯೆ ಮತ್ತು ವಸಾಹತುಶಾಹಿ ರಾಜಕಾರಣ, ವೈಚಾರಿಕತೆ ಮತ್ತು ಗದ್ಯದ ವಿಕಾಸ, ವಾಸ್ತವವಾದ ಮತ್ತು ರಮ್ಯವಾದ ಈ ಸಂಗತಿಗಳನ್ನು ಕುರಿತ ವಿವರಗಳನ್ನು ಚರ್ಚಿಸುತ್ತ ಕನ್ನಡ ಕಾದಂಬರಿ ಪ್ರಕಾರ ರೂಪುಗೊಂಡ ಸಂದರ್ಭವನ್ನು ಗುರುತಿಸಲಾಗಿದೆ. 'ಕನ್ನಡ ಕಾದಂಬರಿಗಳಲ್ಲಿ ನಿರೂಪಿತವಾಗಿರುವ ವಸಾಹತುಶಾಹಿ ಅನುಭವ' ಈ ಉಪಶೀರ್ಷಿಕೆಯಲ್ಲಿ ಆರಂಭ ಕಾಲದ ಕಾದಂಬರಿಗಳ ಅಧ್ಯಯನ ನಡೆದಿದೆ.

> ವಸಾಹತುಶಾಹಿಗೆ ಎರಡು ನಿರ್ದಿಷ್ಟ ಅರ್ಥಗಳಿವೆ. ಒಂದು ವಸಾಹತುಶಾಹಿ ಎನ್ನುವುದು ಪಠ್ಯಗಳನ್ನು ಓದುವ ಒಂದು ಹೊಸ ಕ್ರಮ. ಎರಡು ವಸಾಹತುಶಾಹಿ ಎಂದರೆ ಹೊಸ ವಿನ್ಯಾಸದ ಸಮಾಜೋ ಆರ್ಥಿಕ ಮತ್ತು ತಾಂತ್ರಿಕ ರಚನೆಗಳ ಉತ್ಪತ್ತಿ[೧೦]

ಎಂದಿದ್ದಾರೆ. ಈ ಅಧ್ಯಾಯದಲ್ಲಿ ನಿರ್ಮಾಣ ಮತ್ತು ನಾಶ, ಧರ್ಮ ಮತ್ತು ಜಾತಿ ಗ್ರಾಮೀಣ ಪರಂಪರೆಯ ಬದಲಾವಣೆ, ಭಾಷೆ ಮತ್ತು ಶಿಕ್ಷಣದ ಆಯ್ಕೆ, ನೆಲದ ಪ್ರಶ್ನೆ ಮತ್ತು ಫ್ಯೂಡಲಿಸಂನ ಚಿತ್ರಣ, ರಾಷ್ಟ್ರೀಯತೆಯ ಅನುಭವ– ಈ ಸಂಗತಿಗಳ ಬಗೆಗಿನ ಚರ್ಚೆ ನಡೆದಿದೆ.

'ಭಾಷೆ ಮತ್ತು ಶಿಕ್ಷಣದ ಆಯ್ಕೆ' ಈ ಉಪಶೀರ್ಷಿಕೆಯಲ್ಲಿ ಇಂಗ್ಲಿಷ್ ಶಿಕ್ಷಣ ಪದ್ಧತಿಯ ಸ್ವೀಕಾರ ಮತ್ತು ನಿರಾಕರಣೆಯನ್ನು ಕುರಿತು ಚರ್ಚೆಯನ್ನು ಆರಂಭಿಸುವ ಸಂಶೋಧಕರು ವಿವರಗಳಿಗೆ ಹೋಗದೆ 'ಮರಳಿ ಮಣ್ಣಿಗೆ' ಕಾದಂಬರಿಯನ್ನು ಉದಾಹರಿಸುತ್ತಾರೆ. ಕಾರಂತರು ಈ ಸಂಗತಿಯನ್ನು ನಿರೂಪಿಸಿರುವ ಹಿನ್ನೆಲೆಯನ್ನು ವಿವರಿಸುತ್ತಾರೆ.

ಸಮಾಜದ ಮೇಲ್ವರ್ಗದವರಿಗೆ ಆಧುನಿಕ ಶಿಕ್ಷಣ ಜಾತಿಯ ಪಾವಿತ್ರ್ಯಕ್ಕೆ ಧಕ್ಕೆ ತರುತ್ತದೆ ಎನಿಸುತ್ತದೆ. ಅಲ್ಲದೇ ಅದೇ ಮೇಲ್ವರ್ಗ ತಳಸಮುದಾಯದವರು ಶಿಕ್ಷಿತರಾಗಬಾರದೆಂದು ಬಯಸುತ್ತದೆ. ಇದರ ಕಾರಣಗಳನ್ನು ಶೋಧಿಸಿದರೆ 'ಒಕ್ಕಲು ಮಕ್ಕಳು ಶಿಕ್ಷಿತರಾದರೆ ಮುಂದಿನ ದಿನಗಳಲ್ಲಿ ತಮ್ಮ ಜಮೀನಿನ ಕೆಲಸಗಳಿಗೆ ಕೂಲಿಯಾಳುಗಳು ಸಿಗುವುದಿಲ್ಲ' ಎನ್ನುವಲ್ಲಿ ಮೇಲ್ಜಾತಿಯವರ ಸ್ವಾರ್ಥ ಚಿಂತನೆ ಕಾಣಿಸುತ್ತದೆ. 'ವಸಾಹತುಶಾಹಿ ಅನುಭವ, ಪ್ರಮುಖ ಕನ್ನಡ ಕಾದಂಬರಿಗಳ ಮೂಲಕ' ಎನ್ನುವ ನಾಲ್ಕನೇ ಅಧ್ಯಾಯದಲ್ಲಿ ಆಯ್ದ ಹತ್ತು ಕಾದಂಬರಿಯನ್ನು ಕೇಂದ್ರವಾಗಿರಿಸಿಕೊಂಡು ಕಾದಂಬರಿಗಳಲ್ಲಿ ವ್ಯಕ್ತಗೊಂಡಿರುವ ವಸಾಹತುಶಾಹಿ ಅನುಭವಗಳ ಬಗ್ಗೆ ಅಧ್ಯಯನ ನಡೆಸಿದ್ದಾರೆ.

> ಇಂಗ್ಲಿಷ್ ಶಿಕ್ಷಣ ತಂದ ಹೊಸ ವಿಚಾರ, ವಿಕೃತಿಗಳನ್ನು ಸೂಕ್ಷ್ಮವಾಗಿ ದಾಖಲು ಮಾಡಿರುವಂತೆ ಕಾರಂತರು ಈ ಆಧುನಿಕ ಶಿಕ್ಷಣದ ಮೂಲಕ ದೊರಕಿದ ಸ್ವ ಅರಿವು, ಆತ್ಮ ವಿಮರ್ಶೆ ಮತ್ತು ಹೊಸ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯನ್ನು ಅಷ್ಟೆ ಸೂಕ್ಷ್ಮವಾಗಿ ದಾಖಲಿಸಿದ್ದಾರೆ[೧೧]

ಎನ್ನುವ ನಿಲುವಿಗೆ ಬರುತ್ತಾರೆ. ಹೀಗೆ ಈ ಪ್ರೌಢಪ್ರಬಂಧವು ಕನ್ನಡದ ಆಯ್ದ ಹತ್ತು ಕಾದಂಬರಿಗಳ ಅಧ್ಯಯನದಿಂದ ಕನ್ನಡ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ವಸಾಹತುಶಾಹಿ ಅನುಭವಗಳನ್ನು ಕಟ್ಟಿಕೊಡುವ ಪ್ರಯತ್ನ ನಡೆದಿದೆ. ಇಂಗ್ಲಿಷ್ ಶಿಕ್ಷಣ ಪದ್ಧತಿಯು ಕನ್ನಡ ಕಾದಂಬರಿಗಳ ಮೇಲೆ ಬೀರಿದ ಪ್ರಭಾವಗಳನ್ನು ಆಂಶಿಕವಾಗಿ ಚರ್ಚಿಸಲಾಗಿದೆ. ವಸಾಹತುಶಾಹಿಯ ತಾತ್ವಿಕ ಚಿಂತನೆಯನ್ನು ಈ ಪ್ರಬಂಧ ಮುಖ್ಯ ಕೇಂದ್ರವಾಗಿ ಗ್ರಹಿಸದೆ ಅನ್ಯ ವಿಷಯಗಳ ಸಹಾಯದಿಂದ ವಸಾಹತುಶಾಹಿ ಅನುಭವವನ್ನು ನಿರೂಪಿಸುವ ಪ್ರಯತ್ನವನ್ನು ಈ ಪ್ರೌಢ ಪ್ರಬಂಧದಲ್ಲಿ ಗುರುತಿಸಬಹುದು.

ಐ.ಜಿ. ಮ್ಯಾಗೇರಿಯವರ ಸಂಶೋಧನೆಯು ವಸಾಹತುಶಾಹಿ ಚಿಂತನೆಗೆ ಕನ್ನಡ ಕಾದಂಬರಿ ಪ್ರಕಾರ ಪ್ರತಿಕ್ರಿಯಿಸಿರುವುದನ್ನು ನಿರೂಪಿಸಿದೆ. ಈ ಅಧ್ಯಯನದಲ್ಲಿ ವಸಾಹತುಶಾಹಿ ಎಂದರೇನು? ಅದು ಭಾರತದಲ್ಲಿ ರೂಪುಗೊಂಡ ಬಗೆಯ ಹಿನ್ನೆಲೆಯನ್ನು ವಿವರಿಸಿದ್ದಾರೆ. ಈ ಅಧ್ಯಯನದಿಂದ ಕನ್ನಡ ಕಾದಂಬರಿಗಳ ವಸಾಹತು ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆಯನ್ನು ನಿರ್ವಚಿಸುವ ಪ್ರಸ್ತುತ ಅಧ್ಯಯನಕ್ಕೆ ಈ ಅಧ್ಯಯನ ಪೂರಕವಾಗಿದೆ.

'ಆಧುನಿಕ ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ (೧೮೮೧-೧೯೮೭)' ಇದು ಎಂ. ಆರ್. ರವಿಯವರು ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗಕ್ಕೆ ಸಲ್ಲಿಸಿರುವ ಪಿಎಚ್.ಡಿ ಮಹಾಪ್ರಬಂಧ (ಮಾರ್ಗದರ್ಶಕರು ಪ್ರೊ.ಎನ್.ಸರಸ್ವತಿ ಮತ್ತು ಪ್ರೊ.ಆರ್.ರಾಜಣ್ಣ). ಇದು ಮೈಸೂರಿನ ಸಂವಹನ ಪ್ರಕಾಶನದಿಂದ ೨೦೧೪ ರಲ್ಲಿ

ಪ್ರಕಟಗೊಂಡಿದೆ. ಚಾರಿತ್ರಿಕ ಸಂಗತಿಗಳನ್ನು ಮುಖ್ಯ ಆಕರಗಳನ್ನಾಗಿ ಬಳಸಿಕೊಂಡಿರುವ ಈ ಅಧ್ಯಯನವು ೧೮೮೧ರಿಂದ ೧೯೪೭ರವರೆಗಿನ ೬೬ವರ್ಷಗಳ ಮೈಸೂರು ಸಂಸ್ಥಾನದ ಇತಿಹಾಸವನ್ನು ಕೇಂದ್ರವಾಗಿರಿಸಿಕೊಂಡಿದೆ. ಅದರಲ್ಲಿಯೂ ಅಸ್ಪೃಶ್ಯರು ಮತ್ತು ಮಹಿಳೆಯರ ಶಿಕ್ಷಣದ ಬಗ್ಗೆ ಅಧ್ಯಯನ ನಡೆಸಲಾಗಿದೆ.

ಭೌಗೋಳಿಕ ಸನ್ನಿವೇಶ, ಆಧುನಿಕ ಶಿಕ್ಷಣ ಪ್ರವೇಶ, ಸಾಹಿತ್ಯ ಅವಲೋಕನ, ಸಮಸ್ಯೆ ವ್ಯಾಖ್ಯಾನ, ಐತಿಹಾಸಿಕ ಹಿನ್ನೆಲೆ, ಈ ಉಪಶೀರ್ಷಿಕೆಗಳನ್ನು ಪೀಠಿಕಾ ವಿಭಾಗವು ಒಳಗೊಂಡಿದೆ. ಮೈಸೂರು ಸಂಸ್ಥಾನದ ಭೌಗೋಳಿಕ ವಿಸ್ತಾರಗಳ ವಿವರ ನೀಡಲಾಗಿದೆ. ಈ ಪ್ರದೇಶಕ್ಕೆ ಆಧುನಿಕ ಶಿಕ್ಷಣ ಪ್ರವೇಶ ಪಡೆದ ಚಾರಿತ್ರಿಕ ಸಂಗತಿಯನ್ನು ಚರ್ಚಿಸಲಾಗಿದೆ. ಬ್ರಾಹ್ಮಣರಿಗೆ ಮಾತ್ರ ಕಲಿಯುವ ಅವಕಾಶವಿತ್ತು ಎಂಬುದನ್ನು ನಿರೂಪಿಸಲಾಗಿದೆ. ರಾಜಕೀಯ ಆಡಳಿತದ ಈ ಬೃಹತ್ ವ್ಯವಸ್ಥೆಗೆ ಸಿಬ್ಬಂದಿಗಾಗಿ ಶಿಕ್ಷಣ ಪಡೆದ ವ್ಯಕ್ತಿಗಳು ಅಪಾರ ಸಂಖ್ಯೆಯಲ್ಲಿ ಅಗತ್ಯವಾಗಿದ್ದರು. ಹಾಗಾಗಿ ಬ್ರಿಟಿಷ್ ಆಡಳಿತದ ಅಗತ್ಯ ಆಡಳಿತಾತ್ಮಕ ಸಜ್ಜಿಗೆ ಬೇಕಾದಂತಹ ಸುಶಿಕ್ಷಿತರನ್ನು ಒದಗಿಸಲು ಭಾರತದಲ್ಲಿ ಶಾಲೆಗಳನ್ನು ಮತ್ತು ಕಾಲೇಜುಗಳನ್ನು ಸ್ಥಾಪಿಸುವುದು ಅತ್ಯಗತ್ಯವಾಗಿತ್ತು. ಬ್ರಿಟಿಷ್ ಸರ್ಕಾರ ರಾಜ್ಯದ ಆಡಳಿತದಲ್ಲಿ ಪ್ರಮುಖ ಹುದ್ದೆಗಳನ್ನು ಯುರೋಪಿಯನ್ನರಿಗೆ ಎಚ್ಚರಿಕೆಯಿಂದ ವಹಿಸಿತ್ತು ಮತ್ತು ಅಧೀನ ಹುದ್ದೆಗಳಿಗೆ ವಿದ್ಯಾವಂತ ಭಾರತೀಯರನ್ನು ತುಂಬಿತು. ಹಾಗಾಗಿ ರಾಜಕೀಯಾತ್ಮಕ, ಆಡಳಿತಾತ್ಮಕ ಹಾಗೂ ಆರ್ಥಿಕ ಅಗತ್ಯಗಳು ಬ್ರಿಟಿಷ್ ಸರ್ಕಾರ ಭಾರತದಲ್ಲಿ ಶಾಲಾ-ಕಾಲೇಜುಗಳನ್ನು ಸ್ಥಾಪಿಸಲು ಮುಖ್ಯವಾಗಿ ಕಾರಣವಾದವು, ಹೀಗೆ ಮೈಸೂರು ಸಂಸ್ಥಾನದಲ್ಲಿ ಆಧುನಿಕ ಶಿಕ್ಷಣ ಜಾರಿಗೆ ಬರಲು ಉಂಟಾದ ಒತ್ತಡವನ್ನು ವಿವರಿಸಲಾಗಿದೆ. ೧೮೮೧ರವರೆಗೆ ಆಧುನಿಕ ಶಿಕ್ಷಣದ ಇತಿಹಾಸ - ಅಧ್ಯಾಯದಲ್ಲಿ ಮಿಷನರಿಗಳ ಪಾತ್ರ, ಕಮಿಷನರ್ ಆಳ್ವಿಕೆಯ ಅಂತ್ಯದ ವೇಳೆಗೆ ಶಿಕ್ಷಣದ ಸ್ಥಾನ ಈ ಮೊದಲಾದ ಸಂಗತಿಗಳನ್ನು ಕುರಿತ ವಿಶ್ಲೇಷಣೆ ನಡೆದಿದೆ.

ಆಧುನಿಕ ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ, ಆಧುನಿಕವಾದಿಗಳ ವಿರುದ್ಧ ಸಂಪ್ರದಾಯವಾದಿಗಳು, ಜಾತಿ, ಸಂಘ-ಸಂಸ್ಥೆಗಳ ಪಾತ್ರ, ಸಾಮಾಜಿಕ-ರಾಜಕೀಯ ಚಲನಶೀಲತೆ, ಸಂಪೂರ್ಣ ನಿರ್ಲಕ್ಷ್ಯ, ಅಪಹಾಸ್ಯ, ಟೀಕೆ ಮತ್ತು ಸ್ವೀಕಾರ ನಿಮ್ನ ವರ್ಗಗಳ ಉನ್ನತೀಕರಣ-ಈ ಉಪಶೀರ್ಷಿಕೆಗಳಲ್ಲಿ ಚರ್ಚಿತಗೊಂಡಿರುವ ಹಲವು ಸಂಗತಿಗಳು ಮೈಸೂರು ಸಂಸ್ಥಾನದಲ್ಲಿ ಅಸ್ಪೃಶ್ಯರಿಗೆ ಶಿಕ್ಷಣ ನೀಡುವ ದಿಕ್ಕಿನಲ್ಲಿ ನಡೆದ ಪ್ರಯತ್ನಗಳ ಸಾಫಲ್ಯವನ್ನು ಚರ್ಚಿಸಲಾಗಿದೆ.

'ಚರಿತ್ರೆ' ಈ ಸಂಶೋಧನೆಯ ಮುಖ್ಯ ಕೇಂದ್ರ, ಒಂದು ನಿರ್ದಿಷ್ಟ ಪ್ರದೇಶ, ನಿರ್ದಿಷ್ಟ ಕಾಲಮಾನದ ಕಥಾನಕದ ವಿಶ್ಲೇಷಣೆಯ ಫಲ ಈ ಪ್ರೌಢಪ್ರಬಂಧ. ಬ್ರಿಟಿಷರ ವಸಾಹತುಶಾಹಿಗೆ ಒಳಗಾಗಿದ್ದ ಮೈಸೂರು ಸಂಸ್ಥಾನದಲ್ಲಿ ಪ್ರಭುತ್ವದ ಇಚ್ಛಾಶಕ್ತಿಯ ಫಲವಾಗಿ ತಳಸಮುದಾಯವರಿಗೆ ಶಿಕ್ಷಣ ದೊರೆಯಲು ಅವಕಾಶ ದೊರೆಯಿತು. ಇಂತಹ

ಸನ್ನಿವೇಶ ಸೃಷ್ಟಿಯಾದುದರ ಹಿಂದಿನ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಆ ಕಾಲದ ಶಿಕ್ಷಣ ಕೇಂದ್ರಗಳ ಅಂಕಿ-ಅಂಶಗಳನ್ನು ನೀಡಲಾಗಿದೆ. ದೇಶದ ಇತರೆಡೆಯೆಲ್ಲ ಬ್ರಿಟಿಷರು ನೇರ ಆಳ್ವಿಕೆ ನಡೆಸುತ್ತಿದ್ದ ಕಾಲಮಾನದಲ್ಲಿ ಮೈಸೂರು ಒಡೆಯರು ತಮ್ಮ ಪ್ರಜೆಗಳ ಶ್ರೇಯೋಭಿವೃದ್ಧಿಗೆ ಶ್ರಮಿಸಿದ ಸಂಗತಿಗಳ ಚಾರಿತ್ರಿಕ ಅಧ್ಯಯನವನ್ನು ಈ ಕೃತಿ ಒಳಗೊಂಡಿದೆ.

ಎಂ.ಆರ್. ರವಿಯವರ ಪ್ರೌಢಪ್ರಬಂಧವು ಮೈಸೂರು ಸಂಸ್ಥಾನವನ್ನು ಅಧ್ಯಯನದ ಕೇಂದ್ರವಾಗಿಸಿಕೊಂಡಿದೆ. ಆದುದರಿಂದ ಒಂದು ಕಾಲದ ಕರ್ನಾಟಕದ ಬಹುಭಾಗದಲ್ಲಿ ಮೈಸೂರು ಒಡೆಯರು ಒತ್ತಾಸೆಯಾಗಿ ಆಧುನಿಕ ಶಿಕ್ಷಣ ಜಾರಿಗೊಂಡ ಚಾರಿತ್ರಿಕ ಸಂಗತಿಗಳ ವಿವರಗಳಿವೆ. ಆದುದರಿಂದ ಕರ್ನಾಟಕದ ಹಲವು ಪ್ರದೇಶಗಳಲ್ಲಿ ಆಧುನಿಕ ಶಿಕ್ಷಣದ ಬಗ್ಗೆ ದೇಶಿಯರ ಪ್ರತಿಕ್ರಿಯೆಗಳು ಈ ಸಂಶೋಧನೆಯಲ್ಲಿ ಚಿತ್ರಿತಗೊಂಡಿವೆ. ಇದು ಹೊಸ ಶಿಕ್ಷಣದ ಜಾರಿಗೊಂಡ ಐತಿಹಾಸಿಕ ಸಂಗತಿಗಳನ್ನು ಅರಿಯಲು ಸಹಾಯಕವಾಗಿದೆ.

**ಕೃತಿಗಳು**

'ದಕ್ಷಿಣ ಭಾರತ : ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ' ಇದು ಇತಿಹಾಸ ಪ್ರಾಧ್ಯಾಪಕರಾದ ಎಸ್.ಚಂದ್ರಶೇಖರ್ ಅವರ ಕೃತಿ. 'ಭಾರತೀಯ ರಾಷ್ಟ್ರೀಯ ಚಳವಳಿಯ ಚರಿತ್ರೆಗಳಲ್ಲಿ ಸಾಮಾನ್ಯವಾಗಿ ದಕ್ಷಿಣ ಭಾರತ ನಾಪತ್ತೆಯಾಗಿರುತ್ತದೆ. ಹೀಗಾಗಿ ಸಹಜವಾಗಿಯೇ ಇಲ್ಲಿ ವ್ಯಕ್ತಿಗಳ ಮತ್ತು ಅವರ ಸಾಹಸಗಳ ಬಗ್ಗೆ ವಿವರಗಳಿಲ್ಲ. ಒಟ್ಟಾರೆ ದೇಶಿ ಸಂಸ್ಥಾನಗಳು ವಸಾಹತು ವಿರೋಧಿ ರಾಷ್ಟ್ರೀಯ ಸಂಗ್ರಾಮದಲ್ಲಿ ವಹಿಸಿದ ಪಾತ್ರ ಮತ್ತು ಅದಕ್ಕಿದ್ದ ಕಾರಣಗಳನ್ನು ಗುರುತಿಸುವ ಪ್ರಯತ್ನ ಈ ಕೃತಿಯಲ್ಲಿದೆ' ಎಂದು ಲೇಖಕರು ತಮ್ಮ ಕೃತಿ ರಚನೆಯ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ.

'ವಸಾಹತು ಆಡಳಿತ ಹಾಗೂ ಹೊಸ ಸಾಮಾಜಿಕ ವರ್ಗಗಳ ಉದಯ', 'ಕೋಮುವಾದಿ ಹಾಗೂ ಜಾತಿವಾದಿ ರಾಜಕಾರಣ ಹಾಗೂ ರಾಷ್ಟ್ರೀಯವಾದದ ಹುಟ್ಟು ಮತ್ತು ಬೆಳವಣಿಗೆ', 'ರಾಷ್ಟ್ರೀಯವಾದ, ಗಾಂಧಿಯುಗ ಮತ್ತು ದಕ್ಷಿಣ ಭಾರತ', 'ನಿಮ್ನ ವರ್ಗಗಳು', 'ರೈತವರ್ಗ ಹಾಗೂ ರಾಷ್ಟ್ರೀಯ ಚಳವಳಿ', 'ಕಾರ್ಮಿಕ ವರ್ಗ ಮತ್ತು ರಾಷ್ಟ್ರೀಯ ಚಳವಳಿ', 'ರಾಷ್ಟ್ರೀಯವಾದಿ ಚಳವಳಿಯಲ್ಲಿ ಎಡಪಂಥ', 'ಸಾಹಿತ್ಯ ಮತ್ತು ರಾಷ್ಟ್ರೀಯ ಚಳವಳಿ' 'ಪ್ರಮುಖ ಜೀವನ ಚರಿತ್ರೆಗಳು', ಈ ಬಗೆಯಲ್ಲಿ ಅಧ್ಯಾಯಗಳನ್ನು ರೂಪಿಸಿಕೊಂಡಿರುವ ಲೇಖಕರು ದಕ್ಷಿಣ ಭಾರತ ರಾಷ್ಟ್ರೀಯ ಚಳವಳಿಯಲ್ಲಿ ಪಾಲ್ಗೊಂಡ ವಿವರಗಳನ್ನು ಮಂಡಿಸಿದ್ದಾರೆ. ವಿವಿಧ ಮೂಲಗಳಿಂದ ಮಾಹಿತಿ ಸಂಗ್ರಹಿಸಿ ಪೂರಕ ವಿಚಾರಗಳನ್ನು ಚರ್ಚಿಸಿದ್ದಾರೆ.

'ಸಾಹಿತ್ಯ ಮತ್ತು ರಾಷ್ಟ್ರೀಯ ಚಳವಳಿ', ಈ ಅಧ್ಯಾಯದಲ್ಲಿ ದಕ್ಷಿಣ ಭಾರತದ ೧೮೦೦ ರವರೆಗಿನ ಚರಿತ್ರೆಯನ್ನು ಪುನಃರಚಿಸುವುದಕ್ಕೆ ಸಾಹಿತ್ಯವೇ ಮೂಲ ಆಕರ ಸಾಮಾಗ್ರಿ ಎಂದಿದ್ದಾರೆ. ರಾಷ್ಟ್ರೀಯ ಚಳವಳಿ ಹಾಗೂ ಸಾಹಿತ್ಯ ಹೇಗೆ ಪರಸ್ಪರವಾಗಿ ಸ್ಫೂರ್ತಿಗೊಂಡು ಸದೃಢಗೊಂಡವು ಎನ್ನುವುದನ್ನು ಈ ಕೃತಿಯಲ್ಲಿ ವಿಶ್ಲೇಷಿಸಲಾಗಿದೆ. ಭಾರತದ ಆಧುನೀಕರಣವು ಇಂಗ್ಲಿಷ್ ಶಿಕ್ಷಣದ ವಿಸ್ತರಣೆಯಿಂದ ಪ್ರಾರಂಭವಾಯಿತು. ನಾವು ಕಂಡಿರುವಂತೆ ದಕ್ಷಿಣ ಭಾರತದಲ್ಲಿ ಬಹುತೇಕ ಮೇಲ್ಜಾತಿ–ಮಧ್ಯಮವರ್ಗಗಳು ಈ ಸೌಲಭ್ಯವನ್ನು ಮೊದಲು ತಮ್ಮದಾಗಿಸಿಕೊಂಡವು ಎಂದು ಶಿಕ್ಷಣದ ಪ್ರಭಾವವನ್ನು ಗುರುತಿಸಲಾಗಿದೆ.

ರಾಷ್ಟ್ರೀಯ ಚಳವಳಿಯು ದಕ್ಷಿಣ ಭಾರತದ ಸಾಹಿತಿಗಳಲ್ಲಿ ಉಂಟು ಮಾಡಿದ ಪ್ರೇರಣೆ, ಈ ಭಾಗದ ಬರೆಹಗಾರರು ಅದಕ್ಕೆ ತೋರಿಸಿದ ಪ್ರತಿಕ್ರಿಯೆಯನ್ನು ದಾಖಲಿಸಿದ್ದಾರೆ. ಕುವೆಂಪು ಅವರ ಬಗ್ಗೆ ಬರೆಯುತ್ತಾ, ಕುವೆಂಪುರವರ ಕಾದಂಬರಿಗಳಲ್ಲಿ ದೇಸೀ ಬದುಕಿನ ಸಾಮಾಜಿಕ ಆದರ್ಶ ನಿರೂಪಿತಗೊಂಡಿದೆ. ಮಧ್ಯಮ ಕೆಳವರ್ಗಕ್ಕೆ ಸೇರಿದ ರೈತ ಸಮುದಾಯದ ಭಾವನೆಗಳು, ವರ್ತನೆಗಳು, ಮೌಲ್ಯಗಳು, ಸಮಸ್ಯೆಗಳು ಸಂಕೀರ್ಣತೆಗಳು– ತನ್ಮೂಲಕ ಉದ್ಭವವಾಗುವ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಪರಿಸರ ಸಂಬಂಧೀ–ರಾಜಕೀಯ ವರ್ತನೆಗಳ ವಿನ್ಯಾಸಗಳನ್ನು ನಮಗೆ ತೋರಿಸುತ್ತಾರೆ. ಅವರ ಕಾದಂಬರಿ, ನಾಟಕಗಳಲ್ಲಿ ಬ್ರಾಹ್ಮಣ ಶೂದ್ರ ಸಂಘರ್ಷವು ಪ್ರತಿಪಾದಿತವಾಗಿದೆ ಎನ್ನುವುದನ್ನು ಕೃತಿಕಾರರು ಉದ್ಧರಿಸುತ್ತಾರೆ. ದಕ್ಷಿಣ ಭಾರತದಲ್ಲಿ ರಾಷ್ಟ್ರೀಯ ಚಳವಳಿ ರೂಪುಗೊಂಡ ಬಗೆಯನ್ನು ವಿವರವಾಗಿ ಚರ್ಚಿಸುವ ಈ ಕೃತಿಯಲ್ಲಿ ಆಧುನಿಕ ಶಿಕ್ಷಣವು ರಾಷ್ಟ್ರೀಯತೆಯ ಉದ್ದೀಪನಕ್ಕೆ ಪ್ರಚೋದಿಸಿದ ಬಗೆಯನ್ನು ಸಾಂದರ್ಭಿಕವಾಗಿ ಚರ್ಚೆ ಮಾಡಲಾಗಿದೆ.

ಎಸ್.ಚಂದ್ರಶೇಖರ್ ಅವರ ಮತ್ತೊಂದು ಕೃತಿ 'ವಸಾಹತುಕಾಲೀನ ಕರ್ನಾಟಕ' ಚರಿತ್ರೆಯನ್ನು ಕಟ್ಟುವ ಪ್ರಯತ್ನವನ್ನು ಈ ಕೃತಿಯಲ್ಲಿ ಮಾಡಿದ್ದಾರೆ. ಕರ್ನಾಟಕದ ಚರಿತ್ರೆಯ ಬರೆವಣಿಗೆಯನ್ನು ವಿವಿಧ ಮಾದರಿಗಳ ಹಿನ್ನಲೆಯಲ್ಲಿ ಅಧ್ಯಯನ ನಡೆಸಿದ್ದಾರೆ. ಕರ್ನಾಟಕದಲ್ಲಿ ರಾಷ್ಟ್ರೀಯ ಚಳವಳಿಯ ಉಗಮ ಮತ್ತು ಬೆಳವಣಿಗೆ ಹಾಗೂ ಮೈಸೂರು ಸಂಸ್ಥಾನದ ಪ್ರಾಂತೀಯ ರಾಜಕೀಯ ಉದಯಕಾಲ, ಮೈಸೂರು ಪ್ರಜಾಪ್ರತಿನಿಧಿ ಸಭೆಯ ಪ್ರಸ್ತುತತೆಯ ಬಗ್ಗೆ ಈ ಕೃತಿಯಲ್ಲಿ ಚರ್ಚಿಸಲಾಗಿದೆ.

ಈ ಕೃತಿಯ ನಾಲ್ಕನೇ ಭಾಗದಲ್ಲಿ 'ಕನ್ನಡ ಸಾಹಿತ್ಯದಲ್ಲಿ ಕರ್ನಾಟಕ ಸಮಾಜ' ಅಧ್ಯಾಯದಲ್ಲಿ, ರಾಷ್ಟ್ರೀಯ ಚಳವಳಿ, ಕನ್ನಡ ಸಾಹಿತ್ಯ ಮತ್ತು ಕೋಮುವಾದ ಹಾಗೂ ಉಪರಾಷ್ಟ್ರೀಯತೆ ಮತ್ತು ಕನ್ನಡ ಸಾಹಿತ್ಯ, ಕನ್ನಡ ನವೋದಯ ಮತ್ತು ಬಿ ಎಂ ಶ್ರೀ :

ಕರ್ನಾಟಕದ ಏಕೀಕರಣ, ಕುವೆಂಪು ಕಾದಂಬರಿಗಳಲ್ಲಿ ಸಮಾಜ, ಕುವೆಂಪು ಕಾದಂಬರಿಗಳಲ್ಲಿ ಆಧುನಿಕರಣದ ಪ್ರಕ್ರಿಯೆ, ಗೊರೂರರ ಕೃತಿಗಳು ಮತ್ತು ಸ್ವಾತಂತ್ರ್ಯ ಚಳವಳಿ – ಈ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ.

> ಕನ್ನಡ ನವೋದಯ 'ಕನ್ನಡ ಪುನರುಜ್ಜೀವನವನ್ನು' ಇಂಗ್ಲಿಷಿನ ಸಂಪರ್ಕ ಮತ್ತು ಈ ಸಂಪರ್ಕದಿಂದ ಉಂಟಾದ ನಮ್ಮ ಪುರಾತನ ಚರಿತ್ರೆಯ, ಸಂಸ್ಕೃತಿಯ ಜ್ಞಾನ ಹೆಮ್ಮೆ[೧೨]

ಎಂದು ವ್ಯಾಖ್ಯಾನಿಸಿದ್ದಾರೆ. 'ಅವನತಿ ಸ್ಥಿತಿಗಿಳಿದಿರುವ ಕನ್ನಡ, ಕನ್ನಡ ಸಾಹಿತ್ಯ ಪರಿಷತ್ತು, ಅರಮನೆ, ಗುರುಮನೆ ಮತ್ತು ಜನರ ಬೆಂಬಲದಿಂದಲೇ ಬೆಳೆಯಬೇಕು ಎಂಬ ಹಂಬಲವನ್ನು ಇಟ್ಟುಕೊಂಡವರು' ಎನ್ನುವ ಬಿ ಎಂ ಶ್ರೀಯವರ ನಿಲುವನ್ನು ವಿಶ್ಲೇಷಿಸಿದ್ದಾರೆ. ಕುವೆಂಪು ಕಾದಂಬರಿಗಳಲ್ಲಿ ಆಧುನೀಕರಣದ ಪ್ರವೇಶವನ್ನು ಕುರಿತು ವಿಶ್ಲೇಷಣೆಗೆ ತೊಡಗಿ ಕಾದಂಬರಿಗಳಲ್ಲಿನ ಪ್ರತಿಮಾತ್ಮಕ ಧ್ವನಿಗಳನ್ನು ಗುರುತಿಸುತ್ತಾ–

> ಆಧುನಿಕತೆಯ ಅಂಗಾಂಗಗಳೇ ಆದ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಶೂದ್ರಾತಿಶೂದ್ರ ಚಳವಳಿಗಳೇ ಕುವೆಂಪು ಅವರ ಕಾದಂಬರಿಗಳ ವಸ್ತು ಮತ್ತು ಶಿಲ್ಪವನ್ನು ನಿಯಂತ್ರಿಸಿವೆ, ಪ್ರೇರೇಪಿಸಿವೆ ಎಂದೂ ಮತ್ತು ಅತ್ಯುತ್ತಮ ರಾಷ್ಟ್ರೀಯ ಚಿಂತನೆಯ ಕೇಂದ್ರ ಕಾಳಜಿಗಳೇ ಕಲಾವಿದ ಕುವೆಂಪು ಅವರ ಅಭಿವ್ಯಕ್ತಿಯಲ್ಲಿ ಪಡಿಮೂಡಿವೆ ಎಂದೂ ಹೇಳಬಹುದು[೧೩]

ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಕರ್ನಾಟಕದಲ್ಲಿ ವಸಾಹತು ಕಾಲದ ಚರಿತ್ರೆಯನ್ನು ಕಟ್ಟಿಕೊಡುವುದು ಈ ಕೃತಿಯ ಆಶಯವಾಗಿದೆ. ಕರ್ನಾಟಕದಲ್ಲಿ ರಾಷ್ಟ್ರೀಯ ಚಳವಳಿ ಉಗಮಗೊಂಡು ಬೆಳೆದು ನಿಂತ ಬಗೆಯನ್ನು ವಿವರವಾಗಿ ಚರ್ಚಿಸಲಾಗಿದೆ. ಕನ್ನಡ ಸಾಹಿತ್ಯ ರಾಷ್ಟ್ರೀಯ ಚಳವಳಿ ಹಾಗೂ ಉಪರಾಷ್ಟ್ರೀಯತೆಗೆ ತೆರೆದುಕೊಂಡ ಬಗೆಯನ್ನು ವಿಶ್ಲೇಷಿಸಲಾಗಿದೆ. ಕನ್ನಡ ಸಾಹಿತ್ಯ ಪರಿಸರ ಆಧುನಿಕತೆಯ ಪ್ರಕ್ರಿಯೆಗೆ ಮುಖ ಮಾಡಿದ ಪರಿಯನ್ನು ಈ ಕೃತಿ ನಿರೂಪಿಸುತ್ತದೆ.

ಎಸ್. ಚಂದ್ರಶೇಖರ್ ಅವರ 'ದಕ್ಷಿಣ ಭಾರತ : ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ' ಹಾಗೂ 'ವಸಾಹತುಕಾಲೀನ ಕರ್ನಾಟಕ' ಈ ಎರಡು ಕೃತಿಗಳು ದಕ್ಷಿಣ ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿ ವಸಾಹತುಶಾಹಿಯ ವಿರುದ್ಧವಾಗಿ ರಾಷ್ಟ್ರೀಯತೆ ರೂಪುಗೊಂಡ ಚಾರಿತ್ರಿಕ ಸನ್ನಿವೇಶಗಳನ್ನು ನಿರೂಪಿಸಿವೆ. ಚರಿತ್ರೆಯ ಈ ವಿಶ್ಲೇಷಣೆಗಳು ಕಾದಂಬರಿಗಳು ರೂಪುಗೊಳ್ಳಲು ನೆರವಾದ ಇತಿಹಾಸದ ಸಂಗತಿಗಳನ್ನು ಗುರುತಿಸಿಕೊಳ್ಳಲು ನೆರವಾಗಿದೆ.

ಅಶೋಕಕುಮಾರ ರಂಜೇರೆ ಅವರು 'ಭಾಷಾ ಮಾಧ್ಯಮದ ವಾಗ್ವಾದಗಳು' ಕೃತಿಯನ್ನು ಸಂಪಾದಿಸಿದ್ದಾರೆ. ೨೦೧೩ರಲ್ಲಿ ಪ್ರಕಟಗೊಂಡಿರುವ ಈ ಕೃತಿಯ ಉದ್ದೇಶವನ್ನು

ಪ್ರಸ್ತಾವನೆಯಲ್ಲಿ ಸ್ಪಷ್ಟೀಕರಿಸಲಾಗಿದೆ. ೧೯೯೪ರಲ್ಲಿ ಕರ್ನಾಟಕ ಸರ್ಕಾರ ಕರ್ನಾಟಕದ ಎಲ್ಲ ಪ್ರಾಥಮಿಕ ಶಾಲೆಗಳು ಕನ್ನಡ(ಮಾತೃಭಾಷೆ)ದಲ್ಲಿ ಶಿಕ್ಷಣ ನೀಡಬೇಕೆಂದು ಆದೇಶ ಹೊರಡಿಸಿತು. ಇದನ್ನು ಪ್ರಶ್ನಿಸಿ ಅನುದಾನರಹಿತ ಶಾಲೆಗಳು ರಾಜ್ಯದ ಉಚ್ಚನ್ಯಾಯಾಲಯದಲ್ಲಿ ಮೊಕದ್ದಮೆ ದಾಖಲಿಸಿದವು. ೨೦೦೫ರಲ್ಲಿ ರಾಜ್ಯ ಸರ್ಕಾರ ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣ ನೀಡುತ್ತಿರುವ ಶಾಲೆಗಳ ವಿರುದ್ಧ ಕ್ರಮ ಕೈಗೊಳ್ಳಲು ಚಿಂತಿಸಿತು. ಈ ಹಿನ್ನೆಲೆಯಲ್ಲಿ ಜುಲೈ ೨, ೨೦೦೮ರಂದು ರಾಜ್ಯದ ಉಚ್ಚನ್ಯಾಯಾಲಯ ಶಿಕ್ಷಣ ಮಾಧ್ಯಮದ ಬಗ್ಗೆ –

> ಕರ್ನಾಟಕ ರಾಜ್ಯದ ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ/ಮಾತೃಭಾಷಾ ಮಾಧ್ಯಮ ಕಡ್ಡಾಯವಲ್ಲ. ಪ್ರಾಥಮಿಕ ಹಂತದ ಅಂದರೆ ೫ನೇ ತರಗತಿವರೆಗೆ ಕರ್ನಾಟಕದಲ್ಲಿ ಸರ್ಕಾರಿ ಮತ್ತು ಅನುದಾನ ಪಡೆಯುತ್ತಿರುವ ಶಾಲೆಗಳು ಕನ್ನಡ ಅಥವಾ ಮಾತೃಭಾಷಾ ಮಾಧ್ಯಮದಲ್ಲಿ ಶಿಕ್ಷಣ ನೀಡಬಹುದು. ಅದು ಅನುದಾನರಹಿತ ಶಾಲೆಗಳಿಗೆ ಅನ್ವಯವಾಗುವುದಿಲ್ಲ. ಹಾಗಾಗಿ ಅನುದಾನರಹಿತ ಶಾಲೆಗಳು ಯಾವ ಮಾಧ್ಯಮದಲ್ಲಾದರೂ ಶಿಕ್ಷಣ ನೀಡಬಹುದು[೧೪] ಎಂದು ತೀರ್ಪು ನೀಡಿತು.

ಈ ಹಿನ್ನೆಲೆಯಲ್ಲಿ ೧೯೯೪, ೨೦೦೫ ಹಾಗೂ ೨೦೦೮ರಲ್ಲಿ ರಾಜ್ಯದ ಶಾಲಾ ಶಿಕ್ಷಣದ ಮಾಧ್ಯಮದ ಕುರಿತಾಗಿ ವಾಗ್ವಾದಗಳು ನಡೆದವು. ನಾಡಿನ ಚಿಂತಕರು, ವಿದ್ವಾಂಸರು, ಸಾಹಿತಿಗಳು, ಭಾಷಾ ತಜ್ಞರು ಈ ಕುರಿತು ತಮ್ಮ ಅಭಿಪ್ರಾಯಗಳನ್ನು ದಾಖಲಿಸಿದ್ದಾರೆ.

ಇವು ಕರ್ನಾಟಕ ರಾಜ್ಯದ ಶಾಲಾ ಶಿಕ್ಷಣದಲ್ಲಿ ಭಾಷಾ ಮಾಧ್ಯಮ ಕುರಿತಾದ ಗಂಭೀರ ಚರ್ಚೆಗಳಾದ್ದರಿಂದ ಇವುಗಳಲ್ಲಿ ಕೆಲವನ್ನು ಆಯ್ಕೆ ಮಾಡಿ ಇಲ್ಲಿ ಸಂಕಲಿಸಲಾಗಿದೆ. ಕನ್ನಡ ನಾಡಿನಲ್ಲಿ ಕನ್ನಡ ಪ್ರಥಮ ಭಾಷೆಯಾಗಬೇಕು; ಶಿಕ್ಷಣದ ಎಲ್ಲ ಘಟ್ಟಗಳಲ್ಲಿಯೂ ಕನ್ನಡ ಶಿಕ್ಷಣ ಮಾಧ್ಯಮವಾಗಬೇಕು. ಈ ಎರಡು ಸಂಕಲ್ಪಗಳು ಕೈಗೂಡಿದರೆ ಉಳಿದೆಲ್ಲ ಕೇಡುಗಳೂ ಮಾಯವಾಗುತ್ತವೆ ಎಂಬ ಕುವೆಂಪು ಅವರ (೩೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಭಾಷಣ) ಆಶಯಲೇಖನದೊಂದಿಗೆ ಇದರಲ್ಲಿ ಸಾಹಿತಿಗಳು, ಭಾಷಾವಿಜ್ಞಾನಿಗಳು, ಚಿಂತಕರು ಸೇರಿದಂತೆ ವಿವಿಧ ಕ್ಷೇತ್ರದ ಗಣ್ಯರ ಇಪ್ಪತ್ತೆರಡು ಲೇಖನಗಳಿವೆ.

ಕರ್ನಾಟಕದ ಶಿಕ್ಷಣ ಮಾಧ್ಯಮ ಚರ್ಚೆಯನ್ನೆ ಮಾಡಿರುವ ಈ ಲೇಖನಗಳೆಲ್ಲಾ ಕನ್ನಡ ಮಾಧ್ಯಮದ ಪರವಾಗಿದ್ದರೂ ಇಂಗ್ಲಿಷ್ ಶಿಕ್ಷಣ ಕುರಿತಾಗಿ ವಿಭಿನ್ನ ನಿಲುವುಗಳನ್ನು ತಳೆದಿವೆ. ಈ ಹಿನ್ನೆಲೆಯಲ್ಲಿ ಈ ಲೇಖನಗಳನ್ನು ಕನ್ನಡ ಮಾಧ್ಯಮವನ್ನು ಕುರಿತ ಚರ್ಚೆಗಳು ಹಾಗೂ ಇಂಗ್ಲಿಷನ್ನು ಭಾಷೆಯಾಗಿ ಶಾಲೆಯಲ್ಲಿ ಯಾವ ಹಂತದಿಂದ ಕಲಿಸಬೇಕೆಂಬ ಚರ್ಚೆಗಳೆಂದು ವಿಭಾಗಿಸಬಹುದಾಗಿದೆ. ಕನ್ನಡ ಮಾಧ್ಯಮವೇ ಪ್ರಾಥಮಿಕ

ಶಾಲಾ ಶಿಕ್ಷಣದ ಮಾಧ್ಯಮವಾಗಬೇಕೆನ್ನುವ ಚರ್ಚೆಗಳು 'ಮಾತೃಭಾಷೆ ವ್ಯಕ್ತಿತ್ವದ ಬುನಾದಿ' ಎಂದು ಮಾತೃಭಾಷೆ ಹಾಗೂ ಪ್ರಾದೇಶಿಕ ಭಾಷೆಯ ಮಹತ್ವವನ್ನು ತಿಳಿಸಿವೆ. ಕನ್ನಡ ಶಾಲೆಗಳನ್ನು ಮುಚ್ಚುತ್ತಿರುವುದಕ್ಕೆ ಇರುವ ಕಾರಣಗಳನ್ನು ಗುರುತಿಸಿ ಅದಕ್ಕೆ ಪರಿಹಾರಗಳನ್ನು ತಿಳಿಸುವ ಪ್ರಯತ್ನ ಮಾಡಿವೆ. ಇಂಗ್ಲಿಷ್ ಭಾಷೆಯನ್ನು ಒಂದು ಭಾಷೆಯನ್ನಾಗಿ ಕಲಿಸಬಹುದೆಂದೂ ಅದರ ಸ್ವರೂಪ ಹೇಗಿರಬೇಕು ಎಂಬುದನ್ನು ಕಂಡುಕೊಳ್ಳುವ ಕುರಿತು ಚಿಂತಿಸಿವೆ.

ಈ ಕೃತಿಯಲ್ಲಿ ಮೊದಲೇ ಹೇಳಿರುವಂತೆ ಇಂಗ್ಲಿಷ್ ಮಾಧ್ಯಮದ ಪರವಾದ ಚರ್ಚೆಗಳು ಇಲ್ಲ. ಬದಲಾಗಿ ಇಂಗ್ಲಿಷನ್ನು ಒಂದು ಭಾಷೆಯಾಗಿ ಪ್ರಾಥಮಿಕ ಶಾಲೆಯ ಒಂದನೇ ತರಗತಿಯಿಂದಲೇ ಕಲಿಸಬೇಕೆಂಬ ಅಭಿಪ್ರಾಯಗಳಿವೆ. ಈ ವಿಚಾರಕ್ಕೆ ಸಾಮಾಜಿಕ, ರಾಜಕೀಯ ಆಯಾಮಗಳಿರುವುದನ್ನು ಗುರುತಿಸಲಾಗಿದೆ. ಮೂರನೇ ತರಗತಿಯಿಂದಲೂ ಇಂಗ್ಲಿಷ್ ಭಾಷೆಯನ್ನು ಕಲಿಸಬಹುದೆಂಬ ಅಭಿಪ್ರಾಯಗಳು ಇವೆ. ಪ್ರಾಥಮಿಕ ಶಾಲೆಯ ಒಂದು ಅಥವಾ ಮೂರನೇ ತರಗತಿಯಿಂದ ಇಂಗ್ಲಿಷ್ ಕಲಿಸಬೇಕೆಂಬ ಈ ಚರ್ಚೆಯಲ್ಲಿ ಪೋಷಕರ ಇಂಗ್ಲಿಷ್ ವ್ಯಾಮೋಹದ ಕಾರಣಗಳನ್ನು, ವಿದ್ಯಾರ್ಥಿಗಳ ಭವಿಷ್ಯ ಹಾಗೂ ಅವರ ಸ್ಥಾನಮಾನಗಳನ್ನು ಕುರಿತು ಚರ್ಚಿಸಲಾಗಿದೆ. ಶಿಕ್ಷಣ ತಜ್ಞರು, ಮನೋವಿಜ್ಞಾನಿಗಳ ಅಭಿಪ್ರಾಯಗಳ ಪ್ರಕಾರ ಮಗುವಿಗೆ ಎಳವೆಯಲ್ಲಿ ಹೆಚ್ಚಿನ ಭಾಷೆಗಳನ್ನು ಗ್ರಹಿಸುವ ಸಾಮರ್ಥ್ಯವಿರುತ್ತದೆ ಎಂದು ಕೆಲವರು ವಾದಿಸಿದರೆ, ಇನ್ನೂ ಹಲವರು ಮಗು ಮೊದಲು ತನ್ನ ಭಾಷೆಯಲ್ಲಿ ಹಿಡಿತ ಸಾಧಿಸಿ ಅನಂತರ ಇತರ ಭಾಷೆಗಳನ್ನು ಕಲಿಯುವುದು ಒಳಿತು ಎಂದು ಭಾವಿಸಿದ್ದಾರೆ. ಒಟ್ಟಿನಲ್ಲಿ ಈ ಕೃತಿಯ ವಾಗ್ವಾದಗಳು ಪ್ರಸ್ತುತ ಕರ್ನಾಟಕದ ಶಾಲಾ ಶಿಕ್ಷಣದಲ್ಲಿ ಕನ್ನಡ ಮಾಧ್ಯಮದ ಮತ್ತು ಇಂಗ್ಲಿಷ್ ಭಾಷೆಯ ಸ್ಥಾನವನ್ನು ತಿಳಿಸುವ ಪ್ರಯತ್ನಗಳಾಗಿವೆ.

ವಸಾಹತುಶಾಹಿ ಮತ್ತು ಕನ್ನಡ ಸಾಹಿತ್ಯ ಇವೆರಡು ಪರಸ್ಪರ ಒಂದಕ್ಕೊಂದು ಪ್ರತಿಕ್ರಿಯಿಸಿರುವ ಬಗೆಯನ್ನು ಹಲವಾರು ಅಧ್ಯಯನಗಳು ವಿಶ್ಲೇಷಣೆ ಮಾಡಿವೆ. ಇಂಗ್ಲಿಷ್ ಸಾಹಿತ್ಯ ಮತ್ತು ಶಿಕ್ಷಣದಿಂದ ಕನ್ನಡ ಸಾಹಿತ್ಯ ಪುನರುಜ್ಜೀವನಗೊಂಡ ಬಗೆಯನ್ನು ಚರ್ಚಿಸಿರುವ ಹಲವು ಅಧ್ಯಯನಗಳು ಈಗಾಗಲೇ ನಡೆದಿವೆ. ಈ ಬಗೆಯ ಅಧ್ಯಯನಗಳಲ್ಲಿ ಇಂಗ್ಲಿಷ್ ಶಿಕ್ಷಣ ಮತ್ತು ಅದು ಅಧುನಿಕ ಕನ್ನಡ ಸಾಹಿತ್ಯದ ಮೇಲೆ ಉಂಟುಮಾಡಿದ ಪರಿಣಾಮಗಳ ಬಗ್ಗೆ ಸಾಂದರ್ಭಿಕವಾಗಿ ಚರ್ಚೆಗಳು ನಡೆದಿರುವುದನ್ನು ಗಮನಿಸಬಹುದು.

ಅಶೋಕ್‌ಕುಮಾರ್ ರಂಜೇರೆಯವರ 'ಭಾಷಾ ಮಾಧ್ಯಮದ ವಾಗ್ವಾದಗಳು' ಕೃತಿಯು ಕುವೆಂಪು ಒಳಗೊಂಡಂತೆ ಕನ್ನಡದ ಬರಹಗಾರರು ಮಾತೃಭಾಷಾ ಶಿಕ್ಷಣದ ಬಗ್ಗೆ ಹೊಂದಿರುವ ಅಭಿಪ್ರಾಯಗಳನ್ನು ತಿಳಿಯಲು ಸಹಾಯಕವಾಗಿದೆ.

ಬ್ರಿಟಿಷರು ರೂಪಿಸಿದ ಶಿಕ್ಷಣ ಪದ್ಧತಿಯ ಬಗ್ಗೆ ಆಧುನಿಕ ಕನ್ನಡದ ಆರಂಭದ ಬಹುತೇಕ ಬರಹಗಾರರು ತಮ್ಮ ನಿಲುವುಗಳನ್ನು ತಮ್ಮ ಸಾಹಿತ್ಯ ಕೃತಿಗಳ ಮೂಲಕವೇ ದಾಖಲಿಸಿದ್ದಾರೆ. ಅಂತಹ ಬರಹಗಾರರು ತಮ್ಮ ಕೃತಿಗಳ ಆಂತರ್ಯದಲ್ಲಿ ಶಿಕ್ಷಿತ ವರ್ಗವನ್ನು ಚಿತ್ರಿಸಿರುವ ಬಗೆಯನ್ನು ಶೋಧಿಸಿದ ಪ್ರಯತ್ನಗಳು ನಡೆದಂತೆ ಕಂಡುಬರುವುದಿಲ್ಲ.

ಕನ್ನಡದ ಕಾದಂಬರಿಯ ರಚನೆಯೇ ವಸಾಹತುಶಾಹಿಗೆ ತೋರಿದ ಪ್ರತಿಕ್ರಿಯೆಯಂತೆ ನಿರೂಪಿತಗೊಂಡಿದೆ. ಆರಂಭದ ಕಾದಂಬರಿಗಳಲ್ಲಿ ಶಿಕ್ಷಿತ ಪಾತ್ರಗಳನ್ನು ನಿರ್ವಹಿಸಿರುವ ಕ್ರಮವನ್ನು ವಿಶ್ಲೇಷಣೆ ಮಾಡಿ ಕಾದಂಬರಿಕಾರರ ಚಿಂತನೆಗಳನ್ನು ಗ್ರಹಿಸಲು ಅವರ ಸೃಜನಶೀಲತೆಯನ್ನೆ ಆಧಾರವಾಗಿಟ್ಟುಕೊಳ್ಳುವುದು. ಆ ಮೂಲಕ ಕನ್ನಡ ಸಾಹಿತ್ಯದ ಆಯ್ದ ಕಾದಂಬರಿಗಳನ್ನು ಅಧ್ಯಯನ ಮಾಡಿ ವಸಾಹತು ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆಗಳನ್ನು ನಿರೂಪಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಈ ಅಧ್ಯಯನದಲ್ಲಿ ಸಮೀಕ್ಷೆ ನಡೆಸಿರುವ ಸಂಶೋಧನ ಗ್ರಂಥಗಳು ಹಾಗೂ ಕೃತಿಗಳು 'ವಸಾಹತು ಶಿಕ್ಷಣ : ಕನ್ನಡ ಸಾಹಿತ್ಯದ ಪ್ರತಿಕ್ರಿಯೆ ಹಾಗೂ ನಿರ್ವಚನ' ಶೀರ್ಷಿಕೆಯ ಪ್ರಸ್ತುತ ಅಧ್ಯಯನ ನಡೆಸಲು ಪ್ರೇರಕವಾಗಿವೆ. ವಸಾಹತುಶಾಹಿಯ ಬಗ್ಗೆ ಸುದೀರ್ಘ ವಿಶ್ಲೇಷಣೆಗಳು ನಡೆದಿವೆ. ಆದರೆ ಕಾದಂಬರಿಗಳಲ್ಲಿ ಶಿಕ್ಷಣ ಕುರಿತ ಚಿಂತನೆಗಳನ್ನು ವಿಶ್ಲೇಷಿಸುವುದು, ಆ ಮೂಲಕ ಇಂಗ್ಲಿಷ್ ಶಿಕ್ಷಣ ಕುರಿತಂತೆ ಕನ್ನಡ ಕಾದಂಬರಿಕಾರರ ನಿಲುವುಗಳನ್ನು ಅರ್ಥೈಸುವುದು ಅಗತ್ಯವೆಂದು ಅರಿಯಲು ಸಾಧ್ಯವಾಗಿದೆ.

**ಕೊನೆ ಟಿಪ್ಪಣಿಗಳು**

೧. ಶಿವರಾಮ ಪಡಿಕ್ಕಲ್, ನಾಡು-ನುಡಿಯ ರೂಪಕ: ರಾಷ್ಟ್ರ, ಆಧುನಿಕತೆ ಮತ್ತು ಕನ್ನಡದ ಮೊದಲ ಕಾದಂಬರಿಗಳು, ಮಂಗಳೂರು ವಿ ವಿ, ೨೦೦೧, ಪುಟ (ಕೆಲವು ಮಾತು).

೨. ಅದೇ, ಪುಟ ೩೩.

೩. ಅದೇ, ಪುಟ ೯೮.

೪. ಅದೇ, ಪುಟ ೧೯೫.

೫. ಅದೇ, ಪುಟ ೧೯೯.

೬. ಅದೇ, ಪುಟ ೨೦೬.

೭ ಕೆ.ಸಿ. ಶಿವಾರೆಡ್ಡಿ, ಕನ್ನಡದ ಹಾಡುಪಾಡು, ಅಧ್ಯಯನ ಮಂಡಲ, ಬೆಂಗಳೂರು, ೨೦೦೬, ಪುಟ ೮.

೮. ಅದೇ, ಪುಟ ೮.

೯. ಐ.ಜೆ. ಮ್ಯಾಗೇರಿ, ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೮, ಪುಟ ೪.

೧೦. ಅದೇ, ಪುಟ ೮೫.

೧೧. ಅದೇ, ಪುಟ ೧೪೭.

೧೨. ಎಸ್ ಚಂದ್ರಶೇಖರ್, ವಸಾಹತುಕಾಲೀನ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬. ಪುಟ ೨೬೫.

೧೩. ಅದೇ, ಪುಟ ೩೫೪.

೧೪. ಅಶೋಕ ಕುಮಾರ ರಂಜೇರೆ, ಭಾಷಾ ಮಾಧ್ಯಮದ ವಾಗ್ವಾದಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೧೩, ಪುಟ ೧೧.

## ಅಧ್ಯಾಯ ೩ : ವಸಾಹತು ಶಿಕ್ಷಣ : ರಾಷ್ಟ್ರೀಯ ಚಿಂತಕರ ಪ್ರತಿಕ್ರಿಯೆಗಳು

೩.೧ ವಸಾಹತು ಶಿಕ್ಷಣ ಜಾರಿಗೊಂಡ ಬಗೆ

೩.೨ ಮೆಕಾಲೆಯ ಪರಿಪತ್ರ (೧೮೩೫)

೩.೩ ಮೆಕಾಲೆ ಟಿಪ್ಪಣಿಗೆ ಉಂಟಾದ ವಿರೋಧ

೩.೪ ವಸಾಹತು ಶಿಕ್ಷಣದ ಜಾರಿ : ಉಂಟಾದ ಪರಿಣಾಮಗಳು

೩.೫ ರಾಷ್ಟ್ರೀಯ ಚಿಂತಕರ ಪ್ರತಿಕ್ರಿಯೆಗಳು

ಅಧ್ಯಾಯ – ೩

## ವಸಾಹತು ಶಿಕ್ಷಣ : ರಾಷ್ಟ್ರೀಯ ಚಿಂತಕರ ಪ್ರತಿಕ್ರಿಯೆಗಳು

ವಸಾಹತು ಶಿಕ್ಷಣವನ್ನು ಕುರಿತ ಕನ್ನಡ ಸಾಹಿತ್ಯದ ಪ್ರತಿಕ್ರಿಯೆಯನ್ನು ನಿರ್ವಚಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶ. ಈ ನಿರ್ವಚನೆಗೂ ಮುಂಚೆ ಭಾರತೀಯ ಸಂದರ್ಭದಲ್ಲಿ ವಸಾಹತು ಶಿಕ್ಷಣ ಜಾರಿಗೊಂಡ ಬಗೆಯನ್ನು ವಿವರಿಸುವುದು ಅಗತ್ಯವೆನಿಸಿತು. ಭಾರತದ ಬಹುಭಾಗವನ್ನು ಬ್ರಿಟಿಷರು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡರು. ಆಗ ಆಡಳಿತವನ್ನು ನಡೆಸಲು ದೇಶಿಯ ನೌಕರ ವರ್ಗವನ್ನು ಸೃಷ್ಟಿಸುವ ಅನಿವಾರ್ಯತೆ ಉಂಟಾಯಿತು. ಅದಕ್ಕೂ ಮುಂಚಿತವಾಗಿ ಮತಾಂತರದ ಉದ್ದೇಶಕ್ಕೆ ಕ್ರೈಸ್ತ ಮಿಶನರಿಗಳು ಶಾಲೆಗಳನ್ನು ತೆರೆದು ಇಂಗ್ಲಿಷ್ ಶಿಕ್ಷಣ ನೀಡುವ ವ್ಯವಸ್ಥೆ ರೂಪಿಸಿದ್ದರು. ಭಾರತೀಯ ಉನ್ನತ ವರ್ಗದವರಿಗೆ ತಮ್ಮ ಮಕ್ಕಳು ಬ್ರಿಟಿಷ್ ಶಿಕ್ಷಣ ಪಡೆಯಬೇಕೆಂಬ ಹಂಬಲ ಉಂಟಾಯಿತು. ಈ ಎಲ್ಲಾ ಕಾರಣಗಳಿಂದಾಗಿ ಭಾರತದ ಸಾಂಪ್ರದಾಯಿಕ ಶಿಕ್ಷಣಕ್ಕೆ ಎದುರಾಗಿ ಇಂಗ್ಲಿಷ್ ಶಿಕ್ಷಣ ಜಾರಿಗೆ ಬಂದಿತು. ತರತಮಭೇದ ಹೊಂದಿದ್ದ ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಗಿಂತ ಎಲ್ಲ ವರ್ಗದವರಿಗೂ ಕಲಿಯುವ ಅವಕಾಶ ಕಲ್ಪಿಸಿದ ವಸಾಹತು ಶಿಕ್ಷಣ ಬಹುಬೇಗ ಸ್ಥಳೀಯರ ಮನ್ನಣೆ ಗಳಿಸಿತು. ಹೀಗೆ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಜಾರಿಗೆ ಬಂದದ್ದು ಐತಿಹಾಸಿಕ ಘಟನೆ.

ವಸಾಹತು ಶಿಕ್ಷಣ ಜಾರಿಗೆ ಬಂದದ್ದು ಹಾಗೂ ಅದರಿಂದ ಭಾರತದ ಸ್ಥಳೀಯ ಶಿಕ್ಷಣ ಮತ್ತು ಸಾಹಿತ್ಯದ ಮೇಲೆ ಉಂಟಾದ ಪರಿಣಾಮವನ್ನು ವಿವರಿಸುವುದು ಪ್ರಸ್ತುತ ಅಧ್ಯಯನಕ್ಕೆ ಪೂರಕ. ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಬೆಳೆಸಿದ್ದರಿಂದ ಸ್ವಾತಂತ್ರ್ಯ ಚಳವಳಿ ಕ್ಷಿಪ್ರಗತಿಯಲ್ಲಿ ಬೆಳೆಯಲು ಕಾರಣವಾಯಿತು. ಹೀಗೆ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಜನರಲ್ಲಿ ಮೂಡಿಸಿದ್ದು ಮಹತ್ವದ ಕೆಲಸ. ಈ ಕಾರ್ಯದಲ್ಲಿ ಬರಹಗಾರರು, ಚಿಂತಕರು, ಕಲಾವಿದರು, ಹೋರಾಟಗಾರರು ಅಪಾರವಾಗಿ ಶ್ರಮಿಸಿದರು. ಹೋರಾಟಗಾರರು ಚಳವಳಿಯನ್ನು ಉತ್ತೇಜಿಸುತ್ತಲೇ ವಸಾಹತುಶಾಹಿಯ ಪರಿಣಾಮಗಳನ್ನು ಕುರಿತು ಬಹುವಾಗಿ ಚಿಂತನೆ ನಡೆಸಿದರು. ಈ ದಿಸೆಯಲ್ಲಿ ಮುಂದೆ ಭಾರತದ ಸ್ವಾತಂತ್ರ್ಯ ಚಳವಳಿ ನಡೆದು ದೇಶ ಸ್ವಾತಂತ್ರ್ಯಗೊಳ್ಳಲು ಹಾಗೂ ಭಾರತದ ನಿರ್ಮಾಣವಾಗಲು ಈ ನಾಯಕರ ಚಿಂತನೆಗಳೇ ಆಧಾರವಾಗಿವೆ.

ಈ ನಿಟ್ಟಿನಲ್ಲಿ ರಾಜರಾಮ್‌ಮೋಹನರಾಯ್, ರವೀಂದ್ರನಾಥ ಠಾಕೂರ್, ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧಿ, ಶ್ರೀ ಅರವಿಂದ, ರಾಮ ಮನೋಹರ ಲೋಹಿಯಾ ಈ ಮೊದಲಾದ ರಾಷ್ಟ್ರನಾಯಕರ ಚಿಂತನೆಗಳು ಭಾರತದ ನಿರ್ಮಾಣದಲ್ಲಿ ಬಹುಮುಖ್ಯ

ಪಾತ್ರವನ್ನು ವಹಿಸಿವೆ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದ ಕಾಲಘಟ್ಟಗಳಲ್ಲಿ ಭಾರತೀಯ ರಾಷ್ಟ್ರೀಯ ಚಿಂತಕರ ಆಲೋಚನೆಗಳು ಮತ್ತು ಆಶೋತ್ತರಗಳು ಭಾರತೀಯರನ್ನು ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಉತ್ತೇಜಿಸಿದವು ವಸಾಹತು ಶಿಕ್ಷಣ ನೀತಿಯನ್ನು ಕುರಿತಂತೆ ಈ ಎಲ್ಲಾ ನಾಯಕರು ಬಹುವಾಗಿ ಚಿಂತಿಸಿದ್ದಾರೆ. ಈ ಹೊಸ ಶಿಕ್ಷಣ ನೀತಿಯಿಂದಾಗಿ ಭಾರತೀಯರ ಬದುಕಿನಲ್ಲಿ ಉಂಟಾದ ಪರಿಣಾಮಗಳನ್ನು ಕುರಿತು ತಮ್ಮ ನಿಲುವುಗಳನ್ನು ವ್ಯಕ್ತಪಡಿಸಿದ್ದಾರೆ.

ಇವರೆಲ್ಲರೂ ಹೋರಾಟಗಾರರು, ಅಂತೆಯೇ ಮೂಲತಃ ಬರಹಗಾರರು. ತಮ್ಮ ಬರವಣಿಗೆಯ ಮೂಲಕ ಅಸಂಖ್ಯಾತ ಜನರನ್ನು ಮುಟ್ಟಿದವರು ಹಾಗೂ ಓದುಗರಲ್ಲಿ ಹೊಸ ಆಲೋಚನಾ ಕ್ರಮ ಉಂಟಾಗುವುದಕ್ಕೆ ಕಾರಣರಾದವರು. ಈ ಚಿಂತಕರ ಚಿಂತನೆಗಳು ಕನ್ನಡ ಸಾಹಿತ್ಯ ಪರಂಪರೆಯನ್ನು ಬೆಳೆಸಿವೆ. ಇಂಗ್ಲಿಷ್ ಶಿಕ್ಷಣದ ಬಗೆಗಿನ ರಾಜರಾಮ್ ಮೋಹನರಾಯ್ ಅವರ ಉತ್ಸುಕತೆಯನ್ನು ಕನ್ನಡದ ಆರಂಭದ ಕಾದಂಬರಿಗಳಲ್ಲಿ ಗುರುತಿಸಬಹುದು. 'ಕಾನೂರು ಹೆಗ್ಗಡಿತಿ' ಕಾದಂಬರಿಯ ಹೂವಯ್ಯ ರಾಜರಾಮ ಮೋಹನರಾಯರು ಕನಸಿದ್ದ ಹೊಸ ಶಿಕ್ಷಣ ಪಡೆದ ಪ್ರತಿನಿಧಿಯಂತಿದ್ದಾನೆ. ಇಂಗ್ಲಿಷ್ ಶಿಕ್ಷಣದ ವೈಫಲ್ಯಗಳನ್ನು ಹೇಳುವ ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧಿ, ಶ್ರೀ ಅರವಿಂದರು, ರಾಮ ಮನೋಹರ ಲೋಹಿಯಾ ಇವರ ಚಿಂತನೆಗಳು, ಕುವೆಂಪು ಮತ್ತು ಶಿವರಾಮ ಕಾರಂತರ ಬರಹಗಳನ್ನು ಬಹುವಾಗಿ ಪ್ರಭಾವಿಸಿವೆ. ಅಲ್ಲದೇ ನವ್ಯ ಸಂದರ್ಭದ ಹಲವು ಕಾದಂಬರಿಗಳ ಪಾತ್ರಗಳು ಈ ಚಿಂತಕರ ಆಲೋಚನಾ ಕ್ರಮದಿಂದ ಪ್ರಭಾವಿತಗೊಂಡಿದೆ. ಈ ಹಿನ್ನೆಲೆಯಲ್ಲಿ ಮೇಲೆ ಗುರುತಿಸಿರುವ ರಾಷ್ಟ್ರೀಯ ಚಿಂತಕರ ಚಿಂತನೆಗಳ ಕನ್ನಡ ಅನುವಾದಗಳನ್ನು ಅನುಲಕ್ಷಿಸಲಾಗಿದೆ. ಈ ನಾಯಕರಲ್ಲಿ ಬಹುತೇಕರು ವಸಾಹತು ಶಿಕ್ಷಣದ ಮೂಲಕವೇ ಅಕ್ಷರವಂತರಾದವರು. ಅನಂತರದಲ್ಲಿ ತಾವು ರೂಪುಗೊಂಡ ವ್ಯವಸ್ಥೆಯ ಲೋಪಗಳನ್ನು ಎತ್ತಿ ಹಿಡಿದಿದ್ದಾರೆ. ಹಾಗಾಗಿ ಈ ಚಿಂತಕರು ವಸಾಹತು ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆಗಳನ್ನು ಒಟ್ಟುಗೂಡಿಸುವ ಆಶಯವನ್ನು ಈ ಅಧ್ಯಾಯದಲ್ಲಿ ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

### ೩.೧ ವಸಾಹತು ಶಿಕ್ಷಣ ಜಾರಿಗೊಂಡ ಬಗೆ

ಭಾರತದ ಬಹುಭಾಗವನ್ನು ತಮ್ಮ ಅಧೀನದಲ್ಲಿಟ್ಟುಕೊಂಡ ಈಸ್ಟ್ ಇಂಡಿಯಾ ಕಂಪನಿಯು ಆ ಪ್ರದೇಶಗಳ ಆಡಳಿತ, ಭೂ ಕಂದಾಯ ಪದ್ಧತಿಗಳಲ್ಲಿ ಹಲವು ಬದಲಾವಣೆಗಳನ್ನು ತಂದಿತು. ಅಧಿಕ ಭೂ ಕಂದಾಯದಿಂದ ಕೃಷಿಯನ್ನು ಅವಲಂಭಿಸಿದ ಬಹುಸಂಖ್ಯಾತರಿಗೆ ಒತ್ತಡಗಳು ಉಂಟಾದವು. ಬ್ರಿಟಿಷರು ರೂಪಿಸಿದ ನ್ಯಾಯಾಲಯ ಮತ್ತು ಪೊಲೀಸ್ ವ್ಯವಸ್ಥೆಗಳು ಬಡವರಿಗೆ ನ್ಯಾಯ ಕೊಡಿಸುವಲ್ಲಿ ತಾರತಮ್ಯ

ತೋರಿದವು. ಈ ಬಗೆಯ ಕಾರಣಗಳಿಂದ ಆರಂಭದಿಂದಲೇ ಬ್ರಿಟಿಷರಿಗೆ ಪ್ರತಿರೋಧ ಉಂಟಾಯಿತು.

> ೧೭೬೩ ರಿಂದ ೧೮೫೬ರವರೆಗಿನ ಅವಧಿಯಲ್ಲಿ ನೂರಾರು ಸಣ್ಣ ಪುಟ್ಟ ದಂಗೆಗಳಾದವಲ್ಲದೆ ನಲವತ್ತು ಪ್ರಮುಖ ದಂಗೆಗಳಾಗಿದ್ದವು. ದಕ್ಷಿಣ ಭಾರತದಲ್ಲಿ ೧೭೯೪ರಲ್ಲಿ ವಿಜಯನಗರದ ರಾಜರು, ೧೭೯೦ರಲ್ಲಿ ತಮಿಳುನಾಡಿನ ಪಾಳೇಗಾರರು ಮತ್ತು ೧೮೧೩-೧೪ರಲ್ಲಿ ಪರ್ಲಕಾಮೆಡಿಗಳು ತಿರುಗಿ ಬಿದ್ದಿದ್ದರು.[೧]

ಈ ಕಾಲಕ್ಕಾಗಲೇ ಭಾರತದ ಹಲವೆಡೆ ಪರಂಪರಾಗತವಾದ ಸಂಪ್ರದಾಯ ಮತ್ತು ಆಚರಣೆಗಳನ್ನು ಪುನರ್‌ವಿಮರ್ಶಿಸುವ ಕೆಲಸಗಳು ಆರಂಭಗೊಂಡಿದ್ದವು ಅದರೊಂದಿಗೆ ರಾಷ್ಟ್ರೀಯತೆಯ ಕಲ್ಪನೆ ಜಾಗೃತಗೊಂಡಿತು. ಇದರೊಟ್ಟಿಗೆ ಹಿಂದೂ ಧರ್ಮದ ಪುನರುತ್ಥಾನದ ಪ್ರಯತ್ನಗಳು ನಡೆದವು. ಈ ಕಾಲಕ್ಕಾಗಲೇ ಭಾರತದ ಬಹುಭಾಗ ಬ್ರಿಟಿಷರ ವಶವಾಗಿತ್ತು.

ಭಾರತೀಯ ಶ್ರೀಮಂತ ವರ್ಗದವರು ತಮ್ಮ ಮಕ್ಕಳಿಗೆ ವಿದೇಶಗಳಲ್ಲಿ ಶಿಕ್ಷಣ ಕೊಡಿಸಲು ಆಸಕ್ತರಾದರು. ಹೀಗೆ ಭಾರತದಿಂದ ಹೊರಹೋಗಿ ಶಿಕ್ಷಿತರಾದವರನ್ನು ಪಾಶ್ಚಾತ್ಯ ಶಿಕ್ಷಣ ಕ್ರಮ ಹಾಗೂ ಅದರಲ್ಲಿನ ಆಧುನಿಕತೆ ಸೆಳೆಯಿತು. ಇಂಗ್ಲಿಷ್ ಶಿಕ್ಷಣವೆಂದರೆ ಇಂಗ್ಲಿಷ್ ಭಾಷೆಯನ್ನು ಕಲಿಯುವುದು ಮಾತ್ರವಾಗಿರಲಿಲ್ಲ. ಇಂಗ್ಲಿಷ್ ಭಾಷೆಯ ಮೂಲಕ ಅರ್ಥಶಾಸ್ತ್ರ, ತತ್ವಶಾಸ್ತ್ರ, ವೈದ್ಯಶಾಸ್ತ್ರ ಮೊದಲಾದ ಜ್ಞಾನ ಶಿಸ್ತುಗಳನ್ನು ಅರ್ಥೈಸಿಕೊಳ್ಳುವ ಮಾರ್ಗವೂ ಆಗಿತ್ತು. ೧೮೦೦ರ ವೇಳೆಗಾಗಲೇ ಕಲ್ಕತ್ತಾದ ಸುತ್ತಮುತ್ತಲ ಪ್ರದೇಶಗಳಲ್ಲಿ ಇಂಗ್ಲಿಷ್ ಶಾಲೆಗಳು ಆರಂಭಗೊಂಡಿದ್ದವು. ೧೮೧೭ರಲ್ಲಿ ಕಲ್ಕತ್ತಾದಲ್ಲಿ ಹಿಂದೂ ಕಾಲೇಜು ಹಾಗೂ ಸ್ಕೂಲ್ ಆಫ್ ಸೊಸೈಟಿ – ಈ ಎರಡು ಕೇಂದ್ರಗಳು ಸ್ಥಾಪನೆಗೊಂಡಿದ್ದು ಭಾರತದ ಆಧುನಿಕ ಶಿಕ್ಷಣದ ಚರಿತ್ರೆಯಲ್ಲಿ ಮಹತ್ವದ ಘಟನೆಗಳೆನಿಸಿದವು.

ಅದೇ ಕಾಲಕ್ಕೆ ಬಂಗಾಳ, ಮುಂಬೈ, ಮದರಾಸು ಪ್ರಾಂತ್ಯಗಳಲ್ಲಿ ವಿದ್ಯಾವಂತರಾಗಿದ್ದ ಯುವಕರು ಶಿಕ್ಷಣ ಪ್ರಸಾರದಲ್ಲಿ ಪ್ರಮುಖವಾದ ಪಾತ್ರ ವಹಿಸಿದರು. ಉದಾಹರಣೆಗೆ ರಾಜಾ ರಾಧಕಾಂತದೇವ ಎನ್ನುವವರು ಕಲ್ಕತ್ತಾದಲ್ಲಿ ಆರಂಭಗೊಂಡಿದ್ದ ಪಠ್ಯಪುಸ್ತಕ ಸಮಿತಿಗೆ ಭಾರತೀಯ ಕಾರ್ಯದರ್ಶಿಯಾಗಿದ್ದರು. ಮತ್ತೊಂದೆಡೆ ಭಾರತದ ನಾನಾ ಪ್ರಾಂತ್ಯಗಳಲ್ಲಿ ಕ್ರೈಸ್ತ ಮಿಷನರಿಗಳು ಇಂಗ್ಲಿಷ್ ಶಾಲೆಗಳನ್ನು ಸ್ಥಾಪಿಸಿದ್ದವು.

> ಭಾರತದಲ್ಲಿ ಇಂಗ್ಲಿಷ್ ಆಳುವ ವರ್ಗದವರು ಮಾತಾಡುವ ಭಾಷೆ. ಅದು ಸರ್ಕಾರದ ಹುದ್ದೆಗಳಲ್ಲಿರುವ ಉನ್ನತ ವರ್ಗದ ದೇಶಿಯರು ಮಾತನಾಡುವ ಭಾಷೆ ಕೂಡ, ಅದು ಪೂರ್ವ ಸಮುದ್ರಗಳಾದ್ಯಂತ ವಾಣಿಜ್ಯ ಭಾಷೆಯಾಗುವ ಸಾಧ್ಯತೆ ಇದೆ. ಏಳಿಗೆ ಹೊಂದುತ್ತಿರುವ ಆಫ್ರಿಕಾದ ದಕ್ಷಿಣದಲ್ಲಿ ಒಂದು ಮತ್ತು ಆಸ್ಟ್ರೇಲಿಯಾದಲ್ಲಿ ಇನ್ನೊಂದರಂತೆ ಎರಡು ಮಹಾನ್ ಯುರೋಪಿಯನ್

ಸಮುದಾಯಗಳ ಭಾಷೆ ಇಂಗ್ಲಿಷ್. ಈ ಸಮುದಾಯಗಳು ಪ್ರತಿವರ್ಷವೂ ಹೆಚ್ಚೆಚ್ಚು ಪ್ರಾಮುಖ್ಯ ಪಡೆಯುತ್ತಿವೆ ಮತ್ತು ನಮ್ಮ ಭಾರತೀಯ ಸಾಮ್ರಾಜ್ಯದೊಡನೆ ನಿಕಟ ಸಂಬಂಧ ಹೊಂದಿವೆ. ನಾವು ನಮ್ಮ ಸಾಹಿತ್ಯದ ಆಂತರಿಕ ಮೌಲ್ಯದ ಕಡೆಗೆ ನೋಡಲಿ ಅಥವಾ ಈ ದೇಶದ ನಿರ್ದಿಷ್ಟ ಸನ್ನಿವೇಶವನ್ನು ನೋಡಲಿ, ಎಲ್ಲ ವಿದೇಶಿ ಭಾಷೆಗಳಿಗಿಂತ ಇಂಗ್ಲಿಷ್ ಭಾಷೆಯು ನಮ್ಮ ದೇಶಿಯ ಪ್ರಜೆಗಳಿಗೆ ಅತ್ಯಂತ ಉಪಯುಕ್ತ ಭಾಷೆಯೆಂದು ಭಾವಿಸಲು ಬಲವಾದ ಕಾರಣವನ್ನು ಕಾಣಬಹುದು.[೨]

ಹಾಗಾಗಿ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ವ್ಯವಸ್ಥೆ ಜಾರಿಗೊಳ್ಳಬೇಕೆಂದು ಆ ಕಾಲದ ಉನ್ನತ ವರ್ಗದ ಕೆಲವು ಭಾರತೀಯರು ಬಯಸುತ್ತಾರೆ. ಈ ಎಲ್ಲ ಪ್ರಯತ್ನಗಳು ನಡೆಯುತ್ತಿದ್ದಂತೆಯೇ ೧೮೨೩ರಲ್ಲಿ ವ್ಯವಸ್ಥಿತವಾಗಿ ಶಿಕ್ಷಣ ನೀಡುವ ಪದ್ಧತಿ ವಿಸ್ತೃತಗೊಂಡಿತು. ಅದೇ ವರ್ಷ ಭಾರತದ ಗವರ್ನರ್ ಜನರಲ್ ಬಂಗಾಳ ಪ್ರಾಂತ್ಯದ ಶಿಕ್ಷಣಕ್ಕಾಗಿ ಸಾರ್ವಜನಿಕ ಶಿಕ್ಷಣದ ಸಾಮಾನ್ಯ ಸಮಿತಿಯೊಂದನ್ನು ರಚಿಸಿದನು. ಈ ಸಮಿತಿಗೆ ೧೮೧೩ರ ಚಾರ್ಟರ್ ಕಾಯ್ದೆಯನ್ವಯ ವಿದ್ಯಾಭ್ಯಾಸಕ್ಕಾಗಿ ಮೀಸಲಿಟ್ಟಿರುವ ಒಂದು ಲಕ್ಷ ರೂಪಾಯಿಗಳನ್ನು ಹೇಗೆ ವಿನಿಯೋಗಿಸಬೇಕೆಂಬುದನ್ನು ನಿರ್ಧರಿಸುವ ಜವಾಬ್ದಾರಿಯನ್ನು ವಹಿಸಲಾಯಿತು. ಸಮಿತಿಯಲ್ಲಿದ್ದ ಹಲವು ಸದಸ್ಯರು ಸಂಸ್ಕೃತ, ಅರೇಬಿಕ್, ಪರ್ಷಿಯನ್ ಮೊದಲಾದ ಭಾಷೆಗಳ ಬಗ್ಗೆ ಅಭಿಮಾನ ಹೊಂದಿದ್ದರು. ಹಾಗಾಗಿ ಈ ಭಾಷೆಗಳು ಹಾಗೂ ಅವುಗಳ ಸಾಹಿತ್ಯದ ಕಲಿಕೆಗೆ ಪ್ರೋತ್ಸಾಹ ನೀಡಬೇಕೆಂದು ಸೂಚಿಸಿದರು. ಇದರಿಂದಾಗಿ ಆಗ್ರಾ, ದೆಹಲಿ ಹಾಗೂ ಕಲ್ಕತ್ತಾಗಳಲ್ಲಿ ಸಂಸ್ಕೃತ ಕಾಲೇಜುಗಳನ್ನು ಸ್ಥಾಪಿಸಲಾಯಿತು. ಅರೇಬಿಕ್ ಮತ್ತು ಸಂಸ್ಕೃತ ಭಾಷೆಗಳ ಕಲಿಕೆಯು ಆರಂಭಗೊಂಡಿತು. ಅದರೊಂದಿಗೆ ಹೆಸರಾಂತ ಇಂಗ್ಲಿಷ್ ಕೃತಿಗಳನ್ನು ಭಾರತೀಯ ಅಭಿಜಾತ ಭಾಷೆಗಳಿಗೆ ಭಾಷಾಂತರ ಮಾಡಲು ಇಂಗ್ಲಿಷ್ ಕಲಿತ ದೇಶಿಯ ವಿದ್ವಾಂಸರನ್ನು ನೇಮಿಸಲಾಯಿತು. ಈ ಎಲ್ಲ ಬೆಳವಣಿಗೆಗಳನ್ನು ಗಮನಿಸಿದ ಕೆಲವು ಉನ್ನತ ವರ್ಗದ ಭಾರತೀಯರು ಸಮಿತಿಯ ಈ ತೀರ್ಮಾನಗಳಿಗೆ ಆಕ್ಷೇಪಣೆ ವ್ಯಕ್ತಪಡಿಸಿದರು.

ಸಾರ್ವಜನಿಕ ಶಿಕ್ಷಣದ ಸಾಮಾನ್ಯ ಸಮಿತಿಯ ನಿರ್ಧಾರಗಳಿಗೆ ೧೮೨೪ರಲ್ಲಿ ಕಂಪನಿ ಸರ್ಕಾರದ ನಿರ್ದೇಶಕರಿಂದಲೇ ಟೀಕೆಗಳು ಬಂದವು. ಇಂಗ್ಲಿಷ್ ಶಿಕ್ಷಣದ ಬಗ್ಗೆ ದೇಶದ ಹಲವೆಡೆಗಳಿಂದ ಒತ್ತಡ ಸೃಷ್ಟಿಯಾಗತೊಡಗಿತು. ಆದುದರಿಂದ ಸಾರ್ವಜನಿಕ ಶಿಕ್ಷಣ ಸಮಿತಿಯು ೧೮೩೩ರಲ್ಲಿ ಕೆಲವು ಇಂಗ್ಲಿಷ್ ಶಾಲೆಗಳನ್ನು ಆರಂಭಿಸಿತು. ಈಗಾಗಲೇ ಇದ್ದಂತಹ ಆಗ್ರಾ, ಕಲ್ಕತ್ತಾ ಹಾಗೂ ಮದರಾಸಿನ ಕಾಲೇಜುಗಳಲ್ಲಿ ಇಂಗ್ಲಿಷ್ ತರಗತಿಗಳನ್ನು ಆರಂಭಿಸಲಾಯಿತು. ಈ ಹಂತದಲ್ಲಿ ಸಮಿತಿಯ ಸದಸ್ಯರಲ್ಲಿ ಭಿನ್ನಾಭಿಪ್ರಾಯ ಮೂಡಿತು. ಭಾರತೀಯ ಶಿಕ್ಷಣ ಕ್ರಮವನ್ನು ಬೆಂಬಲಿಸುತ್ತಿದ್ದ ಸಮಿತಿಯ ಅರ್ಧದಷ್ಟು ಸದಸ್ಯರು ಹಳೆಯ ಪದ್ಧತಿಯಾದ ಸಂಸ್ಕೃತ ಮತ್ತು ಅರೇಬಿಕ್ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ

ವೇತನವನ್ನು ಕೊಡುವುದರ ಪರವಾಗಿದ್ದರು ಹಾಗೂ ಸಂಸ್ಕೃತ ಮತ್ತು ಅರೇಬಿಕ್ ಭಾಷೆಗಳ ಗ್ರಂಥಗಳನ್ನು ಪ್ರಕಟಿಸುವುದಕ್ಕಾಗಿ ಉದಾರವಾಗಿ ಹಣವನ್ನು ವೆಚ್ಚ ಮಾಡಬೇಕು ಎನ್ನುವುದರ ಪರವಾಗಿದ್ದರು.

ಪಾಶ್ಚಾತ್ಯ ಶಿಕ್ಷಣದ ಪರವಾದ ಸದಸ್ಯರು 'ಸೋಮಾರಿಗಳಾದ ಮೂವತ್ತು, ಮೂವತ್ತೈದು ವರ್ಷ ವಯಸ್ಸಿನ ದಡ್ಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡುವುದನ್ನು ವಿರೋಧಿಸುತ್ತೇವೆ' ಎಂದರು. ಅಲ್ಲದೇ ಸಂಸ್ಕೃತ ಮತ್ತು ಅರೇಬಿಕ್ ಗ್ರಂಥಗಳ ಪ್ರಕಟಣೆಗಾಗಿ ಮಾಡುತ್ತಿದ್ದ ವೆಚ್ಚವನ್ನು ತಗ್ಗಿಸಬೇಕೆಂದು ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಿದ್ದರು. ಈ ಎರಡು ಗುಂಪುಗಳಲ್ಲಿ ಸಮನ್ವಯ ಉಂಟಾಗದ ಕಾರಣದಿಂದಾಗಿ ಆಗ್ರಾದಲ್ಲಿ ಕಾಲೇಜನ್ನು ಸ್ಥಾಪಿಸುವ ಸರ್ಕಾರದ ಯೋಜನೆಯ ಬಗ್ಗೆ ಒಮ್ಮತ ಮೂಡಲಿಲ್ಲ. ಸಮಿತಿಯ ಐದು ಸದಸ್ಯರು ಪೌರಸ್ತ್ಯವಾದಿಗಳಾಗಿದ್ದರೆ, ಉಳಿದ ಐದು ಸದಸ್ಯರು ಪಾಶ್ಚಾತ್ಯ ಶಿಕ್ಷಣ ಕ್ರಮದ ಪರವಾಗಿದ್ದರು.

ಬಂಗಾಳ ಪ್ರಾಂತ್ಯದಲ್ಲಿ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯಾಗಿದ್ದ ಎಚ್.ಟಿ.ಪ್ರಿನ್ಸೆಪ್ (೧೭೯೨-೧೮೭೮) ಪೌರಾಸ್ತ್ಯವಾದಿಗಳ ನೇತೃತ್ವ ವಹಿಸಿದರು. ತರುಣ ಅಧಿಕಾರಿಗಳಾಗಿದ್ದ ಪಾಶ್ಚಾತ್ಯ ಶಿಕ್ಷಣವಾದಿಗಳು ತಮ್ಮ ವಿಚಾರಗಳನ್ನು ಕಾರ್ಯಗತಗೊಳಿಸುವಂತೆ ಸಾರ್ವಜನಿಕ ಶಿಕ್ಷಣ ಸಮಿತಿಯ ಅಧ್ಯಕ್ಷರೂ ಹಾಗೂ ಗವರ್ನರ್ ಜನರಲ್ ಅವರ ಕಾರ್ಯಕಾರಿ ಮಂಡಳಿಯಲ್ಲಿ ಕಾನೂನು ವಿಭಾಗಗಳ ಸದಸ್ಯನೂ ಆಗಿದ್ದ ಲಾರ್ಡ್ ಥಾಮಸ್ ಬ್ಯಾಬಿಂಗ್ಟನ್ ಮೆಕಾಲೆಯ ಬೆಂಬಲ ಕೋರಿದರು. ಈ ಎರಡು ಗುಂಪುಗಳಲ್ಲಿ ಸಮನ್ವಯ ಉಂಟಾಗದೆ ಎರಡೂ ಪಂಗಡದವರು ತಮ್ಮ ತಮ್ಮ ವಾದಗಳನ್ನು ಲಿಖಿತ ರೂಪದಲ್ಲಿ ಗವರ್ನರ್ ಜನರಲ್ ಅವರಿಗೆ ಒಪ್ಪಿಸುವುದೆಂದು ತೀರ್ಮಾನಿಸಿದರು.

ಲಾರ್ಡ್ ಮೆಕಾಲೆ ಭಾರತಕ್ಕೆ ಬರುತ್ತಿದ್ದಂತೆ ಆತನನ್ನು ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಆದರೆ ಗವರ್ನರ್ ಜನರಲ್ ಅವರು ಶಿಕ್ಷಣ ಮಾಧ್ಯಮದ ಭಾಷೆ ಯಾವುದೆಂದು ನಿರ್ಧಾರ ಮಾಡುವವರೆವಿಗೂ ತಾನು ಅಧ್ಯಕ್ಷ ಸ್ಥಾನದ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲವೆಂದು ನಿರಾಕರಿಸಿದನು. ಸಮಿತಿಯ ಹತ್ತು ಮಂದಿ ಸದಸ್ಯರು ೧೮೩೫ರ ಜನವರಿ ತಿಂಗಳಿನಲ್ಲಿ ಸುಪ್ರೀಂ ಕೌನ್ಸಿಲ್‌ನ ಮುಂದೆ ತಮ್ಮ ತಮ್ಮ ವಾದಗಳನ್ನು ಮಂಡಿಸಿದರು. ಕೌನ್ಸಿಲ್‌ನ ಸದಸ್ಯನಾದ ಲಾರ್ಡ್ ಮೆಕಾಲೆ ಭಾರತೀಯರಿಗೆ ಯಾವ ಬಗೆಯ ಶಿಕ್ಷಣ ನೀಡಬೇಕೆಂಬ ಪ್ರಶ್ನೆಗೆ ಉತ್ತರವಾಗಿ ಒಂದು ಪರಿಪತ್ರವನ್ನು ಸಿದ್ಧಪಡಿಸಿದನು. ಅದನ್ನು ಫೆಬ್ರವರಿ ೨, ೧೮೩೫ರಂದು ಗವರ್ನರ್ ಜನರಲ್‌ಗೆ ಒಪ್ಪಿಸಿದನು. ೧೮೩೫ ಮಾರ್ಚ್ ೭ ರಂದು ಗವರ್ನರ್ ಜನರಲ್ ವಿಲಿಯಂ ಬೆಂಟಿಕ್ ಮೆಕಾಲೆಯ ಪರಿಪತ್ರವನ್ನು ಅನುಮೋದಿಸಿದನು. ಭಾರತದ ಜನರಲ್ಲಿ ಯುರೋಪಿಯನ್ ಸಾಹಿತ್ಯ ಮತ್ತು ವಿಜ್ಞಾನವನ್ನು ಪ್ರಚುರಪಡಿಸುವುದೇ ಬ್ರಿಟಿಷ್ ಸರಕಾರದ ಘನ ಉದ್ದೇಶ ಎಂದು ಸಾರಿದನು.

ಹೀಗೆ ಭಾರತದ ಶಿಕ್ಷಣ ವ್ಯವಸ್ಥೆಯಲ್ಲಿ ಇಂಗ್ಲಿಷ್ ಪ್ರತಿಷ್ಠಾಪನೆಗೊಂಡಿತು. ಮೆಕಾಲೆಯು ತನ್ನ ತಂದೆಗೆ ಬರೆದ ಪತ್ರದಲ್ಲಿ

> ಶಿಕ್ಷಣದ ಬಗ್ಗೆ ತಮ್ಮ ಯೋಜನೆಗಳನ್ನು ಸುಸೂತ್ರವಾಗಿ ಜಾರಿಗೊಳಿಸಿದರೆ, ಇಲ್ಲಿಂದ ಮೂವತ್ತು ವರ್ಷಗಳ ಅನಂತರ ಬಂಗಾಳದ ಗೌರವಾನ್ವಿತ ವರ್ಗಗಳಲ್ಲಿ ಮೂರ್ತಿ ಪೂಜೆಯಲ್ಲಿ ತೊಡಗುವ ಒಬ್ಬನೇ ಒಬ್ಬ ವ್ಯಕ್ತಿಯೂ ಇರುವುದಿಲ್ಲ ಎಂಬುದು ನನ್ನ ದೃಢನಂಬಿಕೆ ಮತ್ತು ಇದು ಮತಾಂತರಗೊಳಿಸುವ ಪ್ರಯತ್ನವಿಲ್ಲದೆ ಸಾಧಿಸಲ್ಪಡುತ್ತದೆ. ಧಾರ್ಮಿಕ ಸ್ವಾತಂತ್ರ್ಯಕ್ಕೆ ಲವಲೇಶವೂ ಅಡ್ಡಿಬರದೇ ನಡೆಯುತ್ತದೆ. ಕೇವಲ ಜ್ಞಾನ ಮತ್ತು ಪರ್ಯಾಲೋಚನೆಗಳ ಸ್ವಾಭಾವಿಕ ಪ್ರಕ್ರಿಯೆಯಿಂದ ಇದು ಸಾಧ್ಯವಾಗುತ್ತದೆ.[೩] ಎಂದು ಹೇಳಿಕೊಂಡಿದ್ದಾನೆ.

### ೩.೨ ಮೆಕಾಲೆಯ ಪರಿಪತ್ರ (೧೮೩೫)

ಲಾರ್ಡ್ ಥಾಮಸ್ ಬ್ಯಾಬಿಂಗ್ಟನ್ ಮೆಕಾಲೆ (೧೮೦೦–೧೮೫೯) : ಅಧ್ಯಯನಶೀಲ ಹಾಗೂ ಚಿಂತಕನಾಗಿದ್ದ ಈತ ಬ್ರಿಟನ್ನಿನ ಲೋಕಸಭೆಗೆ ಎರಡು ಬಾರಿ ಆಯ್ಕೆಯಾಗಿದ್ದ. ಈಸ್ಟ್ ಇಂಡಿಯಾ ಕಂಪನಿಯ ನಿಯಂತ್ರಣ ಮಂಡಳಿಯ ಕಮಿಶನರ್ ಆಗಿಯೂ ಕಾರ್ಯ ನಿರ್ವಹಿಸಿದ್ದ. ಈ ಹಂತದಲ್ಲಿಯೇ ಬ್ರಿಟನ್ನಿನ ವಸಾಹತುಗಳಲ್ಲೊಂದಾದ ಭಾರತದ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದ. ಈ ತಿಳಿವಳಿಕೆಯಲ್ಲಿ ಭಾರತದ ಭಾಷೆಗಳು, ಸಾಹಿತ್ಯ, ಧರ್ಮ, ಕಲೆ ಇತ್ಯಾದಿ ವಿಚಾರಗಳಲ್ಲಿ ಅವನಿಗೆ ತಿರಸ್ಕಾರವಿತ್ತು. ಇವನು ೧೮೩೪ರ ಜೂನ್ ೧೦ರಂದು ಭಾರತದ ಸುಪ್ರೀಂ ಕೌನ್ಸಿಲ್‌ನ ಸದಸ್ಯನಾಗಿ ನೇಮಕಗೊಂಡು ಇಂಗ್ಲೆಂಡಿನಿಂದ ಬಂದನು. ಭಾರತೀಯರು ತಮ್ಮ ಮೌಢ್ಯದಿಂದ ಹೊರಬಂದು ಅಭಿವೃದ್ಧಿ ಹೊಂದಬೇಕೆಂದು ಆತ ಬಯಸಿದ್ದ. ಆ ಅಭಿವೃದ್ಧಿ ತಾನು ಪ್ರತಿಪಾದಿಸುವ ತತ್ತ್ವಗಳಲ್ಲಿದೆ ಎಂದೂ ಹೇಳಿದ. ಆ ತತ್ತ್ವಗಳು ಅವನು ಸಿದ್ಧಪಡಿಸಿದ ಟಿಪ್ಪಣಿಯಲ್ಲಿ ವ್ಯಕ್ತವಾಗಿವೆ.

ಮೆಕಾಲೆ ಭಾರತದಲ್ಲಿದ್ದದ್ದು ೪ ವರ್ಷಗಳು (೧೮೩೪–೩೮) ಮಾತ್ರ. ಆ ಅವಧಿಯಲ್ಲಿ ಆತ ಭಾರತೀಯ ಶಿಕ್ಷಣಕ್ಕೆ ಹೊಸ ತಿರುವನ್ನು ನೀಡಿದ. ಆತ ಭಾರತಕ್ಕೆ ಬರುವ ವೇಳೆಗಾಗಲೇ ಭಾರತೀಯರಿಗೆ ಎಂಥ ಶಿಕ್ಷಣ ನೀಡಬೇಕೆಂದು ಎರಡು ಗುಂಪುಗಳ ನಡುವೆ ವಾದಗಳಾಗಿದ್ದವು. ಅವುಗಳಿಗೆ ಒಂದು ತೀರ್ಮಾನ ನೀಡಲೆಂದು ಬೆಂಟಿಂಕನು ಮೆಕಾಲೆಯನ್ನು ಸಾರ್ವಜನಿಕ ಶಿಕ್ಷಣದ ಸಾಮಾನ್ಯ ಸಮಿತಿಯ ಅಧ್ಯಕ್ಷನನ್ನಾಗಿ ನೇಮಿಸಿದ್ದನು.

ಆ ಸ್ಥಾನದಲ್ಲಿದ್ದ ಮೆಕಾಲೆಯ ಮುಂದೆ ೧೮೩೫ರ ಜನವರಿಯಲ್ಲಿ ಸಮಿತಿಯ ಎರಡು ಗುಂಪಿನವರು ತಮ್ಮ ವಾದಗಳನ್ನು ಮಂಡಿಸಿದರು. ಸಂಸ್ಕೃತ, ಅರಬ್ಬಿ, ಪಾರ್ಸಿ ಮುಂತಾದ ಪೌರಾಸ್ತ್ಯ ಭಾಷೆಗಳಲ್ಲಿ ಶಿಕ್ಷಣ ನೀಡಬೇಕು ಮತ್ತು ಅವನ್ನು ಕಲಿಯುವ ವಿದ್ಯಾರ್ಥಿಗಳಿಗೆ ಶಿಷ್ಯವೇತನ ನೀಡಬೇಕೆಂಬುದು ಒಂದು ಗುಂಪಿನ ವಾದವಾದರೆ,

ಸ್ಥಳೀಯ ಭಾಷೆಗಳಲ್ಲಿ ಸಾಮಾನ್ಯ ಜ್ಞಾನವನ್ನು, ಇಂಗ್ಲಿಷಿನಲ್ಲಿ ಉನ್ನತ ಶಿಕ್ಷಣವನ್ನು ನೀಡಬೇಕೆಂಬುದು ಮತ್ತೊಂದು ಗುಂಪಿನ ವಾದವಾಗಿತ್ತು. ಈ ವಾದಗಳನ್ನು ಆಲಿಸಿದ ಮೆಕಾಲೆ ಅವಕ್ಕೆ ಉತ್ತರದ ರೂಪದಲ್ಲಿ ೧೮೩೫ ಫೆಬ್ರವರಿ ೨ರಂದು ಒಂದು ಟಿಪ್ಪಣಿಯನ್ನು ರಚಿಸಿದ. ಅದೇ ಮುಂದೆ ಮೆಕಾಲೆಯ ಟಿಪ್ಪಣಿ (ಮೆಕಾಲೆ ಮಿನಟ್) ಎಂದು ಹೆಸರಾಯಿತು.

ಮೆಕಾಲೆ ಟಿಪ್ಪಣಿಯಲ್ಲಿ ಭಾರತೀಯ ಭಾಷೆಗಳು ಮೌಲ್ಯಯುತವಾದವಲ್ಲ ಹಾಗೂ ಇಂಗ್ಲಿಷ್ ಎಲ್ಲ ದೃಷ್ಟಿಯಿಂದಲೂ ಶ್ರೇಷ್ಠವಾಗಿದೆ ಎಂಬ ವಿಚಾರವೇ ಪ್ರಮುಖವಾಗಿ ಚರ್ಚೆಯಾಗಿದೆ. ಮೆಕಾಲೆ ಆ ಬಗ್ಗೆ ತನ್ನ ಸ್ಪಷ್ಟ ನಿಲುವುಗಳನ್ನು ಟಿಪ್ಪಣಿಯಲ್ಲಿ ತಿಳಿಸಿದ್ದಾನೆ. ಸರ್ಕಾರ ನಿಗದಿಮಾಡಿರುವ ಹಣವನ್ನು ಖರ್ಚುಮಾಡುವ ವಿವಾದದ ಬಗ್ಗೆ ಹೇಳುತ್ತಾ ಆ ಹಣವನ್ನು ವ್ಯರ್ಥವಾಗಿಸದೆ ಸದುದ್ದೇಶಕ್ಕೆ ಹಾಗೂ ಸಾರ್ವಜನಿಕರ ಹಿತಾಸಕ್ತಿಗೆ ಬಳಸುವುದು ಹೇಗೆ ಎಂಬುದನ್ನು ಯೋಚಿಸಬೇಕು. ಒಳ್ಳೆಯ ಕೆಲಸಕ್ಕೆ ಆ ಹಣವನ್ನು ಬಳಸಬೇಕು ಎನ್ನುವುದನ್ನೇ ಟೀಕಿಸುತ್ತಿರುವವರು ಅದನ್ನು ಪ್ರಯೋಜನವಿಲ್ಲದ ಕೆಲಸಕ್ಕೆ ಬಳಸಬೇಕು ಎನ್ನುತ್ತಿದ್ದಾರೆ. ಇಂಗ್ಲಿಷಿನಲ್ಲಿ ಉತ್ತಮವಾದ ಎಲ್ಲ ವಿಚಾರಗಳಿದ್ದರೂ ಸರ್ಕಾರ ಅದನ್ನು ತಿರಸ್ಕರಿಸುವುದು ಸರಿಯಲ್ಲ. ಜೊತೆಗೇ ಈ ವಿಚಾರ ಚರ್ಚೆಯಲ್ಲಿರುವಾಗ ಹಣದ ಬಳಕೆಯ ಬಗ್ಗೆ ಸಾರ್ವಜನಿಕರು ತಮ್ಮ ಅಹವಾಲನ್ನು ಇದುವರೆಗೂ ಸಲ್ಲಿಸಿಲ್ಲ. ಆದ್ದರಿಂದ ಸಮಿತಿಯ ವಿಚಾರಗಳನ್ನೇ ಆಧರಿಸಿ ತೀರ್ಮಾನಕ್ಕೆ ಬರಬೇಕು ಎಂದಿದ್ದಾನೆ. ಆ ಪ್ರಕಾರ ಭಾರತೀಯರನ್ನು ಬುದ್ಧಿವಂತರನ್ನಾಗಿ ಮಾಡಲು, ಅವರಿಗೆ ಸರ್ಕಾರಿ ನೌಕರಿ ದೊರೆಯುವಂತೆ ಮಾಡಲು ಬೇಕಾಗಿರುವ ಶಿಕ್ಷಣದ ಬಗ್ಗೆ ಗಮನಹರಿಸಲಾಯಿತು.

ಸ್ಥಳೀಯ ಭಾಷೆಗಳು ಅಲ್ಲಿನ ಸ್ಥಳೀಯರ ನಡುವೆ ಮಾತ್ರ ಬಳಕೆಯಾಗುತ್ತವೆ. ಅದರ ಹೊರತಾಗಿ ಸಾಹಿತ್ಯವನ್ನಾಗಲಿ, ವಿಜ್ಞಾನವನ್ನಾಗಲಿ ಅಥವಾ ಇನ್ಯಾವ ವಿಷಯವನ್ನಾಗಲಿ ಒಳಗೊಂಡಿಲ್ಲದ ಒರಟಾದ ಭಾಷೆಗಳಾಗಿವೆ. ಭಾರತದ ಬಹು ಭಾಷೆಗಳ ಸ್ಥಿತಿ ಹೀಗೆಯೇ ಇದೆ. ಅವು ಬೇರೊಂದು ಭಾಷೆಯ ಮೂಲಕ ಶ್ರೀಮಂತವಾಗುವ ತನಕ ಅವುಗಳಲ್ಲಿ ಭಾಷಾಂತರದ ಕೆಲಸ ಕಷ್ಟಸಾಧ್ಯ. ಈ ಕಾರಣದಿಂದ ಭಾರತೀಯರ ಅಭಿವೃದ್ಧಿಗೆ ಬೇಕಾದ ಶಿಕ್ಷಣವನ್ನು ಸ್ಥಳೀಯ ಭಾಷೆಗಳಿಗಿಂತ ಬೇರೊಂದು ಭಾಷೆಯ ಮೂಲಕ ನೀಡಬೇಕಿದೆ. ಆ ಭಾಷೆ ಸಂಸ್ಕೃತ, ಅರಬ್ಬಿ, ಪಾರ್ಸಿ, ಇಂಗ್ಲಿಷ್ ಇವುಗಳಲ್ಲಿ ಯಾವುದಾಗಿರಬೇಕೆಂಬ ವಿಚಾರ ಬಂದಾಗ ಮೆಕಾಲೆ ಹೇಳಿದ್ದು ಹೀಗೆ ಅರಬ್ಬಿ, ಸಂಸ್ಕೃತ ಭಾಷೆಗಳ ಜ್ಞಾನ ನನಗೆ ಅಷ್ಟಾಗಿಲ್ಲ. ಅವುಗಳ ಬಗ್ಗೆ ಪೂರ್ವಜರಿಂದ ಕೇಳಿದ್ದೇನೆ ಹಾಗೂ ಅವುಗಳ ಕೆಲವು ಅನುವಾದಗಳನ್ನು ಓದಿದ್ದೇನೆ. ಆದರೂ ಯೂರೋಪಿಯನ್ ಭಾಷೆಗಳ ಶ್ರೀಮಂತಿಕೆಯು ಯಾರೂ ಪ್ರಶ್ನಿಸಲಾರದಂತಿದೆ. ಅವುಗಳಲ್ಲಿ ಸಾಕಷ್ಟು ಸಾಹಿತ್ಯ, ಇತಿಹಾಸ, ವಿಜ್ಞಾನ

ಎಲ್ಲವೂ ಇದೆ. ಹೀಗಾಗಿ ಪೌರ್ವಾತ್ಯ ಸಾಹಿತ್ಯಕ್ಕೂ, ಪಾಶ್ಚಾತ್ಯ ಸಾಹಿತ್ಯಕ್ಕೂ ಹೋಲಿಕೆ ಸಾಧ್ಯವಿಲ್ಲ.

ಇಂಗ್ಲಿಷ್ ಭಾಷೆಯನ್ನು ಸ್ಥಳೀಯ ಉನ್ನತ ವರ್ಗದವರೂ ಬಳಸುತ್ತಿದ್ದಾರೆ. ಕ್ರಮೇಣ ಅದು ಇಡೀ ವ್ಯಾಪಾರ ಉದ್ದಿಮೆಗಳ ಭಾಷೆಯು ಆಗುತ್ತದೆ. ಆದ್ದರಿಂದ ಇಲ್ಲಿನ ಭಾಷೆಗಳ ಸಾಹಿತ್ಯಿಕ ಮೌಲ್ಯಗಳಿಗಿಂತ ಹೆಚ್ಚಾಗಿ ಬಳಕೆಯಾಗುವ, ಸಂಪರ್ಕ ಏರ್ಪಡಿಸುವ ಭಾಷೆಯತ್ತ ಗಮನಹರಿಸಬೇಕು ಮತ್ತು ಇದನ್ನು ಕುರಿತು ಸಕಾರಣವಾಗಿ ಚಿಂತಿಸಬೇಕು. ಈ ನಿಟ್ಟಿನಲ್ಲಿ ಇಂಗ್ಲಿಷ್ ಸರಿಹೊಂದುವ ಭಾಷೆ ಎನಿಸುತ್ತದೆ ಎಂಬುದು ಮೆಕಾಲೆಯ ಚಿಂತನೆಯಾಗಿತ್ತು.

ಮಾತೃಭಾಷೆಗಳಿಂದ ಶಿಕ್ಷಣವಂತರಾಗದ ಭಾರತೀಯರನ್ನು ಶಿಕ್ಷಿತರನ್ನಾಗಿ ಮಾಡಲು ಕಡ್ಡಾಯವಾಗಿ ವಿದೇಶಿ ಭಾಷೆಯ ಶಿಕ್ಷಣವೇ ಅನಿವಾರ್ಯವಾಗಿದೆ. ಇಲ್ಲಿನ ವಿದ್ಯಾರ್ಥಿಗಳು ಸಂಸ್ಕೃತ ಅಥವಾ ಅರಬ್ಬಿ ಕಲಿಯಲು ವಿದ್ಯಾರ್ಥಿವೇತನವನ್ನು ಬಯಸುತ್ತಿದ್ದಾರೆ. ಇವರ್‍ಯಾರು ಸ್ವಂತ ಖರ್ಚಿನಲ್ಲಿ ಓದದಿರುವುದು ಆಶ್ಚರ್ಯವೆನಿಸಿದೆ. ಈಗಾಗಲೇ ಸಂಸ್ಕೃತ ಕಾಲೇಜಿನಿಂದ ಕಲಿತ ವಿದ್ಯಾರ್ಥಿಗಳು ಸರ್ಕಾರಕ್ಕೆ ತಮಗೆ ಸಾಮಾನ್ಯವಾದ ಹುದ್ದೆಗಳನ್ನಾದರೂ ಒದಗಿಸಿ ಎಂದು ಗವರ್ನರ್ ಜನರಲ್‌ಗೆ ಮನವಿ ಮಾಡಿದ್ದಾರೆ. ಆದರೆ ಅದು ಸರ್ಕಾರದ ಹೊಣೆಯಲ್ಲ.

ಸಂಸ್ಕೃತ, ಅರಬ್ಬಿ ಪುಸ್ತಕಗಳ ಪ್ರಕಟಣೆಗೆ ಈಗಾಗಲೇ ಅರವತ್ತು ಸಾವಿರ ರೂಪಾಯಿಗಳನ್ನು ಖರ್ಚು ಮಾಡಲಾಗಿದೆ. ಆದರೆ, ಆ ಪುಸ್ತಕಗಳಲ್ಲಿ ಕೇವಲ ಒಂದು ಸಾವಿರ ರೂಪಾಯಿಗಳಷ್ಟು ಪುಸ್ತಕಗಳು ಮಾರಾಟವಾಗಿಲ್ಲ. ಅದೇ ಅವಧಿಯಲ್ಲಿ ಏಳರಿಂದ ಎಂಟು ಸಾವಿರದವರೆಗೆ ಇಂಗ್ಲಿಷ್ ಪುಸ್ತಕಗಳು ಮಾರಾಟವಾಗಿವೆ. ಈ ಎಲ್ಲ ಕಾರಣಗಳಿಂದ ಸಂಸ್ಕೃತ, ಅರೇಬಿಕ್ ಭಾಷೆಗಳ ಕಲಿಕೆಗೆ ಹಣ ವಿನಿಯೋಗಿಸುವುದು ವ್ಯರ್ಥವೆನಿಸುತ್ತದೆ.

ಇದಕ್ಕೆ ಪರಿಹಾರವಾಗಿ ಇಂಗ್ಲಿಷ್ ಭಾಷೆಯ ಮೂಲಕ ಶಿಕ್ಷಣ ನೀಡುವುದೆ ಸರಿಯಾದ ಮಾರ್ಗವಾಗಿದೆ. ಆದರೆ, ಭಾರತದ ಇಷ್ಟು ದೊಡ್ಡ ಸಮುದಾಯವನ್ನು ಶಿಕ್ಷಣವಂತರನ್ನಾಗಿ ಮಾಡುವುದು ಸವಾಲಿನ ಕೆಲಸವಾಗಿದೆ. ಆದರೂ ನಮ್ಮಿಂದ ಈ ದೇಶಕ್ಕೆ ಆದಷ್ಟು ಉತ್ತಮವಾದುದನ್ನು ಮಾಡಬೇಕಿದೆ. ಈ ದೃಷ್ಟಿಯಲ್ಲಿ ಸರ್ಕಾರ ಮತ್ತು ಸಮುದಾಯದ ನಡುವೆ ಒಂದು ಅನುವಾದಕ ವರ್ಗ (ಇಂಟರ್‌ಪ್ರಿಟ್ ಕ್ಲಾಸ್)ವನ್ನು ಸೃಷ್ಟಿ ಮಾಡಬೇಕು. ಅದರ ಮೂಲಕ ಸ್ಥಳೀಯರನ್ನು ಬದಲಾಯಿಸಿ ಪಾಶ್ಚಾತ್ಯ ಜ್ಞಾನದ ಮೂಲಕ ಅವರನ್ನು ಶ್ರೀಮಂತಗೊಳಿಸಬೇಕು. ಅವರನ್ನು ಸಮರ್ಪಕವಾಗಿ ರೂಪಿಸಿ ಇಡೀ ದೊಡ್ಡ ಸಮುದಾಯಕ್ಕೆ ಶಿಕ್ಷಣ ನೀಡುವಂತಾಗಬೇಕು. ಅಂಥ ವರ್ಗ ಹೇಗಿರಬೇಕೆಂದರೆ 'ಬಣ್ಣದಲ್ಲಿ ಮತ್ತು ರಕ್ತದಲ್ಲಿ ಭಾರತೀಯರಾಗಿದ್ದು, ಬೌದ್ಧಿಕವಾಗಿ ಅಂದರೆ ಅವರ

ಅಭಿರುಚಿಯಲ್ಲಿ, ಅಭಿಪ್ರಾಯದಲ್ಲಿ, ಅವರ ನೈತಿಕತೆ ಹಾಗೂ ಬುದ್ಧಿಮತ್ತೆಗಳಲ್ಲಿ ಇಂಗ್ಲಿಷರಾಗಿರಬೇಕು' ಎಂದು ಮೆಕಾಲೆ ತನ್ನ ನಿಲುವನ್ನು ಅವನ ಟಿಪ್ಪಣಿಯಲ್ಲಿ ಪ್ರತಿಪಾದಿಸಿದ್ದಾನೆ. ಮೆಕಾಲೆಯ ಈ ಟಿಪ್ಪಣಿಯನ್ನು ಲಾರ್ಡ್ ವಿಲಿಯಂ ಬೆಂಟಿಂಕ್ ಒಪ್ಪಿ ೧೮೩೫ ಮಾರ್ಚ್ ೭ರಂದು ಸಹಿ ಮಾಡಿದ.

**೩.೩ ಮೆಕಾಲೆ ಟಪ್ಪಣಿಗೆ ಉಂಟಾದ ವಿರೋಧ**

ಲಾರ್ಡ ಮೆಕಾಲೆಯ ಟಿಪ್ಪಣಿಗೆ ಸಮಿತಿಯ ಸದಸ್ಯರಿಂದ ಆಕ್ಷೇಪಣೆಗಳು ಬಂದವು. ಅವುಗಳಲ್ಲಿ ಎಚ್.ಟಿ. ಪ್ರಿನ್ಸೆಪ್‌ನ ಟೀಕೆಗಳು ಮುಖ್ಯವಾಗಿವೆ. ಪ್ರಿನ್ಸೆಪ್‌ನ ಪ್ರಕಾರ ಮೆಕಾಲೆಯ ವಾದ ಎರಡು ಮುಖ್ಯ ನೆಲೆಗಳಲ್ಲಿದೆ. ಇಲ್ಲಿನ ಸ್ಥಳೀಯ ಭಾಷೆಗಳು ವಿಜ್ಞಾನ ಅಥವಾ ಸಾಹಿತ್ಯವನ್ನು ಬೋಧಿಸಲು ಸಮರ್ಥವಲ್ಲ. ಇಂಗ್ಲಿಷ್ ಅಥವಾ ಸಂಸ್ಕೃತ, ಅರಬ್ಬಿ ಭಾಷೆಗಳಲ್ಲಿ ಯಾವುದಾದರೊಂದನ್ನು ಆಯ್ಕೆಮಾಡಬೇಕು ಎಂಬುದು ಒಂದು ನೆಲೆಯಾದರೆ, ಸಂಸ್ಕೃತ ಅಥವಾ ಅರಬ್ಬಿ ಭಾಷೆಗಳ ಸಾಹಿತ್ಯ ಮೌಲ್ಯಯುತವಲ್ಲ ಎಂದು ಹೇಳಿ, ಇಂಗ್ಲಿಷ್ ಭಾಷೆ ಉನ್ನತ ದರ್ಜೆಯದೆಂದು ವಾದಿಸಿ, ಅದರಲ್ಲಿ ಉತ್ತಮ ಸಾಹಿತ್ಯ ಹಾಗೂ ವಿಜ್ಞಾನದ ವಿಷಯಗಳನ್ನು ಕಲಿಸಲು ಸೂಕ್ತ ಎಂದಿರುವುದು ಮತ್ತೊಂದು ನೆಲೆಯಾಗಿದೆ. ಇಂಗ್ಲಿಷಿನಲ್ಲಿಯೇ ಭಾರತೀಯರ ಶಿಕ್ಷಣವಾಗಬೇಕೆಂಬುದು ಈ ವಿಚಾರಗಳ ಸಾರವಾಗಿದೆ. ಆದರೆ ಅರಬ್ಬಿ, ಸಂಸ್ಕೃತಗಳ ಮಹತ್ವವನ್ನು ಕುರಿತು ಮೆಕಾಲೆಗೆ ಯಾರೂ ತಿಳಿಸಲಿಲ್ಲ. ಇದರಿಂದ ಯೂರೋಪಿಯನ್ ಭಾಷೆ ಮತ್ತು ವಿಚಾರವನ್ನು ಇನ್ನು ಮುಂದೆ ಕಲಿಸಬೇಕಾಗುತ್ತದೆ ಎಂಬುದು ಪ್ರಿನ್ಸೆಪ್‌ನ ವಾದ. ಇಂಗ್ಲಿಷ್ ಭಾಷೆ ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳ ಸಂಪರ್ಕದಿಂದ ಪ್ರಬುದ್ಧವಾಗಿದೆ. ಅವೆಲ್ಲ ಯೂರೋಪಿಯನ್ ಸಂಸ್ಕೃತಿಗೆ ಸೇರಿದ್ದರಿಂದ ಒಂದಕ್ಕೊಂದು ಪೂರಕವಾಗಿವೆ. ಆದರೆ ಇಂಗ್ಲಿಷ್ ಅಪರಿಚಿತ ಸಂಸ್ಕೃತಿಯದ್ದಾಗಿರುವುದರಿಂದ ದೇಶೀಯ ಭಾಷೆಗಳು ಇಂಗ್ಲಿಷಿನಿಂದ ಶ್ರೀಮಂತವಾಗಬೇಕಿಲ್ಲ. ಆದ್ದರಿಂದ ಸಂಸ್ಕೃತ ಮತ್ತು ಅರೇಬಿಕ್ ಭಾಷೆಗಳಲ್ಲಿ ಯಾವುದು ಅನುಕೂಲಕರ ಎಂಬುದನ್ನು ಸರಿಯಾಗಿ ಪರೀಕ್ಷಿಸಬೇಕಾದ ಅನಿವಾರ್ಯತೆ ನಮಗಿದೆ ಮತ್ತು ಮೆಕಾಲೆಯ ವಿಚಾರದಿಂದ ಇಲ್ಲಿನ ಸಂಸ್ಕೃತ ಶಾಲೆ ಮತ್ತು ಮದರಾಸಗಳನ್ನು ಮುಚ್ಚಲಾಗುತ್ತದೆ. ಪರಿಣಾಮವಾಗಿ ಸ್ಥಳೀಯ ಶಿಕ್ಷಣ ನಾಶವಾಗುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾನೆ.

ಪ್ರಿನ್ಸೆಪ್ ಗವರ್ನರ್ ಜನರಲ್‌ಗೆ ೧೮೩೫ ಫೆಬ್ರವರಿ ೧೫ರಂದು ಮೆಕಾಲೆ ಟಿಪ್ಪಣಿಗೆ ಪ್ರತಿಕ್ರಿಯೆ ಬರೆದಿದ್ದ. ಆದರೆ ಪ್ರಿನ್ಸೆಪ್‌ನ ಪತ್ರ ತಲುಪುವ ವೇಳೆಗೆ ಮೆಕಾಲೆಯ ಪರಿಪತ್ರಕ್ಕೆ ಸಹಿ ಹಾಕಲಾಗಿತ್ತು. ಲಾರ್ಡ್ ವಿಲಿಯಂ ಬೆಂಟಿಂಕ್ ಈ ವಿಚಾರಗಳನ್ನು ಅಷ್ಟಾಗಿ ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಆದರೆ ಮೆಕಾಲೆಯ ವರದಿಯಂತೆ ಇಲ್ಲಿನ ಮದರಸ ಮತ್ತು ಸಂಸ್ಕೃತ ಕಾಲೇಜುಗಳನ್ನು ಕೊನೆಗೊಳಿಸಬಾರದೆಂದು ಕಲ್ಕತ್ತದಲ್ಲಿ ಮೂರು ದಿನಗಳ ಒಳಗೆ ೩೦,೦೦೦ ಜನರು ಸಹಿ ಮಾಡಿ ಗವರ್ನರ್ ಜನರಲ್‌ಗೆ ತಲುಪಿಸಿದ್ದರು.

ಈ ವಿಚಾರ ಕೌನ್ಸಿಲ್‌ನಲ್ಲಿ ಚರ್ಚೆಗೆ ಬಂದಾಗ ಇಲ್ಲಿನ ಸಂಸ್ಕೃತ ಮತ್ತು ಮದರಸ ಕಾಲೇಜುಗಳನ್ನು ಮುಚ್ಚುವುದಿಲ್ಲ. ಬದಲಾಗಿ ಅಲ್ಲಿ ಇಂಗ್ಲಿಷ್ ಕಲಿಸುವುದರೊಡನೆ ಸ್ಥಳೀಯ ಸಾಹಿತ್ಯವನ್ನು ತಿಳಿಸಲು ಕಡ್ಡಾಯಗೊಳಿಸಲಾಗುವುದು ಎಂದು ಉತ್ತರ ನೀಡಲಾಯಿತು. ಆದರೆ ಪ್ರಿನ್ಸೆಪ್ 'ಇಲ್ಲಿ ಏನೇ ಉತ್ತರ ನೀಡಿದರೂ ಸರ್ಕಾರ ನಿಗದಿಗೊಳಿಸಿರುವ ಹಣವನ್ನು ಮುಂದೆ ಯೂರೋಪಿಯನ್ ವಿಜ್ಞಾನವನ್ನು ಇಂಗ್ಲಿಷ್ ಭಾಷಾ ಮಾಧ್ಯಮದ ಮೂಲಕ ಕಲಿಸಲು ಉಪಯೋಗಿಸಲಾಗುವುದೆಂದು ನಿರ್ಧರಿಸಲಾಗಿದೆ. ಈ ವಿಚಾರದ ಬಗ್ಗೆ ಯಾವುದೇ ಭಿನ್ನಾಭಿಪ್ರಾಯಗಳನ್ನು ಯಾರೂ ಪರಿಗಣಿಸುವುದಿಲ್ಲ' ಎಂದು ಹೇಳಿದ್ದಾನೆ.

ಪ್ರಿನ್ಸೆಪ್‌ನ ಊಹೆಯಂತೆ ಇಂಗ್ಲಿಷ್ ಮೂಲಕವೇ ಭಾರತೀಯರಿಗೆ ಶಿಕ್ಷಣ ನೀಡಬೇಕೆಂದು ಲಾರ್ಡ್ ವಿಲಿಯಂ ಬೆಂಟಿಂಕ್ ಈ ಮುಂದಿನಂತೆ ಆದೇಶ ಹೊರಡಿಸಿದನು.

- ಯೂರೋಪಿಯನ್ ಸಾಹಿತ್ಯ ಹಾಗೂ ವಿಜ್ಞಾನವನ್ನು ಸ್ಥಳೀಯರ ನಡುವೆ ಜಾರಿಗೆ ತರುವುದು ಹಾಗೂ ಎಲ್ಲ ಹಣವನ್ನು ಇಂಗ್ಲಿಷ್ ಶಿಕ್ಷಣಕ್ಕಾಗಿ ಬಳಸುವುದು.
- ಸ್ಥಳೀಯ ಶಾಲಾ ಕಾಲೇಜುಗಳನ್ನು, ಸ್ಥಳೀಯ ಓದನ್ನು ನಾಶಗೊಳಿಸುವ ಉದ್ದೇಶ ಈ ಸಮಿತಿಗಿಲ್ಲ. ಸ್ಥಳೀಯ ಉಪನ್ಯಾಸಕರು ಹಾಗೂ ವಿದ್ಯಾರ್ಥಿಗಳು, ಎಲ್ಲ ವಿದ್ಯಾ ಸಂಸ್ಥೆಗಳು ಈ ಸಮಿತಿಯ ವ್ಯಾಪ್ತಿಯೊಳಗೆ ಸೇರಿದರೆ ಅವರ ವಿದ್ಯಾರ್ಥಿ ವೇತನ ಮುಂದುವರಿಯುತ್ತದೆ. ಆದರೆ, ಹೀಗೆ ಮಾಡುವುದರಿಂದ ಕೃತಕವಾಗಿ ಅಂಥ ಓದಿಗೆ ಬೆಂಬಲ ನೀಡಿದಂತಾಗುತ್ತದೆ. ಆದ್ದರಿಂದ ಈ ಶಿಷ್ಯವೇತನವನ್ನು ನಿಲ್ಲಿಸಿ ಅವರೆ ಸ್ವ ಪ್ರೇರಣೆಯಿಂದ ಓದುವಂತಾಗಲಿ. ಈ ಬಗ್ಗೆ ಸಮಿತಿ ಅದರ ಸ್ಥಿತಿಗತಿ, ವಿವರಗಳನ್ನು ಸರ್ಕಾರಕ್ಕೆ ತಿಳಿಸಿದ ಮೇಲೆ ಸರ್ಕಾರವೇ ನಿರ್ಧರಿಸಲು ಶಕ್ಯವಾಗುತ್ತದೆ.
- ಸ್ಥಳೀಯ ಸಾಹಿತ್ಯವನ್ನು ಪ್ರಕಟಿಸುವುದಕ್ಕೆ ಇನ್ನು ಮುಂದೆ ಸರ್ಕಾರದ ಹಣವನ್ನು ಬಳಸುವಂತಿಲ್ಲ.
- ಸರ್ಕಾರ ನಿಗದಿಗೊಳಿಸಿದ ಎಲ್ಲ ಹಣವನ್ನು ಇಂಗ್ಲಿಷ್ ಮಾಧ್ಯಮದ ಮೂಲಕ ಇಂಗ್ಲಿಷ್ ಸಾಹಿತ್ಯವನ್ನು ಸ್ಥಳೀಯರಿಗೆ ತಿಳಿಸಲು ಬಳಸುವುದು ಮತ್ತು ಇದನ್ನು ಜಾರಿ ಮಾಡಲು ಈ ಸಮಿತಿ ಒಂದು ಯೋಜನೆಯನ್ನು ಸರ್ಕಾರಕ್ಕೆ ಸಲ್ಲಿಸಬೇಕು.

ಈ ಆದೇಶದಲ್ಲಿ ಮೆಕಾಲೆಯ ಟಿಪ್ಪಣಿಯ ವಿಚಾರಗಳನ್ನೆ ಬೆಂಟಿಂಕ್ ಜಾರಿಗೊಳಿಸಿದ್ದಾನೆ. ಬೆಂಟಿಂಕ್ ಕೂಡ ಇಂಗ್ಲಿಷಿನ ಪರವಾಗಿದ್ದರಿಂದ ಅವನ ವರದಿಯನ್ನು ವಿರೋಧಿಸದೆ, ಮರು ಪ್ರಶ್ನಿಸದೆ ಒಪ್ಪಿ ಶೀಘ್ರವಾಗಿ ಈ ಆದೇಶವನ್ನು ಹೊರಡಿಸಿದನು ಈ ಹಿನ್ನೆಲೆಯಲ್ಲಿ ಭಾರತದ ಶಿಕ್ಷಣದಲ್ಲಿ ಇಂಗ್ಲಿಷ್ ತನ್ನ ಜಾಗವನ್ನು ಭದ್ರಗೊಳಿಸಿಕೊಳ್ಳಲು ಸಂಪೂರ್ಣವಾಗಿ ಮೆಕಾಲೆಯೆ ಕಾರಣ ಎನ್ನಲಾಗುತ್ತದೆ. ಆದರೆ ಈ

ಮೊದಲೇ ವಿವರಿಸಿರುವಂತೆ ಚಾರ್ಟರ್ ಕಾಯ್ದೆ ರೂಪುಗೊಳ್ಳುವ ಮುನ್ನವೇ ಕೆಲವು ದೇಶೀಯರು ಮಿಷನರಿಗಳೊಡನೆ ಶಾಲೆಗಳನ್ನು ತೆರೆದಿದ್ದರು. ಅನಂತರ ೧೮೧೭ರಲ್ಲಿ ಹಿಂದೂ ಕಾಲೇಜಿನ ಸ್ಥಾಪನೆಯ ಹಿಂದೆ ಹಲವು ಭಾರತೀಯರ ಅಪೇಕ್ಷೆಯೇ ಕೆಲಸ ಮಾಡಿತ್ತು. ಚಾರ್ಟರ್ ಕಾಯ್ದೆಯ ಅನಂತರ ೧೮೨೩ರಲ್ಲಿ ಭಾರತದ ಸುಧಾರಕರಲ್ಲಿ ಒಬ್ಬರಾದ ರಾಜಾ ರಾಮ್ ಮೋಹನರಾಯ್ ಅವರು ಕಲ್ಕತ್ತದಲ್ಲಿ ಸಂಸ್ಕೃತ ಕಾಲೇಜನ್ನು ಆರಂಭಿಸುವ ಸಂದರ್ಭದಲ್ಲಿ ಸರ್ಕಾರ ಇಂಗ್ಲಿಷ್ ಶಿಕ್ಷಣ ನೀಡಬೇಕೆಂದು ಸಾರ್ವಜನಿಕ ಶಿಕ್ಷಣ ಸಮಿತಿಗೆ ಪತ್ರ ಬರೆದಿದ್ದರು. ಸರ್ಕಾರ ಸ್ಥಳೀಯ ಶಿಕ್ಷಣದ ಅಭಿವೃದ್ಧಿಗಾಗಿ ಈ ಕಾಲೇಜನ್ನು ತೆರೆಯುತ್ತದೆ. ದೇಶೀಯರಿಗಾಗಿ ಮೀಸಲಿರಿಸಿರುವ ಹಣದಲ್ಲಿ ಗಣಿತ, ರಸಾಯನಶಾಸ್ತ್ರ, ಮಾನವಶಾಸ್ತ್ರ ಮುಂತಾದ ಯೂರೋಪಿಯನ್ ಶಿಕ್ಷಣವನ್ನು ನೀಡುವುದು ಸೂಕ್ತ ಎನ್ನುವ ನಿರ್ಧಾರಕ್ಕೆ ಬರಲಾಯಿತು.

'ಭಾರತದ ಹೊಸ ತಲೆಮಾರಿಗೆ ಆಧುನಿಕ ಯುರೋಪಿಯನ್ ಹಾಗೂ ಪಾಶ್ಚಾತ್ಯ ಜ್ಞಾನದ ಬಗ್ಗೆ ಅಭಿಲಾಷೆ ಮೂಡುತ್ತಿದೆ. ಆದರೆ ಸರ್ಕಾರ ಹಿಂದೂ ಪಂಡಿತರ ಮಾರ್ಗದರ್ಶನದಂತೆ ಈಗಾಗಲೇ ಎರಡು ಸಾವಿರ ವರ್ಷಗಳಿಂದ ಚಾಲ್ತಿಯಲ್ಲಿರುವ ಅದೇ ಸಂಸ್ಕೃತ ಶಿಕ್ಷಣ ನೀಡಲು ಹೊರಟಿರುವುದರಿಂದ ಯುವಕರಿಗೆ ವ್ಯಾಕರಣಬದ್ಧವಾಗಿ ಹಾಗೂ ಅಲಂಕಾರಿಕವಾಗಿ ಭಾಷೆ ಬಳಸುವುದಷ್ಟೆ ಬರುತ್ತದೆ. ಇದರಿಂದ ಯುವಕರ ಜ್ಞಾನ ಕೇವಲ ವ್ಯಾಕರಣದಿಂದಲೇ ತುಂಬಿಹೋಗುತ್ತದೆ ಹೊರತು ಬೇರೆ ಯಾವ ಅಭಿವೃದ್ಧಿಯು ಆಗುವುದಿಲ್ಲ. ಭಾರತವನ್ನು ಸಂಸ್ಕೃತ ಶಿಕ್ಷಣ ವ್ಯವಸ್ಥೆಯಲ್ಲಿ ಇರಿಸಿದರೆ ಕತ್ತಲಲ್ಲಿ ಇರಿಸಿದಂತೆಯೇ ಆಗುತ್ತದೆ. ಆದ್ದರಿಂದ ಯೂರೋಪಿನಲ್ಲಿ ಕಲಿತವರನ್ನು ನೇಮಿಸಿ ಇಲ್ಲಿಯೂ ಅದನ್ನು ಕಲಿಸುವಂತೆ ಅಗತ್ಯ ಪಠ್ಯ ಹಾಗೂ ಉಪಕರಣಗಳನ್ನು ಒದಗಿಸುವುದು ಅವಶ್ಯವಾಗಿದೆ' ಎಂಬುದು ಇವರ ಪತ್ರದ ವಿಚಾರವಾಗಿತ್ತು.

ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಜಾರಿಯಾದ ಚಾರಿತ್ರಕ ಸಂದಂರ್ಭದಲ್ಲಿ ರಾಜಾರಾಮ್ ಮೋಹನ್‌ರಾಯ್‌ರ ಈ ಮನವಿ ಮಹತ್ವದ್ದಾಗಿದೆ. ಹಿಂದೂ ಕಾಲೇಜಿನ ಸ್ಥಾಪನೆಯ ಪರ ಹಾಗೂ ಸಂಸ್ಕೃತ ಕಾಲೇಜಿನ ವಿರೋಧಗಳೆರೆಡು ಇಂಗ್ಲಿಷ್ ಶಿಕ್ಷಣವನ್ನು ಬಲವಾಗಿ ಪ್ರತಿಪಾದಿಸಿದ್ದವು. ಮೆಕಾಲೆ ಭಾರತಕ್ಕೆ ಬರುವ ಮುನ್ನವೇ ಇಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ದೇಶೀಯರಿಂದ ಬೇಡಿಕೆ ಸಲ್ಲಿಸಲಾಗಿತ್ತು. ಗವರ್ನರ್ ಜನರಲ್ ಆಗಿದ್ದ ಲಾರ್ಡ್ ವಿಲಿಯಂ ಬೆಂಟಿಂಕನಿಗೂ ಇಂಗ್ಲಿಷ್ ಶಿಕ್ಷಣದ ಬಗ್ಗೆ ಒಲವಿತ್ತು. ಈ ಹಿನ್ನೆಲೆಯಲ್ಲಿ ಮೆಕಾಲೆಯ ಶಿಕ್ಷಣ ನೀತಿ ಕೆಲವು ಭಾರತೀಯರ ಹಾಗೂ ಬೆಂಟಿಂಕನ ಆಸೆಗೆ ಅಧಿಕೃತ ರೂಪ ನೀಡಿತ್ತು.

ಈ ನೀತಿಯ ಪರಿಣಾಮವಾಗಿ ಬಂಗಾಳ ಸೇರಿದಂತೆ ಹಲವು ಪ್ರಾಂತಗಳ ಶಿಕ್ಷಣದಲ್ಲಿ ಇಂಗ್ಲಿಷ್ ಬಳಕೆಯಾಗತೊಡಗಿತು. ಈ ಹಿಂದೆ ಆರಂಭವಾಗಿದ್ದ ದೇಶೀಯ

ವಿದ್ವಾಂಸರು ಮತ್ತು ಪಾಶ್ಚಾತ್ಯ ಶಿಕ್ಷಣ ಬೆಂಬಲಿಸುವವರ ನಡುವಿನ ವಿವಾದಗಳು ಬಗೆಹರಿದಿರಲಿಲ್ಲ. ವಿವಾದಕ್ಕೆ ನಿಲುಗಡೆ ದೊರಕಿದ್ದು ೧೮೩೯ರಲ್ಲಿ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಆಕ್ಲೆಂಡ್‌ನ ಪರಿಪತ್ರದಿಂದ. ಆ ವೇಳೆಗೆ ದೇಶೀಯ ಶಿಕ್ಷಣ ನೀಡಬೇಕೆನ್ನುತ್ತಿದ್ದ ವಿದ್ವಾಂಸರು ಇಂಗ್ಲಿಷನ್ನು ವಿರೋಧಿಸುವುದರ ಬದಲಿಗೆ ದೇಶೀಯ ಶಿಕ್ಷಣ ಸಂಸ್ಥೆಗಳಿಗೆ ಹಾಗೂ ಭಾಷೆಗಳಿಗೆ ಸೂಕ್ತ ಮನ್ನಣೆ ನೀಡಬೇಕೆಂದು ಬೇಡಿಕೆ ಇಟ್ಟಿದ್ದರು. ಆ ವಿವಾದದ ವಿವರಗಳನ್ನು ಕೂಲಂಕಷವಾಗಿ ತಿಳಿದ ಆಕ್ಲೆಂಡನು ಪೌರ್ವಾಸ್ತ್ಯ ಶಿಕ್ಷಣಕ್ಕೆ ಸಂಬಂಧಿಸಿದ ಶಿಕ್ಷಣ ಸಂಸ್ಥೆಗಳು ಮುಂದುವರಿಯುತ್ತವೆ ಹಾಗೂ ಪಾಂಡಿತ್ಯಪೂರ್ಣ ಪ್ರಾಧ್ಯಾಪಕರುಗಳಿಗೆ ಅನುದಾನ ನೀಡಲಾಗುತ್ತದೆ, ಈ ಶಿಕ್ಷಣಕ್ಕೆ ಸಂಬಂಧಿಸಿದ ಉಪಯುಕ್ತ ಪುಸ್ತಕಗಳ ಪ್ರಕಟಣೆಗೆ ಅನುದಾನವನ್ನು ನೀಡಲಾಗುತ್ತದೆ ಎಂದು ಆದೇಶವೊಂದನ್ನು ಹೊರಡಿಸಿದನು. ಇದರಿಂದ ದೇಶೀಯ ಪಂಡಿತರುಗಳಿಗೆ ಸಮಾಧಾನವಾಯಿತು. ಪಾಶ್ಚಾತ್ಯ ಶಿಕ್ಷಣ ಬೆಂಬಲಿಸುತ್ತಿದ್ದವರಿಗೂ ಮೆಚ್ಚುಗೆಯಾಗುವಂತೆ ಇಂಗ್ಲಿಷ್ ಶಿಕ್ಷಣಕ್ಕೂ ಮನ್ನಣೆ ನೀಡಿ ಒಂದು ಲಕ್ಷ ರೂಪಾಯಿಗಳನ್ನು ಮೀಸಲಿರಿಸಿದನು. ಯೂರೋಪಿಯನ್ ಶಿಕ್ಷಣದ ಹಂಬಲವಿರುವ ವಿದ್ಯಾರ್ಥಿಗಳಿಗೆ ಮತ್ತು ಸಮಾಜದ ಉನ್ನತ ವರ್ಗದವರಿಗೆ ಇಂಗ್ಲಿಷ್ ಶಿಕ್ಷಣ ನೀಡಬೇಕೆಂದು ತಿಳಿಸಿದನು. ಸಮಾಜದ ಇತರ ವರ್ಗದವರಿಗೆ ಈ ಶಿಕ್ಷಣ ಲಭಿಸುವುದೆಂಬುದು ಇವನ ಚಿಂತನೆಯಾಗಿತ್ತು.

೧೮೩೪-೩೮ರವರೆಗೆ ಭಾರತದಲ್ಲಿದ್ದ ಮೆಕಾಲೆ ಭಾರತ ಶಿಕ್ಷಣದ ಭವಿತವ್ಯವನ್ನು ತನ್ನ ಟಿಪ್ಪಣಿಯಲ್ಲಿ ರೂಪಿಸಿ ತನ್ನ ದೇಶಕ್ಕೆ ತೆರಳಿದ್ದ. ಅದಕ್ಕೆ ಅಂಗೀಕಾರ ನೀಡಿದ ಲಾರ್ಡ್ ವಿಲಿಯಂ ಬೆಂಟಿಂಕನು ತನ್ನ ಅಧಿಕಾರಾವಧಿಯನ್ನು ಮುಗಿಸಿದ್ದ. ಆದರೂ ಅವರು ರೂಪಿಸಿದ ಈ ನೀತಿ ಕಾಲದಿಂದ ಕಾಲಕ್ಕೆ ಬೇರೆ ಬೇರೆ ವ್ಯಕ್ತಿಗಳಿಂದ ಹಾಗೂ ನೀತಿಗಳಿಂದ ಬಲವಾಗುತ್ತಲೇ ಹೋಯಿತು. ಬ್ರಿಟಿಷ್ ಆಡಳಿತದಲ್ಲಿ ಅದನ್ನು ತೆಗೆದುಹಾಕುವ ಆಲೋಚನೆ ಯಾರಿಗೂ ಇರಲಿಲ್ಲ. ೧೮೪೪ರ ಅಕ್ಟೋಬರ್ ೧೦ರಂದು ಲಾರ್ಡ್ ಹಾರ್ಡಿಂಜನು ಹೊರಡಿಸಿದ ಆದೇಶದಲ್ಲಿ ಸಾರ್ವಜನಿಕ ಉದ್ಯೋಗಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಇಂಗ್ಲಿಷ್ ಶಿಕ್ಷಣ ಪಡೆದವರಿಗೆ ಹಾಗೂ ಕನಿಷ್ಠ ವಿದ್ಯಾರ್ಹತೆ ಪಡೆದವರಿಗೆ ಆದ್ಯತೆ ನೀಡಬೇಕು ಎಂಬ ನೀತಿಯನ್ನು ತಿಳಿಸಿದನು. ಅದಕ್ಕೆ ತಕ್ಕಂತೆ ಸಮಾಜದಲ್ಲಿ ಪ್ರತಿಷ್ಠೆಯ ಸಂಕೇತವಾಗಿದ್ದ, ಸರ್ಕಾರಿ ನೌಕರಿ ದೊರಕಲು ಕಾರಣವಾಗಿದ್ದ ಇಂಗ್ಲಿಷ್ ಶಿಕ್ಷಣದ ಬಗ್ಗೆ ಭಾರತೀಯರ ಅಪೇಕ್ಷೆಯೂ ಹೆಚ್ಚಾಗಿತ್ತು.

**೩.೪ ವಸಾಹತು ಶಿಕ್ಷಣದ ಜಾರಿ : ಉಂಟಾದ ಪರಿಣಾಮಗಳು**

ಬ್ರಿಟಿಷ್ ಶಿಕ್ಷಣ ಆರಂಭವಾದಾಗಲೇ ಭಾರತದ ಪಾರಂಪರಿಕ ಶಿಕ್ಷಣ ಪದ್ಧತಿಗಳು ತಮ್ಮ ಪ್ರಖರತೆಯನ್ನು ಕಳೆದುಕೊಂಡವು. ಸಾಂಪ್ರದಾಯಿಕ ಶಿಕ್ಷಣವನ್ನು ನಾವು ಕಳೆದುಕೊಂಡುಬಿಟ್ಟಿದ್ದೇವೆ. ಬ್ರಿಟಿಷರ ಈ ಆಧುನಿಕ ಶಿಕ್ಷಣ ಇಲ್ಲಿ ಆರಂಭವಾಗಲು ಆಕಾಲಕ್ಕೆ ಇದ್ದ ಕಾರಣಗಳು ಅಥವಾ ಉದ್ದೇಶಗಳನ್ನು ಹೀಗೆ ಗ್ರಹಿಸಬಹುದಾಗಿದೆ.

- ವಸಾಹತುಶಾಹಿಗಳ ಪ್ರಾಥಮಿಕ ಅವಶ್ಯಕತೆಗಳನ್ನು ಪೂರೈಸುವುದು.
- ಭಾರತೀಯರು ಬ್ರಿಟಿಷರನ್ನು ವಿದೇಶಿಯರೆಂದು ತಿಳಿಯದಂತೆ ಮಾಡುವುದು.
- ಇಂಗ್ಲಿಷ್ ಶಿಕ್ಷಣವನ್ನು ಜಾರಿಗೊಳಿಸಬೇಕೆಂದು ಒತ್ತಾಯಿಸುತಿದ್ದ ಭಾರತೀಯ ಉನ್ನತವರ್ಗದವರ ಆಶಯವನ್ನು ಈಡೇರಿಸುವುದು.
- ತಮ್ಮ ಆಡಳಿತಕ್ಕೆ ಬೇಕಾದ ಅಧಿಕಾರಿ ವರ್ಗವನ್ನು ರೂಪಿಸುವುದು.

> ಭಾರತದಲ್ಲಿ ಶಿಕ್ಷಣ ನೀತಿಯು ಹೇಗಿರಬೇಕೆಂದರೆ ನಮಗೂ ಮತ್ತು ನಾವು ಆಳುತ್ತಿರುವ ಮಿಲಿಯಾಂತರ ಪ್ರಜೆಗಳ ನಡುವೆ ಸಂಬಂಧವೇರ್ಪಡಿಸುವ, ಬಣ್ಣದಲ್ಲು, ರಕ್ತದಲ್ಲೂ ಭಾರತೀಯರೇ ಆಗಿದ್ದು, ನಡೆ–ನುಡಿಯಲ್ಲಿ ನಮ್ಮನ್ನು ಒಪ್ಪುವ ದೇಶೀಯರನ್ನು ಸೃಷ್ಟಿ ಮಾಡುವಂತಿರಬೇಕು[೪]

ಎನ್ನುವ ಮೆಕಾಲೆಯ ಮಾತಿನಿಂದ ಈ ಸಂಗತಿಗಳು ಮತ್ತಷ್ಟು ಮನವರಿಕೆಯಾಗುತ್ತವೆ. ಮೆಕಾಲೆ ಜಾರಿಗೆ ತಂದ ಶಿಕ್ಷಣ ನೀತಿಯ ಪರಿಣಾಮವಾಗಿ ಭಾರತದಲ್ಲಿ ಹಲವು ಸಂಚಲನಗಳಾದವು. ಭಾರತೀಯರಿಗೆ ರಾಜಕೀಯವಾಗಿ ಸ್ವಾತಂತ್ರ್ಯ ದೊರಕಲು, ಸಮಾಜಕ್ಕೆ ಪಿಡುಗುಗಳಾಗಿದ್ದ ಅನೇಕ ಸಮಸ್ಯೆಗಳು ಸುಧಾರಣೆಯಾಗಲು ಈ ಶಿಕ್ಷಣ ನೆರವಾಯಿತು. ಜೊತೆಗೆ ಇದು ಹೊಸ ವಿಚಾರಗಳನ್ನು 'ಒಳತಂದು' ಭಾರತೀಯ ಭಾಷೆಗಳ ಪುನರುಜ್ಜೀವನಕ್ಕೆ ಪ್ರೇರಣೆಯಾಯಿತು. ಸಮಾಜದ ಎಲ್ಲ ವರ್ಗದವರು ಶಿಕ್ಷಣ ಪಡೆಯುವಂತಾಯಿತು. ಈ ಎಲ್ಲ ಅನುಕೂಲಗಳಾಗಿಯೂ –

> ಬ್ರಿಟಿಷ್ ಶಿಕ್ಷಣವು ಸೃಜನಾತ್ಮಕ ಕ್ರಿಯೆಗಳನ್ನೆಲ್ಲ ಅಲ್ಲಗಳೆದು ಭಾರತೀಯರನ್ನು ನಿಷ್ಕ್ರಿಯರನ್ನಾಗಿ ಮಾಡುವ ಉದ್ದೇಶವನ್ನಿಟ್ಟುಕೊಂಡಿತ್ತು. ಅವರ ಶಿಕ್ಷಣವು ನಿಷೇಧಾತ್ಮಕ ಶಿಕ್ಷಣವಾಗಿತ್ತು. ಅವರ ಶಿಕ್ಷಣ ನೀತಿಯು ಭಾರತೀಯರ ಸಮೃದ್ಧಿಗಾಗಿ ಇರದೆ ಬ್ರಿಟಿಷರ ಸೇವೆಗಾಗಿ ಇತ್ತು[೫] ಎನ್ನುವ ವಾದವನ್ನು ಗಮನಿಸಬಹುದು.

ಈಸ್ಟ್ ಇಂಡಿಯಾ ಕಂಪನಿಯು ತಾನು ಆಳುತ್ತಿದ್ದ ಪ್ರಾಂತ್ಯಗಳಲ್ಲಿ ಶಿಕ್ಷಣದ ಹೊಣೆ ವಹಿಸಿಕೊಂಡಾಗಲೇ ಇದು ಆರಂಭವಾಯಿತು. ಆರಂಭದಲ್ಲಿ ಪುರಾತನ ಭಾಷೆಗಳಾದ ಸಂಸ್ಕೃತ, ಅರೇಬಿಕ್ ಮತ್ತು ಇಂಗ್ಲಿಷ್ ಭಾಷೆಗಳ ನಡುವೆ ಶಿಕ್ಷಣದಲ್ಲಿ ಯಾವ ಭಾಷೆಗೆ ಮಾನ್ಯತೆ ನೀಡಬೇಕೆಂಬುದರ ಬಗ್ಗೆ ಚರ್ಚೆ ನಡೆಯಿತು. ಇದರಿಂದ ಪೌರ್ವಾತ್ಯ, ಪಾಶ್ಚಾತ್ಯ ತಿಕ್ಕಾಟ ರಭಸವಾಯಿತು. ಆದರೆ, ೧೮೩೫ರ ಮೆಕಾಲೆಯ ಪ್ರಸಿದ್ಧ ವರದಿಯು ದೇಶದಲ್ಲಿ ಇಂಗ್ಲಿಷ್ ಶಿಕ್ಷಣದ ಪ್ರಗತಿಯನ್ನು ಪ್ರೋತ್ಸಾಹಿಸಿ ಈ ತಿಕ್ಕಾಟಕ್ಕೆ ಮಂಗಳ ಹಾಡಿತು ಎಂಬ ಮಾತನ್ನು ಗಮನಿಸಿದರೆ ಶಿಕ್ಷಣ ಮಾಧ್ಯಮವಾಗಿ ಇಂಗ್ಲಿಷ್ ಪ್ರಬಲವಾಗಲು ಈ ನೆಲದಲ್ಲಿ ಹಲವು ಕೊರತೆಗಳಿದ್ದದ್ದೂ ಕಾರಣವಾಯಿತು ಎನ್ನಬಹುದು.

- ಹೊಸ ಶಿಕ್ಷಣಕ್ಕನುಸಾರವಾಗಿ ಭಾರತೀಯ ಭಾಷೆಗಳಲ್ಲಿ ಸರಿಯಾದ ಪಠ್ಯಪುಸ್ತಕಗಳಿಲ್ಲದಿದ್ದದ್ದು.
- ಸರ್ಕಾರಿ ನೌಕರಿ ಸಿಗಬೇಕಾದರೆ ಇಂಗ್ಲಿಷ್ ಕಡ್ಡಾಯವಾದದ್ದು.
- ಶಾಲೆಗಳಲ್ಲಿ ದೇಶಭಾಷಾ ಶಿಕ್ಷಕರಿಗೆ ಕಡಿಮೆ ಸಂಬಳ ಹಾಗೂ ಕಡಿಮೆ ಗೌರವವಿದ್ದದ್ದು.

ಇಂತಹ ಕಾರಣಗಳಿಂದ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಆಳವಾಗಿ ಬೇರೂರಿತು. ಪರಿಣಾಮವಾಗಿ ಭಾರತೀಯರ ಇಡೀ ಬದುಕು ಇಂಗ್ಲಿಷ್ ಕಲಿಯುವುದರಲ್ಲಿ ವ್ಯರ್ಥವಾಗುವಂತಾಯಿತು.

> ಶಾಲಾ ಕಾಲೇಜುಗಳಲ್ಲಿ ಇಂಗ್ಲಿಷ್ ವಿಷವನ್ನೆ ಬಿತ್ತುವಂಥ ವಿಷಯವಾಗಿದೆ; ರಾಷ್ಟ್ರಕ್ಕೆ ಹೇಳಲಿಕ್ಕಾಗದಷ್ಟು ಹಾನಿಯನ್ನುಂಟು ಮಾಡಿದೆ. ನಮ್ಮ ಸುಮಾರು ಶೇಕಡಾ ಎಪ್ಪತ್ತು ಎಂಬತ್ತರಷ್ಟು ಮಕ್ಕಳು ಸಾಮಾನ್ಯ ಬುದ್ಧಿಮತ್ತೆಯುಳ್ಳವರು. ಅಂಥವರು ಇಂಗ್ಲಿಷ್ ಭಾಷೆಯನ್ನು ಕಲಿತುಕೊಳ್ಳುವ ಪ್ರಯಾಸದಲ್ಲಿ ಬಳಲಿ ಹೋಗುತ್ತಾರೆ ; ಭೂಗೋಲ, ಚರಿತ್ರೆ, ವಿಜ್ಞಾನ ಇನ್ನಿತರ ವಿಷಯಗಳಲ್ಲಿ ತಕ್ಕಮಟ್ಟಿನ ಜ್ಞಾನವನ್ನು ಗಳಿಸಲಿಕ್ಕು ಶಕ್ತರಾಗದೆ ಹೋಗುತ್ತಾರೆ[೬]

ಎಂಬ ಅಭಿಪ್ರಾಯ ಇದರಿಂದ ವ್ಯಕ್ತವಾಯಿತು. ಇಂಗ್ಲಿಷ್ ಬಾರದವರು ಯಾವುದೇ ಕೆಲಸಕ್ಕೂ ಅನರ್ಹರು ಎಂಬ ಕೀಳರಿಮೆ ಸೃಷ್ಟಿಸಿ ಭಾರತವನ್ನು ಅಸಮಾನತೆಯ ರಾಷ್ಟ್ರವನ್ನಾಗಿಸಿತು ಈ ಶಿಕ್ಷಣ. ಈ ನಿಟ್ಟಿನಲ್ಲಿ

> ನಮ್ಮಿಂದ ಶಿಕ್ಷಣ ಪಡೆದಿರುವವರಲ್ಲಿ ಬಹುಮಂದಿ ಆ ಶಿಕ್ಷಣದ ಫಲವಾಗಿ ತಮ್ಮ ಜನತೆಯಿಂದ ದೂರವಾಗಿ, ಪರಕೀಯವಾಗಿ ನಿಂತಿದ್ದಾರೆ – ನಮ್ಮಂತೆಯೇ[೭]

ಎಂಬ ಬ್ರಿಟಿಷ್ ಗೌರ್ನರ್ ಡೊನಾಲ್ಡ್ ಮೆಕ್ಲಿಯಾರ್ಡ್‌ನ ಮಾತು ಗಮನಾರ್ಹ ಎನಿಸುತ್ತದೆ. ಬ್ರಿಟಿಷರು ರೂಪಿಸಿದ ಶಿಕ್ಷಣ ಕ್ರಮದಿಂದಾಗಿ ಭಾರತೀಯರು ಬೌದ್ಧಿಕವಾಗಿಯೂ ಅವರ ಗುಲಾಮಗಿರಿಗೆ ಒಳಗಾಗಬೇಕಾಯಿತು. ಭಾರತೀಯ ಭಾಷೆಗಳು ಸಮೃದ್ಧಿ ಹೊಂದದೆ, ಆಡಳಿತ ಭಾಷೆ ಹಾಗೂ ಶಿಕ್ಷಣ ಮಾಧ್ಯಮವಾಗುವಲ್ಲಿ ಹಿನ್ನಡೆಯನುಭವಿಸಿದವು. ಹೀಗಾಗಿ, ಭಾರತದಲ್ಲಿ ಇಂಗ್ಲಿಷ್ 'ಪಾಳೆಗಾರಿಕೆ' ಭಾಷೆಯಂತಾಗಿ, ತನ್ನ 'ಉಡಹಿಡಿತ'ದಿಂದ ಭಾಷಾ ಸಮಸ್ಯೆಯನ್ನು ಸೃಷ್ಟಿಮಾಡಿತು. ಈ ಸಮಸ್ಯೆ ಇಂದಿಗೆ ಮೂರು ರೀತಿಗಳಲ್ಲಿ ಹರಡಿಕೊಂಡಿದೆ.

- ಭಾರತದ ಶಿಕ್ಷಣದಲ್ಲಿ ಪ್ರಾದೇಶಿಕ ಮತ್ತು ಮಾತೃಭಾಷೆಯ ಸ್ಥಾನ ಯಾವುದು
- ಭಾರತದಲ್ಲಿ ಇಂಗ್ಲಿಷಿನ ಸ್ಥಾನ ಯಾವುದಾಗಿರಬೇಕು
- ಸಂಪರ್ಕ ಭಾಷೆಯಾಗಿ ಯಾವ ಭಾಷೆ ಆಯ್ಕೆಯಾಗಬೇಕು.

ಮೊದಲ ಎರಡು ಸಮಸ್ಯೆಗಳನ್ನು ಬಗೆಹರಿಸಲು ಆರಂಭದಿಂದಲೂ ಹಲವಾರು ಮಂದಿ ಪ್ರಯತ್ನಿಸಿದ್ದಾರೆ. ವಿಶೇಷವೆಂದರೆ, ಕೆಲವು ಬ್ರಿಟಿಷ್ ಅಧಿಕಾರಿಗಳೇ ಈ ಹೋರಾಟವನ್ನು ಆರಂಭಿಸಿದರು. ಸಿಪಾಯಿದಂಗೆಯ ಅನಂತರ ಕೆಲವು ಬ್ರಿಟಿಷ್ ಅಧಿಕಾರಿಗಳು ಹಾಗೂ ಶಿಕ್ಷಣ ತಜ್ಞರಿಂದ ಇಂಗ್ಲಿಷ್ ಶಿಕ್ಷಣ ಮಾಧ್ಯಮದ ವಿರುದ್ಧ ಪ್ರತಿಭಟನೆಗಳು ಆರಂಭವಾದವು. ಈ ನಿಟ್ಟಿನಲ್ಲಿ ಪಂಜಾಬ್ ಮತ್ತು ವಾಯುವ್ಯ ಪ್ರಾಂತ್ಯದ ಬ್ರಿಟಿಷ್ ಅಧಿಕಾರಿಗಳು ಪ್ರಾದೇಶಿಕ ಭಾಷೆಗಳ ಬೆಳವಣಿಗೆಗೆ ಹಾಗೂ ವಿದ್ಯಾರ್ಥಿಗಳಿಗೆ ಬೇಕಾಗಿದ್ದ ಮಾತೃಭಾಷಾ ಶಿಕ್ಷಣದ ಬಗ್ಗೆ ಚಿಂತನೆ ನಡೆಸಿ ಹೋರಾಡಿದ್ದಾರೆ. ಇದರ ಮೊದಲ ಹಂತವಾಗಿ ೧೮೬೭ರ ಆಗಸ್ಟ್ ೧ ರಂದು 'ಬ್ರಿಟಿಷ್ ಇಂಡಿಯನ್' ಸಂಘವು ಈ ಕುರಿತು ವೈಸರಾಯ್‌ಗೆ ಪ್ರಾರ್ಥನಾ ಪತ್ರ ಕಳುಹಿಸಿತು. ಮುಂದೆ ಇದೇ ರೀತಿಯ ಪ್ರಯತ್ನ ಮಾಡಿದ್ದು 'ಔರದ್'ನ ಶಿಕ್ಷಣ ಶಾಖೆಯ ಮುಖ್ಯಾಧಿಕಾರಿಯಾಗಿದ್ದ 'ಹ್ಯಾಂಡ್‌ಪೋರ್ಡ್'ನು–

> ನಮ್ಮ ವಿದ್ಯಾರ್ಥಿಗಳಿಗೆ ಧಾರಾಳವಾಗಿ ಇಂಗ್ಲಿಷನ್ನು ಕಲಿಸಿ ಅವರಿಗೆ ಪ್ರಗತಿಪರವಾದ ಆಧುನಿಕ ವಿಚಾರಗಳ ಸಂಪರ್ಕವನ್ನುಂಟುಮಾಡಿ. ಆದರೆ, ಅವರು ಪ್ರಾದೇಶಿಕ ಭಾಷೆಯಲ್ಲಿ ಸ್ವತಂತ್ರವಾಗಿ ಬರೆಯಲು ಸಾಧ್ಯವಾಗುವಂತೆ ನೋಡಿಕೊಳ್ಳಬೇಕು[೮] ಎಂದು ಪ್ರತಿಪಾದಿಸುತ್ತಾನೆ.

ಮತ್ತೊಬ್ಬ ಶಿಕ್ಷಣಾಧಿಕಾರಿ 'ಡಬ್ಲ್ಯೂ ಆರ್ ಎಂ ಹಾಲ್‌ರಾಯ್ಡ್' ಎಂಬಾತ ಇಂಗ್ಲಿಷ್ ಮಾಧ್ಯಮದ ಶಿಕ್ಷಣದ ಫಲ ಅನಿರ್ದಿಷ್ಟ ಹಾಗೂ ಅಸ್ಪಷ್ಟವಾದ ವಿದ್ಯಾಭ್ಯಾಸವಾಗುತ್ತದೆ ಎಂದಿದ್ದಾನೆ. ಈ ರೀತಿಯ ಪ್ರಯತ್ನಗಳ ಹಿನ್ನಲೆಯಾಗಿ ೧೮೫೩ರಲ್ಲಿ 'ರೆವೆರೆಂಡ್ ಒ ಅಲೆನ್' ಹೇಳಿರುವ

> ಭಾರತದ ಅಥವಾ ದಕ್ಷಿಣ ಏಷ್ಯಾದ ಯಾವುದೇ ಭಾಗದಲ್ಲಿ ಇಂಗ್ಲಿಷು ಮಾತೃಭಾಷೆಗಳ ಸ್ಥಾನವನ್ನು ಆಕ್ರಮಿಸುವ ಅಥವಾ ಯಾವುದೇ ದೊಡ್ಡ ಸಮಾಜದಲ್ಲಿ ತಾನೇ ಮಾತೃಭಾಷೆಯಾಗುವ ಸಂಭವವಿಲ್ಲ[೯]

ಎಂಬ ಮಾತನ್ನು ಪರಿಗಣಿಸಬೇಕಾಗಿದೆ. ಇಂತಹ ಜಾಗೃತಿ ಬ್ರಿಟಿಷ್ ಅಧಿಕಾರಿಗಳೊಟ್ಟಿಗೆ ಹಲವು ಭಾರತೀಯರಿಂದಲೂ ಮೂಡಿತು.

> ಪರದೇಶದ ಭಾಷೆಯಿಂದ ನಾವು ಸಂಗ್ರಹಿಸಬಹುದಾದದ್ದು ಬತ್ತಿಯ ದೀಪ ಮಾತ್ರ; ಸ್ವಪ್ರಕಾಶನಕ್ಕೆ ಬೇಕಾದ ಹಗಲ ಬೆಳಕು ಬರಬೇಕಾದುದು ಸ್ವಭಾಷೆಯಿಂದಲೇ[೧೦]

ಎಂಬುದನ್ನು ಮನಗಂಡು ತಮ್ಮದೇ ಶಿಕ್ಷಣ ನೀತಿಯನ್ನು ಪ್ರಾಯೋಗಿಕವಾಗಿ ಅಳವಡಿಸಿದವರು ವಿಶ್ವಕವಿ 'ರವೀಂದ್ರನಾಥ ಠಾಕೂರ'ರು. ವಿದ್ಯಾರ್ಥಿಗಳ ವಿದ್ಯೆಗು, ಬದುಕಿಗು ಸಂಬಂಧವೇ ಇರದುದನ್ನು ಗುರುತಿಸಿದ ಇವರು 'ಶಾಂತಿನಿಕೇತನ', 'ವಿಶ್ವಭಾರತಿ' ಶಿಕ್ಷಣ ಸಂಸ್ಥೆಗಳ ಮುಖೇನ ನಮಗೆ ಬೇಕಾದ ಶಿಕ್ಷಣವನ್ನು ಪ್ರಸಾರ

ಮಾಡಿದರು. ಅಂತೆಯೇ 'ಮಹಾತ್ಮ ಗಾಂಧೀಜಿ'ಯವರು ಈ ಶಿಕ್ಷಣ ಕುರಿತು ತಮ್ಮ ನಿಲುವುಗಳನ್ನು ಈ ರೀತಿ ಸ್ಪಷ್ಟಪಡಿಸುತ್ತಾರೆ – ಇಂಗ್ಲಿಷ್, ವಿದ್ಯಾರ್ಥಿಗೆ ಹೊರೆಯಾಗಿ, ಆತ ರಾಶಿಪುಸ್ತಕಗಳ ನಡುವೆ ಉಸಿರುಕಟ್ಟಿದ್ದಾನೆ. ಇದರಿಂದ ಸಂಪೂರ್ಣವಾಗಿ ಅವನ ಸ್ವಸಾಮರ್ಥ್ಯ ಕುಂದುತ್ತದೆ. ದೇಶಭಾಷೆಗಳನ್ನು ಅಭಿವೃದ್ಧಿಪಡಿಸಿ, ಅವುಗಳಲ್ಲಿ ಪಠ್ಯ ಪುಸ್ತಕಗಳನ್ನು ಸಿದ್ಧಪಡಿಸಿ ಮಾತೃಭಾಷೆಯಲ್ಲಿ ಶಿಕ್ಷಣ ನೀಡಬೇಕು. ಇದಕ್ಕೆ ಇಚ್ಛಾಶಕ್ತಿಯೊಂದೇ ಮದ್ದು ಎಂದು ಭಾವಿಸುತ್ತಾರೆ. ಈ ನಿಟ್ಟಿನಲ್ಲಿ ಇವರ

> ನಾನು ಸರ್ವಾಧಿಕಾರಿಯಾಗಿದ್ದಿದ್ದರೆ ಈ ಕೂಡಲೆ ನಮ್ಮ ಹುಡುಗರಿಗೆ ಅವರವರ ಮಾತೃಭಾಷೆಯ ಮೂಲಕ ಶಿಕ್ಷಣ ಕೊಡಬೇಕೆಂದು ಆಜ್ಞಾಪಿಸುತ್ತಿದ್ದೆ. ನಾನು ಪಠ್ಯಪುಸ್ತಕಗಳಿಗಾಗಿಯೂ ಕಾಯುವವನಲ್ಲ. ಪರಿವರ್ತನೆಯಾದರೆ ಅವು ತಾವಾಗಿಯೆ ಬರುತ್ತವೆ[೧೧] ಎಂಬ ಮಾತು ಈ ಸಮಸ್ಯೆಯ ತೀವ್ರತೆಯನ್ನು ಬಿಂಬಿಸುತ್ತದೆ. 

ಠಾಕೂರರಂತೆಯೇ ಗಾಂಧೀಜಿಯವರು ತಮ್ಮ ಶಿಕ್ಷಣ ಚಿಂತನೆಗಳಿಗನುಸಾರವಾಗಿ 'ಮೂಲ ಶಿಕ್ಷಣ' (೧೯೦೪) ಯೋಜನೆಯನ್ನು ಜಾರಿಗೆ ತಂದರು. ಈ ಶಿಕ್ಷಣದ ಪ್ರಮುಖ ತತ್ವಗಳಲ್ಲಿ ಮಾತೃಭಾಷಾ ಶಿಕ್ಷಣವು ಒಂದಾಗಿತ್ತು.

ಮಹರ್ಷಿಗಳಾದ ಅರವಿಂದರು ಬ್ರಿಟಿಷ್ ಶಿಕ್ಷಣ ಪದ್ಧತಿಯನ್ನು ಟೀಕಿಸುತ್ತಾ ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನೇ ಮುಂದುವರಿಸುತ್ತಿರುವ ಭಾರತಕ್ಕೆ 'ಶೈಕ್ಷಣಿಕವಾದ ಸ್ವಂತಿಕೆ' ಬೇಕು ಎಂದಿದ್ದಾರೆ. ಸ್ವತಃ ಬ್ರಿಟಿಷ್ ಶಿಕ್ಷಣ ಪದ್ಧತಿಯ ವಿದ್ಯಾಭ್ಯಾಸವನ್ನು ಪಡೆದ ಕುವೆಂಪು ಅವರು ಇದರ ಲಾಭ ನಷ್ಟಗಳನ್ನು ಕುರಿತು ಚಿಂತಿಸಿದ್ದಾರೆ. ಈ ಪದ್ಧತಿ ಶಿಕ್ಷಣದ ಗುಣಮಟ್ಟವನ್ನು ಕಡಿಮೆಗೊಳಿಸಿ, ಹಣವೇ ಪದವಿಗಳನ್ನು ನಿರ್ಧರಿಸುವ ಹಂತಕ್ಕೆ ತಲುಪಿದ್ದನ್ನು ಖಂಡಿಸುತ್ತಾ, ನಾವಿನ್ನೂ ಮಾನಸಿಕ ದಾಸ್ಯದಲ್ಲಿ ತೊಳಲಾಡುತ್ತಿದ್ದೇವೆ ಎನ್ನುತ್ತಾರೆ.

**೩.೫ ರಾಷ್ಟ್ರೀಯ ಚಿಂತಕರ ಪ್ರತಿಕ್ರಿಯೆಗಳು**

ಶಿಕ್ಷಣದ ಆಶಯಗಳೇ ಪಲ್ಲಟಗೊಂಡಿರುವ ಸಂದಿಗ್ಧ ಸ್ಥಿತಿಯಲ್ಲಿ ಒಳ್ಳೆಯ ಶಿಕ್ಷಣ ನೀತಿಯನ್ನು ರೂಪಿಸುವುದು ಸರ್ಕಾರದ ಕರ್ತವ್ಯವಾಗಬೇಕು. ಇದಕ್ಕೆ ತೀವ್ರವಾಗಿ ಒತ್ತಡವನ್ನೇರುವುದು ಸಮಾಜದ ಜವಾಬ್ದಾರಿ. ಈ ದೇಶದ ದಾರ್ಶನಿಕರ, ಚಿಂತಕರ, ಶಿಕ್ಷಣ ತಜ್ಞರ, ಸಾಹಿತಿಗಳ, ಸಮಾಜ ವಿಜ್ಞಾನಿಗಳ ಆಶಯದಂತೆ ಮಾತೃಭಾಷಾ ಮಾಧ್ಯಮದಲ್ಲಿಯೇ ಶಿಕ್ಷಣ ನೀಡುವುದು ಈ ಬಗೆಯ ಸಮಸ್ಯೆಗಳಿಗೆ ಪರಿಹಾರ ಆಗಬಹುದಾಗಿದೆ.

ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಸುಧಾರಣೆಗೆ ಶ್ರಮಿಸಿದ ಭಾರತೀಯ ಸುಧಾರಕರು ಶಿಕ್ಷಣ ಕುರಿತು ನಡೆಸಿರುವ ಚಿಂತನೆಗಳು ಹಾಗೂ ಅದರಿಂದ

ಉಂಟಾದ ಪ್ರತಿಕ್ರಿಯೆಗಳನ್ನು ಶೋಧಿಸುವ ಪ್ರಯತ್ನ ನಡೆಸಲಾಗಿದೆ. ರಾಜಾರಾಮ ಮೋಹನರಾಯ, ರವೀಂದ್ರನಾಥ ಠಾಕೂರ್, ಸ್ವಾಮಿ ವಿವೇಕಾನಂದ, ಮಹಾತ್ಮ ಗಾಂಧೀಜಿ ಶ್ರೀಅರವಿಂದರು, ರಾಮ ಮನೋಹರ ಲೋಹಿಯಾ ಈ ಮುಂತಾದ ರಾಷ್ಟ್ರೀಯ ಚಿಂತಕರ ಶಿಕ್ಷಣ ಚಿಂತನೆಗಳನ್ನು ಗ್ರಹಿಸಿ ವಸಾಹತು ಶಿಕ್ಷಣವನ್ನು ಕುರಿತಂತೆ ಅವರುಗಳ ನಿಲುವುಗಳೇನೆಂಬುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ

**ರಾಜಾರಾಮ್ ಮೋಹನರಾಯ್ (೧೭೭೨-೧೮೩೩)**

೧೭೭೭ರಲ್ಲಿ ಬಂಗಾಳದ ಬರ್ದವಾನ್ ಜಿಲ್ಲೆಯ ರಾಧಾನಗರದಲ್ಲಿನ ಶ್ರೀಮಂತ ಬ್ರಾಹ್ಮಣ ಕುಟುಂಬದಲ್ಲಿ ರಾಜಾರಾಮ್ ಮೋಹನರಾಯರು ಜನಿಸಿದರು. ಪಾಟ್ನಾದಲ್ಲಿ ಪರ್ಷಿಯನ್ ಮತ್ತು ಅರೇಬಿಕ್ ಭಾಷೆಗಳನ್ನು ಅಧ್ಯಯನ ಮಾಡಿದರು. ಇಸ್ಲಾಂ ಧರ್ಮದಿಂದ ಪ್ರಭಾವಿತರಾದ ರಾಜಾರಾಮ್ ಮೋಹನರಾಯರು ಹದಿನಾರನೇ ವಯಸ್ಸಿನಲ್ಲೇ ವಿಗ್ರಹರಾಧನೆಯನ್ನು ವಿರೋಧಿಸಿ ಪ್ರಬಂಧ ಬರೆದು ತಂದೆಯ ಕೋಪಕ್ಕೆ ಗುರಿಯಾದರು. ಈ ಕಾರಣದಿಂದಾಗಿ ಅವರು ಮನೆಯಿಂದ ಹೊರಬರಬೇಕಾಯಿತು. ಮನೆಯಿಂದ ಹೊರಬಂದ ರಾಜಾರಾಮ್ ಮೋಹನರಾಯರು ಕಾಶಿಯಲ್ಲಿ ಉಳಿದುಕೊಂಡು ಸಂಸ್ಕೃತ ಭಾಷೆ ಮತ್ತು ಹಿಂದೂ ಧರ್ಮದ ತತ್ವಗಳನ್ನು ಅಧ್ಯಯನ ಮಾಡಿದರು. ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಯಾಗಿದ್ದ ಜಾನಿಡಿಗ್ಬಿ (೧೮೦೫-೧೮೧೪) ಅವರಿಂದ ಇಂಗ್ಲಿಷ್ ಕಲಿತರು. ೧೮೧೪ರಲ್ಲಿ ಕಲ್ಕತ್ತಾದಲ್ಲಿ ನೆಲೆಸಿದರು. 'ಸಂವಾದ ಕೌಮುದಿ' ವಾರಪತ್ರಿಕೆಯನ್ನು ನಡೆಸಿದರು. ೧೮೩೦ರಲ್ಲಿ ಬ್ರಾಹ್ಮಸಮಾಜವನ್ನು ಸ್ಥಾಪಿಸಿದರು. ಪತ್ರಿಕಾ ಸ್ವಾತಂತ್ರ್ಯ, ಇಂಗ್ಲಿಷ್ ಶಿಕ್ಷಣದ ಜಾರಿ, ಹಿಂದೂ ಸಮಾಜದ ಮೂಢನಂಬಿಕೆಗಳ ನಿರ್ಮೂಲನೆ ಈ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

೧೯ನೇ ಶತಮಾನದ ಆರಂಭದಲ್ಲಿ ಭಾರತೀಯ ಸಮಾಜದಲ್ಲಿ ರೂಢಿಯಲ್ಲಿದ್ದ ಹಲವು ಬಗೆಯ ಕಂದಾಚಾರಗಳ ನಿರ್ಮೂಲನೆಗೆ ಹೋರಾಡಿ, 'ನವಭಾರತದ ಪಿತ' ಎನಿಸಿಕೊಂಡರು. ತಮ್ಮ ಕಾಲಕ್ಕೆ ಹಿಂದೂಗಳು ರೂಢಿಸಿಕೊಂಡು ಬರುತ್ತಿದ್ದ ಕೆಲ ಧಾರ್ಮಿಕ ನಂಬಿಕೆ ಹಾಗೂ ಸಾಮಾಜಿಕ ಪದ್ಧತಿಗಳಿಗೆ ಚಿಕಿತ್ಸಾತ್ಮಕ ಪರಿಹಾರಗಳನ್ನು ರೂಪಿಸಿದರು. ಆ ಮೂಲಕ ಭಾರತೀಯರಿಗೆ ತಮ್ಮ ಧರ್ಮ ಮತ್ತು ಸಮಾಜವನ್ನು ಕುರಿತಂತೆ ವೈಚಾರಿಕತೆ ಬೆಳೆಯಲು ಕಾರಣರಾದರು. ಮಾನವನ ಅಭಿವೃದ್ಧಿಗೆ ವಿದ್ಯಾಭ್ಯಾಸ ಅತ್ಯಗತ್ಯ ಅದಕ್ಕಾಗಿ ಬಾಲಕ ಬಾಲಕಿಯರನ್ನು ವಿದ್ಯಾವಂತರನ್ನಾಗಿ ಮಾಡಬೇಕು. ಬಡ ವಿದ್ಯಾರ್ಥಿಗಳಿಗೆ ಉಚಿತವಾಗಿ ವಿದ್ಯೆ ಕಲಿಸುವುದು ಸರ್ಕಾರದ ಆದ್ಯ ಕರ್ತವ್ಯವಾಗಬೇಕೆಂದು ರಾಜರಾಮ ಮೋಹನರಾಯರು ಬಯಸಿದ್ದರು. ಇಂಗ್ಲಿಷ್ ಭಾಷೆಯನ್ನು ಅಧ್ಯಯನ ಮಾಡಿ ಅದರ ಪ್ರಯೋಜನವನ್ನು ಉಪಯೋಗಿಸಿಕೊಂಡರೆ ಭವಿಷ್ಯದಲ್ಲಿ ಭಾರತಕ್ಕೆ ಬಹುದೊಡ್ಡ ಪ್ರಯೋಜನವಾಗುತ್ತದೆ ಎನ್ನುವ ಭರವಸೆಯನ್ನು

ಅವರು ಹೊಂದಿದ್ದರು. ಅದಕ್ಕಾಗಿ ಅವರು ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಜಾರಿಯಾಗಲು ಅವಿರತವಾಗಿ ಶ್ರಮಿಸಿದರು.

**೧೮೧೩ರ ಚಾರ್ಟರ್ ಸನ್ನದು ಪತ್ರಕ್ಕೆ ರಾಜರಾಮ್ ಮೋಹನ್‌ರಾಯರ ಪ್ರತಿಕ್ರಿಯೆ**

ಬ್ರಿಟಿಷ್ ಸರ್ಕಾರವು ಈಸ್ಟ್ ಇಂಡಿಯಾ ಕಂಪನಿಗೆ ವ್ಯಾಪಾರದ ಹಕ್ಕನ್ನು ಮುಂದುವರೆಸಲು ೧೮೧೩ರಲ್ಲಿ ನೀಡಿದ ಸನ್ನದು ಪತ್ರವೇ ಚಾರ್ಟರ್ ಕಾಯ್ದೆ. ಈ ಕಾಯ್ದೆಯಲ್ಲಿ ವ್ಯಾಪಾರದ ಹಕ್ಕು ಹಾಗೂ ಕಂಪನಿ ನಿರ್ವಹಿಸಬೇಕಾದ ಕರ್ತವ್ಯಗಳನ್ನು ವಿವರಿಸಲಾಗಿತ್ತು. ಬ್ರಿಟಿಷ್ ಆಡಳಿತಕ್ಕೆ ಒಳಗಾಗಿರುವ ಜನರ ಸಂತೋಷ ಮತ್ತು ಅವರ ಆಸಕ್ತಿಗಳನ್ನು ಹೆಚ್ಚು ಮಾಡುವುದು. ಅವರ ನಡುವೆ ಉಪಯುಕ್ತ ಜ್ಞಾನ ಹಾಗೂ ನೈತಿಕ ಬೆಳವಣಿಗೆಯನ್ನು ಬೆಳೆಸುವುದು. ಈ ಕಾರ್ಯಗಳಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸಬೇಕೆಂದು ವಿವರಿಸಲಾಗಿತ್ತು.

ಚಾರ್ಟರ್ ಕಾಯ್ದೆಯನ್ವಯ ಈಸ್ಟ್ ಇಂಡಿಯಾ ಕಂಪನಿಯು ಸ್ಥಳೀಯರ ಶಿಕ್ಷಣಕ್ಕಾಗಿ ಮೀಸಲಿರಿಸಿದ್ದ ಒಂದು ಲಕ್ಷ ರೂಪಾಯಿಗಳನ್ನು ಬಳಕೆ ಮಾಡುವುದಕ್ಕಾಗಿ ಒಂದು ಸಂಸ್ಕೃತ ಶಾಲೆಯನ್ನು ಆರಂಭಿಸಲು ಮುಂದಾಯಿತು. ಆಗ ಈ ತೀರ್ಮಾನವನ್ನು ವಿರೋಧಿಸಿದ ರಾಜಾರಾಮ ಮೋಹನರಾಯರು ಕಲ್ಕತ್ತಾದ ಲಾರ್ಡ್ ಬಿಷಪ್ ಆರ್. ಹೆಬರ್ ಅವರ ಮೂಲಕ ಗವರ್ನರ್ ಜನರಲ್ ಲಾರ್ಡ್ ಆ್ಯಮ್ ಹರ್ಸ್ಟ್‌ಗೆ ಪತ್ರವೊಂದನ್ನು ಬರೆದರು. ತಮ್ಮ ಈ ಪತ್ರದಲ್ಲಿ ಅವರು ಸಂಸ್ಕೃತ ಶಾಲೆಯನ್ನು ಆರಂಭಿಸುವುದನ್ನು ವಿರೋಧಿಸಿದರು. ಭಾರತೀಯ ಪುನರುಜ್ಜೀವನಕ್ಕೆ ಇಂಗ್ಲಿಷ್ ಪದ್ಧತಿಯು ನೆರವಾಗುತ್ತದೆ ಎಂದು ಅವರು ನಂಬಿದ್ದರು. ಅದೇ ಸಮಯದಲ್ಲಿ ಭಾರತೀಯ ವಿದ್ಯಾಭ್ಯಾಸ ಪದ್ಧತಿಯ ನಿರುಪಯುಕ್ತತೆಯನ್ನು ಮನಗಂಡಿದ್ದರು.

> ಈ ವಿದ್ಯಾಲಯದಲ್ಲಿ ಯುವ ವಿದ್ಯಾರ್ಥಿಗಳು ಸಂಸ್ಕೃತದ ವ್ಯಾಕರಣ, ವೇದಾಂತದ ಊಹಾತ್ಮಕ ತತ್ವಗಳ ಜಟಿಲಗತೆಗಳನ್ನು, ಮೀಮಾಂಸೆಯಲ್ಲಿನ ವೇದಗಳ ಹಳತಾದ ವ್ಯಾಖ್ಯಾನಗಳನ್ನು ಮತ್ತು ನ್ಯಾಯಶಾಸ್ತ್ರದ ಸೂಕ್ಷ್ಮತೆಯನ್ನು ಕಲಿಯುವುದಕ್ಕಾಗಿ ತಮ್ಮ ಜೀವಿತದ ಅತ್ಯಮೂಲ್ಯ ಭಾಗದ ಸುಮಾರು ಒಂದು ಡಜನ್ ವರ್ಷಗಳನ್ನು ಪೋಲು ಮಾಡುತ್ತಾರೆ[೧] ಎಂದು ಸಂಸ್ಕೃತ ಕಾಲೇಜಿನ ನಿರರ್ಥಕತೆಯನ್ನು ವಿವರಿಸಿದರು.

ಸಂಸ್ಕೃತ ಶಿಕ್ಷಣ ಪದ್ಧತಿಯಿಂದ ಭಾರತವನ್ನು ಬ್ರಿಟಿಷ್ ಶಾಸಕಾಂಗವೂ ಕತ್ತಲೆಯಲ್ಲಿಯೇ ಉಳಿಸಿದಂತಾಗುತ್ತದೆ. ಆದ್ದರಿಂದ ದೇಶಿಯ ಜನರ ಸುಧಾರಣೆಯನ್ನು ಬಯಸುವ ಬ್ರಿಟಿಷ್ ಸರ್ಕಾರವು ಹೆಚ್ಚು ಪ್ರಗತಿಪರವಾದ ಗಣಿತಶಾಸ್ತ್ರ, ಭೌತವಿಜ್ಞಾನ ಮತ್ತು ರಸಾಯನಶಾಸ್ತ್ರ, ದೇಹರಚನಾ ಶಾಸ್ತ್ರ ಮೊದಲಾದ ಉಪಯುಕ್ತ ಶಿಕ್ಷಣ ಪದ್ಧತಿಗಳನ್ನು ಜಾರಿಗೆ ತಂದು ಪ್ರೋತ್ಸಾಹಿಸಬೇಕು ಎಂದು ಒತ್ತಾಯಿಸಿದರು.

ಬಹಳ ಹಿಂದೆ ಭಾರತದ ಹಲವು ಪ್ರಾಂತ್ಯಗಳಲ್ಲಿ ಜ್ಞಾನ ಸಂಪಾದನೆಯ ಕಾರ್ಯ ನಡೆಯುತ್ತಿತ್ತು ಎಂಬುದು ನಿಜ. ಆದರೆ ಬ್ರಿಟಿಷರ ಕಾಲದಲ್ಲಿ ಜನಸಾಮಾನ್ಯರಿಗೆ ದೊರೆಯುತಿರುವ ಶಿಕ್ಷಣ ಈ ಹಿಂದೆ ದೊರೆತಿರಲಿಲ್ಲ. ಇಲ್ಲಿನ ರಾಜರ ಆಡಳಿತದ ಕಾಲದ ಶಿಕ್ಷಣ ಕ್ರಮಕ್ಕೂ ಬ್ರಿಟಿಷರ ಶಿಕ್ಷಣ ಕ್ರಮಕ್ಕೂ ಹೋಲಿಕೆ ಮಾಡಿದರೆ ಅಜಗಜಾಂತರ ವ್ಯತ್ಯಾಸವಿದೆ. ಹೀಗಾಗಿ ಕಲ್ಕತ್ತಾ ಮತ್ತು ಸುತ್ತಲಿನ ಉಪನಗರಗಳಲ್ಲಿ ವಿದ್ಯಾರ್ಥಿಗಳು ಈ ಬಗೆಯ ಶಿಕ್ಷಣ ಪಡೆಯಲು ಉತ್ಸುಕರಾಗಿದ್ದಾರೆ ಎಂದಿರುವ ರಾಜಾರಾಮ್ ಮೋಹನರಾಯರು ಸಂವಾದ ಕೌಮುದಿ ಪತ್ರಿಕೆಯಲ್ಲಿ (೧೮೩೦ ಆಗಸ್ಟ್ ೭ರ ಸಂಚಿಕೆ) ಇಂಗ್ಲಿಷ್ ಶಿಕ್ಷಣದ ಪ್ರಯೋಜನಗಳನ್ನು ವಿವರಿಸಿದ್ದಾರೆ.

ಸಂಸ್ಕೃತ ಕಾಲೇಜು ಸ್ಥಾಪನೆಯನ್ನು ವಿರೋಧಿಸಿದ ರಾಜರಾಮ ಮೋಹನರಾಯರು ಭಾರತದಲ್ಲಿ ಆ ಕಾಲಕ್ಕಾಗಲೇ ಚಾಲ್ತಿಯಲ್ಲಿದ್ದ ವಿದ್ಯಾಭ್ಯಾಸ ಪದ್ಧತಿಯ ಮಿತಿಯನ್ನು ವಿವರಿಸುತ್ತಾರೆ. ಸಂಸ್ಕೃತ ಕಾಲೇಜು ಸ್ಥಾಪನೆಯಿಂದಾಗಿ ಅಲ್ಲಿ ಶಿಕ್ಷಿತರಾಗುವ ಯುವ ಜನತೆಗಾಗಲಿ, ಸಮಾಜಕ್ಕಾಗಲೀ ಯಾವ ಬಗೆಯ ಪ್ರಾಯೋಗಿಕ ಉಪಯೋಗವೂ ಇಲ್ಲ. ಅಲ್ಲಿ ಪುರಾತನ ಕಾಲದಿಂದ ರೂಢಿಗತವಾಗಿ ಬಂದಿರುವಂತ ವಿಷಯಗಳನ್ನು ಹೇಳಿಕೊಡಲಾಗುತ್ತದೆ. ಇದರಿಂದ ಪ್ರಯೋಜನವಿಲ್ಲ ಎಂಬುದನ್ನು ಗವರ್ನರ್ ಜನರಲ್ ಅವರ ಗಮನಕ್ಕೆ ತರುತ್ತಾರೆ.

ರಾಜರಾಮ್ ಮೋಹನರಾಯ್‌ರು ಭಾರತದ ಪುನರುಜ್ಜೀವನಕ್ಕೆ ಇಂಗ್ಲಿಷ್ ಶಿಕ್ಷಣ ನೆರವಾಗುತ್ತದೆ ಎನ್ನುವುದನ್ನು ಅರ್ಥಮಾಡಿಕೊಂಡಿದ್ದರು. ಇವರ ಜತೆಗೆ ಆ ಕಾಲದಲ್ಲಿ ಕಲ್ಕತ್ತಾದ ಉನ್ನತ ವರ್ಗದ ಭಾರತೀಯರು ತಮ್ಮ ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣ ನೀಡಬೇಕೆನ್ನುವ ಒತ್ತಾಯವನ್ನು ಕಂಪನಿ ಸರ್ಕಾರಕ್ಕೆ ಮುಟ್ಟಿಸಿದರು. ಈ ಬೆಳವಣಿಗೆಗಳು 'ಮೆಕಾಲೆಯ ಪರಿಪತ್ರ' ರೂಪಿತಗೊಳ್ಳಲು ಕಾರಣವಾದವು. ಸಮಾಜ ಸುಧಾರಕ ರಾಜರಾಮ ಮೋಹನರಾಯರಿಗೆ ಭಾರತೀಯ ಸಮಾಜವನ್ನು ಧಾರ್ಮಿಕ ಕಂದಾಚಾರಗಳಿಂದ ಬಿಡುಗಡೆಗೊಳಿಸಬೇಕೆಂಬ ಹಂಬಲವಿದ್ದಿತ್ತು. ಅದಕ್ಕಾಗಿ ಅವರು ಬ್ರಿಟಿಷ್ ಅಧಿಕಾರಿಗಳ ನೆರವನ್ನು ಪಡೆದರು. ಪತ್ರಿಕಾ ಸ್ವಾತಂತ್ರ್ಯಕ್ಕಾಗಿ ಅವರು ನಡೆಸಿದ ಹೋರಾಟವೇ ಮುಂದೆ ಭಾರತೀಯ ಸ್ವಾತಂತ್ರ್ಯ ಸಂಗ್ರಾಮಕ್ಕೆ ನೆರವಾದ ಹಲವು ವಿಷಯಗಳಲ್ಲಿ ಪ್ರಮುಖವಾದುದು. ಸ್ಥಳೀಯ ಜನರ ಆಶೋತ್ತರಗಳಿಗೆ ಮಾನ್ಯತೆ ನೀಡಬೇಕು ಎನ್ನುವ ಹಕ್ಕೊತ್ತಾಯವನ್ನು ಅವರು ತಮ್ಮ ಮನವಿಗಳ, ಪತ್ರಿಕೆಗಳ ಮೂಲಕ ಕಂಪನಿ ಸರ್ಕಾರದ ಅಧಿಕಾರಿ ವರ್ಗದವರಿಗೆ ಮನವರಿಕೆ ಮಾಡಿಕೊಡುತ್ತಿದ್ದರು.

ಇಂಗ್ಲಿಷ್ ಭಾಷೆಯ ಬಗ್ಗೆ ಪ್ರಭುತ್ವ ಹೊಂದಿದ್ದ ರಾಜರಾಮ ಮೋಹನರಾಯರು ಅದರಿಂದ ಪಡೆಯಬಹುದಾದ ಜ್ಞಾನವನ್ನು ಅರ್ಥಮಾಡಿಕೊಂಡಿದ್ದರು. ಈಗಾಗಲೇ ಹಲವು ರಾಷ್ಟ್ರಗಳು ಬ್ರಿಟಿಷರ ವಿರುದ್ಧ ಹೋರಾಟ ಮಾಡಿದ ಸಂಗತಿ ಇಂಗ್ಲಿಷ್

ಓದಿಕೊಂಡ ಭಾರತೀಯರ ಗಮನ ಸೆಳೆದಿತ್ತು. ಅಲ್ಲದೇ ಭಾರತೀಯ ವಿದ್ಯಾಭ್ಯಾಸ ಪದ್ಧತಿಯು ಪೌರೋಹಿತ್ಯದ ಉದ್ಯೋಗವನ್ನು ಹೊರತುಪಡಿಸಿ ಹೆಚ್ಚಿನ ಜ್ಞಾನ ಸಂಪಾದನೆಗೆ ಒತ್ತು ನೀಡಿರಲಿಲ್ಲ. ಆ ಕಾಲಕ್ಕಾಗಲೇ ಶಿಕ್ಷಣ ಕೆಲವೇ ವರ್ಗಗಳವರಿಗೆ ಮೀಸಲಾಗಿತ್ತು. ಈ ರೀತಿಯ ತೊಡಕುಗಳನ್ನು ನಿವಾರಿಸಿಕೊಳ್ಳಲು ರಾಜಾರಾಮ ಮೋಹನರಾಯರಿಗೆ ಇಂಗ್ಲಿಷ್ ಶಿಕ್ಷಣ ಮಾರ್ಗವಾಗಿ ಕಾಣಿಸಿದೆ. ಅವರ ಚಿಂತನಾಕ್ರಮದಿಂದಾಗಿ ಭಾರತದಲ್ಲಿ ಮುಂದೆ 'ರಾಷ್ಟ್ರೀಯತೆಯ ಪ್ರಜ್ಞೆ' ರೂಪುಗೊಂಡಿರುವುದನ್ನು ಚರಿತ್ರೆಯಿಂದ ಗಮನಿಸಬಹುದಾಗಿದೆ.

> ವಸಾಹತುಶಾಹಿ ಸಂದರ್ಭದಲ್ಲಿ, ಬ್ರಿಟಿಷರ ಪ್ರಭುತ್ವಕ್ಕೆ ಒಳಗಾದ ಭಾರತದ ಪರಿಸರದಲ್ಲಿ ಇಂಗ್ಲಿಷ್ ಶಿಕ್ಷಣದ ಮೂಲಕ ನುಗ್ಗಿಬಂದ ಪಾಶ್ಚಿಮಾತ್ಯ ಪ್ರಭಾವಗಳ ಕಾರಣದಿಂದ ಉಂಟಾದ ಭಾರತೀಯ ಪುನರುಜ್ಜೀವನ ಒಂದು ಭಾಗ. ಭಾರತೀಯ ಪುನರುಜ್ಜೀವನ ಎನ್ನುವುದು ಪಶ್ಚಿಮದ ಪ್ರಭಾವ ಪ್ರೇರಣೆಗಳಿಗೂ, ಭಾರತೀಯ ಪರಂಪರೆಯ ವಿಚಾರಧಾರೆಗಳಿಗೂ ನಡೆದ ಸಂಘರ್ಷದ ಪರಿಣಾಮವಾಗಿದೆ. ಭಾರತೀಯ ಪುನರುಜ್ಜೀವನ ಎನ್ನುವುದು ಭಾರತದ ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಹಿತ್ಯಿಕ ವಲಯಗಳಲ್ಲಿ ಉಂಟಾದ ಹೊಸ ಎಚ್ಚರ ಹಾಗೂ ಬದಲಾವಣೆಗಳನ್ನು ಸೂಚಿಸುತ್ತದೆ[೧೩]

ಈ ಪುನರುಜ್ಜೀವನಕ್ಕೆ ನಾಂದಿ ಹಾಡಿದವರು ರಾಜರಾಮ ಮೋಹನರಾಯರು.

**ರವೀಂದ್ರನಾಥ ಠಾಕೂರ್ (೧೮೬೧-೧೯೪೧)**

ರಾಜರಾಮ ಮೋಹನರಾಯ, ರಾಧಾಕಾಂತ, ವೈದ್ಯನಾಥ ಮುಖರ್ಜಿ ಮುಂತಾದವರ ನಿರಂತರವಾದ ಹೋರಾಟದಿಂದಾಗಿ ೧೯ನೇ ಶತಮಾನದ ಆರಂಭದ ಕಾಲಕ್ಕೆ ಅಂದರೆ ೧೮೩೫ರ ಮೆಕಾಲೆಯ ಶಿಕ್ಷಣ ನೀತಿಗೆ ಮುಂಚಿತವಾಗಿಯೇ ಭಾರತದಲ್ಲಿ ವಸಾಹತು ಶಿಕ್ಷಣ ನೀತಿಯು ಜಾರಿಗೊಂಡಿತ್ತು. ಮೆಕಾಲೆಯ ಪರಿಪತ್ರದ ನಂತರ ಅದು ದೇಶಾದ್ಯಂತ ಜಾರಿಯಾಗಲು ಶಾಸನ ರೂಪವನ್ನು ಪಡೆಯಿತು. ಇಂಗ್ಲಿಷ್ ಶಿಕ್ಷಣದಿಂದಾಗಿ ಭಾರತೀಯರಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಉಂಟಾಗುತ್ತವೆ ಎಂದು ನಂಬಲಾಗಿತ್ತು. ಇಂಗ್ಲಿಷ್ ಶಿಕ್ಷಣವು ಭಾರತೀಯರಲ್ಲಿ ರಾಷ್ಟ್ರೀಯ ಪ್ರಜ್ಞೆ ಉಂಟು ಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿತು. ಅದು ಭಾರತೀಯರಲ್ಲಿ ಹಲವು ಬಗೆಯ ವೈರುಧ್ಯಗಳನ್ನು ಸೃಷ್ಟಿ ಮಾಡಿತು.

ಭಾರತದ ಸಾಹಿತ್ಯಿಕ ಹಿರಿಮೆಯನ್ನು ಜಗತ್ತಿಗೆ ಸಾರಿದವರು, ಇಂಗ್ಲಿಷ್ ಶಿಕ್ಷಣದ ಕಲಿಕಾ ಕ್ರಮಗಳು, ಕಲಿಕಾ ಪಠ್ಯಗಳು ಈ ಮೊದಲಾದ ವಿಚಾರಗಳ ಬಗ್ಗೆ ಬಹುವಾಗಿ ಚಿಂತಿಸಿದವರು ಕವಿ ರವೀಂದ್ರನಾಥ ಠಾಗೂರರು. ಅಲ್ಲದೇ ಇವರು ಶಿಕ್ಷಣ ಪದ್ಧತಿಗಳ ಬಗ್ಗೆ ಹಲವು ಪ್ರಯೋಗಗಳನ್ನು ನಡೆಸಿದ ಶಿಕ್ಷಣ ತಜ್ಞರು.

೧೮೫೭ರ ವೇಳೆಗೆ ಮೂರು ವಿಶ್ವವಿದ್ಯಾನಿಲಯಗಳು (ಕಲ್ಕತ್ತಾ, ಬೊಂಬಾಯಿ, ಮದ್ರಾಸು) ಸ್ಥಾಪಿತಗೊಂಡು ಎಲ್ಲೆಡೆ ಇಂಗ್ಲಿಷ್ ಶಿಕ್ಷಣ ಪದ್ಧತಿಯ ಶಾಲೆಗಳನ್ನು ತೆರೆಯಲಾಯಿತು. ಒಂದೆಡೆ ಸರ್ಕಾರ ಮತ್ತೊಂದೆಡೆ ಕ್ರೈಸ್ತ ಮಿಷನರಿಗಳು ಶಾಲೆಗಳನ್ನು ನಡೆಸುತ್ತಿದ್ದವು. ಇದರಿಂದಾಗಿ ಸ್ಥಳೀಯ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಒದಗಿದ ದುಃಸ್ಥಿತಿಯ ಬಗ್ಗೆ ರವೀಂದ್ರರು ತಮ್ಮ ಹಲವು ಸೃಜನಶೀಲ ಕೃತಿಗಳಲ್ಲಿ ಚರ್ಚಿಸಿದ್ದಾರೆ. ಇಲ್ಲಿ ಅವರ 'ನಿಬಂಧಮಾಲಾ', 'ಬಾಲ್ಯ ಸಾಹಿತ್ಯ', 'ನನ್ನ ಬಾಲ್ಯದ ದಿನಗಳು' ಕೃತಿಗಳಲ್ಲಿನ ಶಿಕ್ಷಣ ಕುರಿತ ಲೇಖನಗಳನ್ನು ಪರಾಮರ್ಶಿಸಿ ಭಾರತೀಯ ಮತ್ತು ಇಂಗ್ಲಿಷ್ ಶಿಕ್ಷಣ ನೀತಿಗಳನ್ನು ಕುರಿತ ಅವರ ಜಿಜ್ಞಾಸೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಮಗುವಿಗೆ ಬಾಲ್ಯದಿಂದಲೇ ಪಠ್ಯ ಶಿಕ್ಷಣದ ಜೊತೆಗೆ ಅನುಭವದ ಶಿಕ್ಷಣವು ನಡೆಯಬೇಕು. ಆಗ ಮಾತ್ರ ಕಲಿಕೆ ಪೂರ್ಣಗೊಂಡು ಎಲ್ಲ ವಿಷಯಗಳನ್ನು ಗ್ರಹಿಸಲು ಸಾಧ್ಯವಾಗುತ್ತದೆ.

> ನಾವು ಹೇಗೆ ಬಾಳುವೆಯನ್ನು ನಿರ್ವಹಿಸುತ್ತೇವೆಯೋ ನಮ್ಮ ಶಿಕ್ಷಣ ಅದಕ್ಕೆ ಉಪಯುಕ್ತವಾಗಿಲ್ಲ. ನಾವು ಯಾವ ಮನೆಯಲ್ಲಿ ಸಾಯುವ ತನಕ ವಾಸ ಮಾಡುತ್ತೇವೆಯೋ ಆ ಮನೆಯ ಗೌರವ ಚಿತ್ರ ನಮ್ಮ ಪಠ್ಯಪುಸ್ತಕಗಳಲ್ಲಿ ಇಲ್ಲ. ಯಾವ ಸಮಾಜದಲ್ಲಿ ನಾವು ಬಾಳನ್ನು ಸಾಗಿಸಬೇಕಾಗಿದೆಯೋ ಆ ಸಮಾಜದ ಯಾವುದೇ ಉಚ್ಚ ಆದರ್ಶವನ್ನು ನಾವು ಹೊಸದಾಗಿ ಕಲಿತ ಸಾಹಿತ್ಯದಲ್ಲಿ ಪಡೆಯವು.[೧೪]

ಎನ್ನುವ ಠಾಕೂರರು ಮಗುವಿನ ಪರಿಸರದ ಭಾಷೆ ಹಾಗೂ ವಸ್ತುಗಳನ್ನು ನಿರಾಕರಿಸುವ ಪಠ್ಯಪುಸ್ತಕಗಳು ಹಾಗೂ ಅವುಗಳ ಅಧ್ಯಯನದ ನಿಷ್ಪ್ರಯೋಜಕತೆಯನ್ನು ಗುರುತಿಸಿದ್ದಾರೆ. 'ನಮ್ಮ ಬದುಕಿನ ಬೇರು ಒಂದೆಡೆಯಾದರೆ ಶಿಕ್ಷಣದ ಮಳೆಯಧಾರೆ ಮತ್ತೊಂದೆಡೆಯಾಗಿ, ಕಲಿತ ವಿದ್ಯೆಯನ್ನು ನಮ್ಮ ಜೀವನವು ಕಾಲ ಕಳೆದಂತೆಲ್ಲ ವಿರೋಧಿಸಿ ನಡೆದಂತೆ ಆ ವಿದ್ಯೆಯ ಬಗ್ಗೆ ಅಪನಂಬಿಕೆಯೂ ಅಶ್ರದ್ಧೆಯೂ ಮೂಡಿರುತ್ತದೆ' ಎನ್ನುತ್ತಾರೆ.

ಈ ರೀತಿಯಲ್ಲಿ ರಾಜರಾಮ ಮೋಹನರಾಯರ ಕಾಲಕ್ಕೆ ಬಹುದೊಡ್ಡ ಬದಲಾವಣೆಗೆ ಕಾರಣವಾಗುತ್ತದೆ ಎಂದು ನಂಬಲಾಗಿದ್ದ ಇಂಗ್ಲಿಷ್ ಶಿಕ್ಷಣ ಮೂರ್‍ನಾಲ್ಕು ದಶಕಗಳು ಕಳೆಯುತ್ತಿದ್ದಂತೆ ಭಾರತೀಯರನ್ನು ಪರಕೀಯಗೊಳಿಸುತ್ತದೆ. ಕಲಿತವರು ಮತ್ತು ಕಲಿಯದವರು ಎನ್ನುವ ನವೀನ ವರ್ಗ ವ್ಯವಸ್ಥೆಯೊಂದು ಜನ್ಮ ತಾಳುತ್ತದೆ. ಒಂದು ಬಗೆಯ ನಿರ್ದಿಷ್ಟ ಶಿಕ್ಷಣ, ಅದಕ್ಕೆ ತಕ್ಕುದಾದ ಒಂದು ನೌಕರಿ ಈ ರೀತಿಯ ಸರಳ ಚಿಂತನೆಗಳನ್ನು ರವೀಂದ್ರರು ನಿರಾಕರಿಸುತ್ತಾರೆ. ಹೀಗೆ ಪರಭಾಷೆಯು ಮತ್ತು ಅದರ ಪಠ್ಯದಿಂದ ಕಲಿಸಲಾದ ಶಿಕ್ಷಣವು ಆ ಮಗುವನ್ನು ಅದರ ಪರಿಸರದಿಂದ, ಸಂಸ್ಕೃತಿಯಿಂದ ಪರಕೀಯನನ್ನಾಗಿಸುತ್ತದೆ. ದೇಶಭಾಷೆ ಮತ್ತು ಅದರ ಸಾಹಿತ್ಯದ ಅಭ್ಯಾಸವಿಲ್ಲದ ಶಿಕ್ಷಣ ನಿರುಪಯುಕ್ತ ಎಂದ ಇವರು ಸ್ಥಳೀಯ ಭಾಷೆ, ಸಂಸ್ಕೃತಿ ಮತ್ತು ಸಾಹಿತ್ಯವನ್ನೊಳಗೊಂಡ ಶಿಕ್ಷಣವನ್ನು ನೀಡಬೇಕೆಂದು ಪ್ರತಿಪಾದಿಸಿದರು.

ಅವರ ಸಣ್ಣಕತೆಯಾದ ಗಿಳಿಯ ಕತೆ ಇಂಗ್ಲಿಷ್ ಶಿಕ್ಷಣದ ಪರಿಣಾಮಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಸಿದೆ. ರಾಜನೊಬ್ಬ ಗಿಳಿಗೆ ಶಿಕ್ಷಣ ನೀಡಲು ತನ್ನ ಸಂಬಂಧಿಗಳನ್ನು ನೇಮಿಸುತ್ತಾನೆ. ಅದಕ್ಕಾಗಿ ಸುಂದರವಾದ ಪಂಜರ ನಿರ್ಮಾಣವಾಗುತ್ತದೆ. ರಾಶಿ ರಾಶಿ ಪಠ್ಯಕ್ರಮಗಳು ರಚಿತಗೊಳ್ಳುತ್ತವೆ. ಶಿಕ್ಷಕರು ಮತ್ತು ಕಾವಲುಗಾರರನ್ನು ನೇಮಿಸಲಾಗುತ್ತದೆ. ಸ್ವಲ್ಪ ದಿನಗಳ ನಂತರ ಪರೀಕ್ಷಿಸಲಾಗಿ ಗಿಳಿಯು ಸ್ವಾಭಾವಿಕವಾಗಿ ಕಲಿತಿದ್ದ ಅರಚುವುದು, ಹಾರುವುದನ್ನು ಹಾಗೂ ತಿನ್ನುವುದನ್ನು ಮರೆತು ಬಡಕಲಾಗುತ್ತದೆ. ಉಸ್ತುವಾರಿ ಹೊತ್ತ ಸಂಬಂಧಿ ಶಿಕ್ಷಕ, ಕಾವಲುಗಾರ, ಪಠ್ಯಪುಸ್ತಕ ರಚಿಸಿದವರು – ಹೀಗೆ ಎಲ್ಲರಿಗೂ ಇನಾಮು ದೊರೆತು ಲಾಭವಾಗುತ್ತದೆ. ಗಿಳಿಗೆ ಮಾತ್ರ ಯಾವ ಪ್ರಯೋಜನವೂ ದೊರೆಯದೆ ತಾನು ಸ್ವಭಾವತಃ ಕಲಿತದ್ದನ್ನು ಮರೆಯುತ್ತದೆ. ಈ ಕತೆಯಲ್ಲಿನ ಗಿಳಿ ಮಗುವಾಗಿದ್ದು, ಶಾಲೆ ಪಂಜರವಾಗಿ ಅದಕ್ಕೆ ಶಿಕ್ಷಣ ನೀಡುವ ಕಸರತ್ತನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ.

> ಶಿಕ್ಷಣವು ಮನುಷ್ಯನ ಜೀವನದುದ್ದಕ್ಕೂ ಪ್ರತಿನಿತ್ಯ ಅವನ ಜೊತೆಗೆ ಅವಶ್ಯ ಏಕತಾನವಾಗಿ ಏಕತಾಳ ಹಾಕುತ್ತ ನಡೆಯಬೇಕು ಎಂದು ನನಗೆ ಬಹುದಿನಗಳಿಂದ ಅನಿಸುತ್ತ ಬಂದಿದೆ. ಅದೆಂದಿಗೂ ಕ್ಲಾಸಿನಲ್ಲಿ ಕುಳಿತು ಕಲಿಯುವ ಮಟ್ಟಿಗೆ ಇರುವುದೆಂದು ನನಗೆ ತೋರುವುದಿಲ್ಲ ನಿಸರ್ಗವು ನಮಗೆ ಯಾವಾಗಲೂ ಪ್ರತ್ಯಕ್ಷವಾಗಿ, ಅಪ್ರತ್ಯಕ್ಷವಾಗಿ ಶಿಕ್ಷಣವನ್ನು ಕೊಡುತ್ತಲೆ ಇದೆ. ಈ ಶಿಕ್ಷಣದಿಂದ ನಮ್ಮ ಮನಸ್ಸಿನ ಮೇಲೆ, ದೇಶದ ಮೇಲೆ, ಹಾಗೂ ಜನಾಂಗದ ಮೇಲೆ ಒಳ್ಳೆ ಪರಿಣಾಮವಾಗುತ್ತಿದ್ದು ಬೌದ್ಧಿಕ ಶಿಕ್ಷಣದೊಂದಿಗೆ ಇದು ಸಮ್ಮಿಲಿತವಾಗಿರುತ್ತದೆ. ಪ್ರಕೃತಿಯ ವಿಶ್ವವಿದ್ಯಾಲಯಗಳಲ್ಲಿ ಎರಡು ಬಗೆಯ ಶಿಕ್ಷಣವು ನಮಗೆ ದೊರೆಯುತ್ತದೆ. ಒಂದು ನಿರೀಕ್ಷೆ ಇನ್ನೊಂದು ಪರೀಕ್ಷೆ. ಇವೆರಡಕ್ಕಿಂತ ಹೆಚ್ಚಿನ ಹಾಗೂ ಅತಿ ಮಹತ್ವವಾದ ಮೂರನೆಯ ಪ್ರಯೋಜನವೆಂದರೆ ನಮ್ಮ ಜೀವನದಲ್ಲಿ ಶಿಕ್ಷಣದಿಂದ ನಮಗಾಗುವ ಆನಂದ.[೧೫]

ಎನ್ನುವ ರವೀಂದ್ರನಾಥ ಠಾಕೂರರು ಶಿಕ್ಷಣವು ವ್ಯಕ್ತಿಯ ಬದುಕಿನ ಉನ್ನತಿಗೆ ಸಾಧನವಾಗಬೇಕೆಂದರು. ಶಾಲಾ ಶಿಕ್ಷಣವನ್ನು ನಿರಾಕರಿಸಿದ ಅವರು ಶಾಂತಿನಿಕೇತನದಂತಹ ಅಗ್ರಮಾನ್ಯ ಕಲಿಕಾ ಕೇಂದ್ರವನ್ನು ಮುನ್ನಡೆಸಿದ ಬಗೆ ಹಲವು ಕ್ಷೇತ್ರಗಳಲ್ಲಿ ಪಡೆದ ಪರಿಣತಿ – ಇವುಗಳನ್ನು ಕುರಿತು ನಿಖರವಾದ ಅಧ್ಯಯನಗಳು ನಡೆಯಬೇಕಾಗಿದೆ.

ಭಾರತೀಯ ಮಗುವಿನ ಬಾಲ್ಯದ ಶಿಕ್ಷಣ ಜೀವವಿಲ್ಲದ, ಆನಂದವಿಲ್ಲದ, ಬಿಡುವಿಲ್ಲದ, ಹೊಸತನವಿಲ್ಲದ ಶುಷ್ಕ ಸಂಕೀರ್ಣತೆಯ ನಡುವೆ ಸಾಗುತ್ತಿದೆ.

> ಯಾವ ಶಿಕ್ಷಣವು ಮನಸ್ಸನ್ನು ಜೀವಂತವಾದುದೆಂದು ಒಪ್ಪಿಕೊಳ್ಳುತ್ತದೋ, ಆ ಮನಸ್ಸು ಗುಣ ಮತ್ತು ಸಂಖ್ಯೆಗಳೆರಡರಲ್ಲೂ ತಾನು ಹೊರಗಿನಿಂದ

ತೆಗೆದುಕೊಂಡದ್ದಕ್ಕಿಂತ ಹೆಚ್ಚಿನದ್ದನ್ನು ಕೊಡುವಂತೆ ಪ್ರೇರಿಸುತ್ತದೋ ಅದೇ ನಿಜವಾದ ಶಿಕ್ಷಣ.[೧೬]

ಆದರೆ ಇಂಗ್ಲಿಷ್ ಪರದೇಶದ ಭಾಷೆಯಾದ್ದರಿಂದ ಭಾಷೆಯೊಡನೆಯ ಭಾವ ಸರಾಗವಾಗಿ ಬರಲಾರದೆ ನಮ್ಮ ಭಾವ, ಭಾಷೆ, ಜೀವನಗಳ ನಡುವಣ ಸಮನ್ವಯತೆ ದೂರವಾಗಿದೆ. ಆದ್ದರಿಂದ 'ಇಂಗ್ಲಿಷ್ ನಮ್ಮ ದಾರಿಗೆ ಕೆಲಸದ ಭಾಷೆಯಷ್ಟೆ ; ಭಾವದ ಭಾಷೆಯಲ್ಲ; ಹೀಗೆ ಪರಭಾಷೆ ಮತ್ತು ಅದರ ಪಠ್ಯದಿಂದ ಕಲಿಸಲಾದ ಶಿಕ್ಷಣವು ಮಗುವನ್ನು ತನ್ನ ಸುತ್ತಲಿನ ಪರಿಸರದಿಂದ, ಸಂಸ್ಕೃತಿಯಿಂದ ಪರಕೀಯನನ್ನಾಗಿಸುತ್ತಿದೆ. ದೇಶಭಾಷೆ ಮತ್ತು ಅದರ ಸಾಹಿತ್ಯದ ಅಭ್ಯಾಸವಿಲ್ಲದ ಶಿಕ್ಷಣ ನಿರುಪಯುಕ್ತವಾದುದು ಎಂದು ಹೇಳಿದ ಠಾಕೂರರು ಸ್ಥಳೀಯ ಭಾಷೆ, ಸಂಸ್ಕೃತಿ ಮತ್ತು ಸಾಹಿತ್ಯವನ್ನೊಳಗೊಂಡ ಹಾಗೂ ಬುದ್ಧಿಯೊಡನೆ, ಮನಸ್ಸನ್ನು ಸದೃಢಗೊಳಿಸುವ ಶಿಕ್ಷಣವನ್ನು ನೀಡಬೇಕೆಂದು ಪ್ರತಿಪಾದಿಸಿದರು.

ಕೇವಲ ಸಂಗತಿಗಳನ್ನು ಕಲೆ ಹಾಕುವುದಷ್ಟೆ ಶಿಕ್ಷಣದ ಗುರಿಯಲ್ಲ. ಒಂದು ಬಗೆಯ ನಿರ್ದಿಷ್ಟ ಶಿಕ್ಷಣ, ಅದಕ್ಕೆ ತಕ್ಕುದಾದ ಒಂದು ನೌಕರಿ, ಮುಂತಾದ ಸರಳ ಚಿಂತನೆಗಳನ್ನು ರವೀಂದ್ರರು ನಿರಾಕರಿಸುತ್ತಾರೆ. ಅಧುನಿಕ ಶಿಕ್ಷಣ ವಿಧಾನವು ಶಿಕ್ಷಣದ ಪ್ರಕ್ರಿಯೆಯಲ್ಲಿ ಆಲೋಚಿಸುವ, ಅಭಿವ್ಯಕ್ತಿಸುವ, ಭಾವಿಸುವ, ಮನಸ್ಸು ಸಹಾಯಕವಾಗಬಲ್ಲದು ಎಂಬ ವಿಚಾರವನ್ನೆ ಕಡೆಗಣಿಸಿದೆ ಎಂದು ವಿಶ್ಲೇಷಿಸಿದ್ದಾರೆ. ಇಂಥ ಹೊಸ ಶಿಕ್ಷಣದ ಪ್ರವಾಹ ಇಡೀ ದೇಶಕ್ಕೆ ಸಾರ್ವಜನಿಕವಾಗಿ ಲಭಿಸಲೇ ಇಲ್ಲ. ಬದಲಾಗಿ ಅದು ಕಲ್ಲುಕಟ್ಟಿದ ತೊಟ್ಟಿಗಳ ನೀರಿನಂತೆ ಅಲ್ಲಲ್ಲಿ ತಡೆದಿಟ್ಟಿದ್ದಾಗಿದೆ. ಹಲವು ನಿಯಮಗಳಿಂದ ಅದಕ್ಕೆ ಸುತ್ತಲೂ ದಿಗ್ಬಂಧನ ವಿಧಿಸಲಾಗಿದೆ ಎಂಬ ಶಿಕ್ಷಣ ವ್ಯವಸ್ಥೆಯ ಲೋಪದ ಬಗ್ಗೆ ಠಾಕೂರರು ಗಮನ ಹರಿಸಿದ್ದಾರೆ.

ಈ ವಿಚಾರಗಳನ್ನೆಲ್ಲ ಅವಲೋಕಿಸಿದರೆ ವಸಾಹತು ಶಿಕ್ಷಣದ ಬಗ್ಗೆ 'ವಾಸ್ತವವಾಗಿ ನಾವು ದೃಷ್ಟಿಶಕ್ತಿಯನ್ನು ಮಾರಿ ಕನ್ನಡಕವನ್ನು ಕೊಂಡಂತಾಗಿದೆ' ಎಂಬ ಠಾಕೂರರ ನಿಲುವು ಸತ್ಯವೆನಿಸುತ್ತದೆ.

ಭಾರತೀಯ ಪರಿಸರದ ಮಕ್ಕಳಿಗೆ ವಿದೇಶಿ ಭಾಷೆಯಲ್ಲಿ ವಿದ್ಯಾಭ್ಯಾಸ ನೀಡಿದರೆ ಅವರಿಗೆ ಯಾವ ರೀತಿಯಿಂದಲೂ ಪೂರ್ವಜ್ಞಾನದಿಂದ ಶಿಕ್ಷಕರು ಹೇಳುವುದನ್ನು ಅವರು ಅರ್ಥ ಮಾಡಿಕೊಳ್ಳುವುದಿಲ್ಲ. ಕೇಳಿಸಿಕೊಂಡ ಪಾಠದ ವಿಷಯಗಳು ಕಣ್ಣಮುಂದೆ ಚಿತ್ರದ ರೂಪಗಳಾಗಿ ಕಾಣಿಸುವುದಿಲ್ಲ. ಆದ್ದರಿಂದ ಕಲಿಕೆಯ ಆರಂಭದಿಂದ ಕೊನೆಯವರೆವಿಗೂ ಕುರುಡರಂತೆಯೇ ತಡವರಿಸುವ ಸನ್ನಿವೇಶ ನಿರ್ಮಾಣವಾಗುತ್ತದೆ ಎಂದಿದ್ದಾರೆ. ಅದಕ್ಕಾಗಿ ಚಿಕ್ಕವಯಸ್ಸಿನಲ್ಲಿ ಶಿಕ್ಷಣದ ಜತೆಗೆ ಭಾವ ಶಿಕ್ಷಣವೂ ದೊರಕಬೇಕು. ಬುದ್ಧಿ ಮತ್ತು ಭಾವಗಳ ನಡುವೆ ಸಂಬಂಧ ಏರ್ಪಡಬೇಕು. ಯಾಕೆಂದರೆ ನಮ್ಮ ಶಿಕ್ಷಣದಿಂದ ನಮ್ಮ ಬಾಳಿನ ಎಲ್ಲ ಕೊರತೆಗಳನ್ನು ನೀಗಿಕೊಳ್ಳುವುದಕ್ಕೆ ಸಾಧ್ಯವಿಲ್ಲ ಎಂಬುದನ್ನು ಮನಗಾಣಬೇಕಿದೆ.

ಓದಿನ ನೆಪದಲ್ಲಿ ಅಸಂಖ್ಯಾತ ವಿದ್ಯಾರ್ಥಿಗಳ ಜೀವಮಾನದ ಅಮೂಲ್ಯ ವರ್ಷಗಳು ವ್ಯರ್ಥವಾಗಿ ಕಳೆದುಹೋಗುತ್ತವೆ. ಇದನ್ನು ಗುರುತಿಸುವ ರವೀಂದ್ರರು ನಾವು ಸರಸ್ವತಿಯ ಸಾಮ್ರಾಜ್ಯದಲ್ಲಿ ಕೇವಲ ಕೂಲಿ ಮಾಡಿ ಸಾಯುತ್ತೇವೆ. ಬೆನ್ನೆಲುಬು ಬಾಗಿ ಹೋಗುತ್ತದೆ. ಅದರಲ್ಲೂ ಇಂಗ್ಲಿಷಿನ ಭಾವ ಸಾಮ್ರಾಜ್ಯದಲ್ಲಿ ಪ್ರವೇಶ ಪಡೆದರಂತೂ ನಾವು ನಮ್ಮ ಅಂತರಂಗದ ಒಡೆಯರಂತೆ ಅರ್ಥ ಮಾಡಿಕೊಂಡೆವಾದರೂ ಅದನ್ನು ನಮ್ಮ ಜ್ಞಾನದ ಭಾಗವಾಗಿ ಸ್ವೀಕರಿಸಲು ಅಶಕ್ತರಾಗುತ್ತೇವೆ. ಅಲ್ಲದೇ ಆ ಭಾವ ಮತ್ತು ಜ್ಞಾನ ಜಗತ್ತಿನಿಂದ ಪಡೆದುಕೊಂಡಿರುವುದನ್ನು ಭಾಷಣಗಳಲ್ಲಾಗಲೀ, ಬರಹಗಳಲ್ಲಾಗಲೀ ಬಳಸಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ ಎಂದು ಪರಕೀಯ ಭಾಷೆಯ ಮೂಲಕ ದೊರಕಿಸಿಕೊಳ್ಳುವ ಶಿಕ್ಷಣದ ವೈಫಲ್ಯವನ್ನು ಗುರುತಿಸಿದ್ದಾರೆ.

ಬಹು ಜನರ ಬದುಕಿನಲ್ಲಿ ಅವರು ಕಲಿತ ವಿದ್ಯೆಯನ್ನು ಅವರು ತಮ್ಮ ಜೀವನದುದ್ದಕ್ಕೂ ವಿರೋಧಿಸುತ್ತಾರೆ. ಕಾಲ ಕಳೆದಂತೆ ಆ ವಿದ್ಯೆಯ ವಿಷಯದಲ್ಲಿಯೇ ಅವರಿಗೆ ಅಪನಂಬಿಕೆಯೂ, ಅಶ್ರದ್ಧೆಯೂ ಮೂಡುತ್ತದೆ. ಹೀಗಾಗಲು ನಮ್ಮ ವಿದ್ಯಾಭ್ಯಾಸ ಪದ್ಧತಿಯಲ್ಲಿರುವ ದೋಷಗಳೇ ಪ್ರಮುಖವಾದ ಕಾರಣಗಳಾಗಿವೆ. ಅದಕ್ಕಾಗಿ ಮನಸ್ಸನ್ನು ಜೀವಂತಗೊಳಿಸುವ ಶಿಕ್ಷಣ ನೀಡಬೇಕು. ಜೀವಂತಗೊಂಡ ಮನಸ್ಸು ಗುಣ ಮತ್ತು ಸಂಖ್ಯೆಗಳೆರಡರಲ್ಲೂ ತಾನು ಹೊರಗಿನಿಂದ ಪಡೆದುಕೊಂಡಿರುವುದಕ್ಕಿಂತ ಹೆಚ್ಚಿನದನ್ನು ಕೊಡುವಂತೆ ಪ್ರೇರೇಪಿಸಬೇಕು. ಇಂತಹ ಪ್ರೇರಕ ಶಕ್ತಿಯಾಗಿ ಮಗುವಿಗೆ ಶಿಕ್ಷಣ ನೀಡಬೇಕು.

ನಮ್ಮಲ್ಲಿನ ಶಿಕ್ಷಣ ಸಂಸ್ಥೆಗಳನ್ನು ಸುಧಾರಿಸಬೇಕು ಎನ್ನುವುದು ಠಾಕೂರರ ವಾದ. ಈ ಚಿಂತನೆಯ ಫಲವಾಗಿಯೇ ಅವರು ಶಾಂತಿನಿಕೇತನವನ್ನು ಆರಂಭಿಸಿದರು. ಅದನ್ನು ಪೂರ್ವ ಮತ್ತು ಪಶ್ಚಿಮಗಳ ಮಿಲನಗೊಳಿಸಿರುವ ನಿಕೇತನವನ್ನಾಗಿ ಮಾಡಬೇಕೆಂದು ಬಯಸಿದರು. ತಮ್ಮ ಕಾಲದ ಶಿಕ್ಷಣ ವ್ಯವಸ್ಥೆಯನ್ನು ಕುರಿತು ಆಧುನಿಕ ಶಿಕ್ಷಣದ ಪ್ರವಾಹ ಇಡೀ ದೇಶಕ್ಕೆ ಸಾರ್ವಜನಿಕವಾಗಿ ಲಭಿಸಲೇ ಇಲ್ಲ.

ನಮ್ಮ ದೇಶದ ಸ್ಥಿತಿಯನ್ನು ಗಮನಿಸಿದ ಠಾಗೋರರು 'ನಮಗೆ ನೀರೂ ಇದೆ. ದಾಹವೂ ಇದೆ. ಇದನ್ನು ನೋಡಿ ಜಗತ್ತಿನ ಜನ ನಗುತಿದ್ದಾರೆ ಮತ್ತು ನಮ್ಮ ಕಣ್ಣುಗಳಲ್ಲಿ ಕಣ್ಣೀರು ಬರುತ್ತದೆ. ನಾವು ನೀರನ್ನು ಕುಡಿಯಲು ಸಾಧ್ಯವಿಲ್ಲದ ಸ್ಥಿತಿಯಲ್ಲಿ ಇದ್ದೇವೆ' ಎಂದಿದ್ದಾರೆ. ಕಾಲ ಇಷ್ಟು ಬದಲಾಗಿದ್ದರೂ ಠಾಗೋರರು ಎತ್ತಿರುವ ಈ ಬಗೆಯ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಅವರ ಕಾಲಕ್ಕೆ ಸಣ್ಣ ಪ್ರಮಾಣದಲ್ಲಿದ್ದ ಈ ಬಿಕ್ಕಟ್ಟುಗಳು ಇಂದು ಬೃಹದಾಕಾರವಾಗಿ ಬೆಳೆದು ನಿಂತಿವೆ. ಎಲ್ಲ ಕಾಲಮಾನಗಳಲ್ಲೂ 'ಶಿಕ್ಷಣ' ಆಡಳಿತ ನಡೆಸುವ ಸರ್ಕಾರಗಳಿಗೆ ಆದ್ಯತೆಯ ವಿಷಯವಾಗದ ಕಾರಣದಿಂದಾಗಿ ಶಿಕ್ಷಣ ಕ್ಷೇತ್ರದ ಸಮಸ್ಯೆಗಳನ್ನು ನಿವಾರಿಸುವ

ಇಚ್ಛಾಶಕ್ತಿಯ ಕೊರತೆ ಎದುರಾಗಿದೆ. ಠಾಕೂರರ ಈ ಶೈಕ್ಷಣಿಕ ಚಿಂತನೆಗಳನ್ನು ಪುನರ್ ಮೌಲ್ಯೀಕರಿಸಿಕೊಳ್ಳಬೇಕಾದ ತುರ್ತು ಎದುರಾಗಿದೆ. ತರಗತಿಗಳಲ್ಲಿ ಕಲಿಸಿಕೊಡುತ್ತಿರುವ ಶಿಕ್ಷಣದಲ್ಲಿನ ಲೋಪಗಳ ಬಗ್ಗೆ ಠಾಕೂರರು ಗಂಭೀರ ಚಿಂತನೆ ನಡೆಸಿದ್ದಾರೆ. ನಮ್ಮದಲ್ಲದ ಭಾಷೆಯಲ್ಲಿ ಮತ್ತೊಬ್ಬರ ಬುದ್ಧಿಯ ಮೂಲಕ ಯೋಚಿಸುವ, ಕಟ್ಟುವ ಪ್ರಯತ್ನಗಳು ಯಶಸ್ಸು ಪಡೆಯುವುದಿಲ್ಲ. ತರಗತಿಯಲ್ಲಿ ಹೇಳಿ ಕೊಟ್ಟಿರುವುದನ್ನು, ಉರು ಹೊಡೆದು ತಪ್ಪಿಲ್ಲದೆ ಹೇಳಲಿಕ್ಕೆ ಸಾಧ್ಯವಾದರೇ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರೆ ಕಲಿಕೆಯನ್ನು ವಶಪಡಿಸಿಕೊಂಡಂತೆ ಎಂದು ಬೀಗುತ್ತಾರೆ. ಆದರೆ ಬುದ್ಧಿ ಪರಾವಲಂಬಿತವಾಗಿರುತ್ತದೆ. ಚಿಂತನಾಕ್ರಮ ಸ್ವಂತಿಕೆಯನ್ನು ಹೊಂದಿರುವುದಿಲ್ಲ. ಅದಕ್ಕಾಗಿ ಮಾತೃಭಾಷಾ ಶಿಕ್ಷಣ ಬೇಕು ಎಂದು ಠಾಕೂರ್ ಅವರು ಒತ್ತಾಯಿಸಿದ್ದಾರೆ. ಜನರಿಗೆ ಇದನ್ನು ತಿಳಿಸಿಹೇಳಬೇಕಾದ ದುರ್ಗತಿ ಬಂದಿರುವುದಕ್ಕೆ ಅವರು ಮರಗುತ್ತಾರೆ.

'ತಿನ್ನುವ ಅನ್ನವನ್ನು ಜೀವ ಸಾಮಾಗ್ರಿಯಾಗಿ ಮಾಡಿಕೊಳ್ಳಬೇಕಾದರೆ ಅದನ್ನು ತನ್ನ ಹಲ್ಲುಗಳ ಮೂಲಕ ಅಗಿದು ತನ್ನ ನಾಲಿಗೆಯ ರಸದಲ್ಲಿ ನೆನೆಸಿ, ನುಂಗುವುದೇ ಮಾರ್ಗವೆಂಬುದು ಯಾರಿಗೆ ತಾನೇ ಗೊತ್ತಿಲ್ಲ?' ಎಂದು ಪ್ರಶ್ನಿಸುತ್ತಾರೆ. ಹೀಗೆ ಸಹಜವಾಗಿಯೇ ಅರ್ಥವಾಗಬೇಕಾದ ಸಂಗತಿಗಳನ್ನು ಜನತೆ, ಸರ್ಕಾರ ಹಾಗೂ ಶಿಕ್ಷಣ ಸಂಸ್ಥೆಗಳನ್ನು ನಡೆಸುವ ಜವಾಬ್ದಾರಿಯುತ ಜನ ಯಾಕೆ ಅರ್ಥ ಮಾಡಿಕೊಳ್ಳುತ್ತಿಲ್ಲ ಎನ್ನುವುದು ಈ ಕಾಲದ ದೊಡ್ಡ ಪ್ರಶ್ನೆಯಾಗಿದೆ. ನಮ್ಮ ಶಿಕ್ಷಣ ಪರಕೀಯರನ್ನು ಅವಲಂಬಿಸಬಾರದು ಎನ್ನುವುದು ಠಾಕೂರರ ಚಿಂತನೆಯಾಗಿತ್ತು. ಅದಕ್ಕೆ ಅವರು ಒಂದು ಬಗೆಯ ಜೀವಿಯು ಪರಾವಲಂಬಿಯಾಗಿ ಹುಟ್ಟಿ ಪರಾವಲಂಬಿ ಆಗಿಯೇ ಬದುಕಿ ಸಾಯುತ್ತದೆ. ಕೇವಲ ಮತ್ತೊಂದರ ಅಂಗವಾಗಿ ಜೀವಿಸಿಕೊಂಡಿದ್ದರಿಂದ ತೊಂದರೆ ಆಗುವುದಿಲ್ಲ. ಇದರಿಂದ ತನ್ನ ಅಂಗಗಳು ಉಪ ಅಂಗಗಳು ಬೆಳವಣಿಗೆಯಾಗದೇ ಊನವಾಗುತ್ತವೆ. ಅಂತೆಯೇ ನಮ್ಮ ವಿದ್ಯಾಲಯಗಳೂ ಈ ರೀತಿಯಿಂದಲೇ ಸ್ವಂತ ಬಲದಿಂದ, ಶಕ್ತಿಯಿಂದ ಉಜ್ವಲಗೊಳ್ಳದೆ ಅಂಗವೈಕಲ್ಯಗೊಂಡಿವೆ ಎಂದಿದ್ದಾರೆ.

ಈ ಬಗೆಯಲ್ಲಿ ಕಲಿಕೆ, ಕಲಿಸುವ ಕ್ರಮ, ಕಲಿಸುವ ಪರಿಸರ ಮತ್ತು ಕಲಿಸಬೇಕಾದ ಭಾಷೆ ಹಾಗೂ ಪಠ್ಯ ಈ ವಿಷಯಗಳ ಬಗ್ಗೆ ಗಂಭೀರ ಚಿಂತನೆ ನಡೆಸಿರುವ ರವೀಂದ್ರರು ತಮ್ಮ ಕಾಲದಲ್ಲಿ ಇಂಗ್ಲಿಷಿನಿಂದ ಉಂಟಾಗಿದ್ದ ಪ್ರಭಾವವನ್ನು ಗ್ರಹಿಸಿದ್ದಾರೆ.

'ಈ ಸಂದರ್ಭದಲ್ಲಿ ನಾವು ಒಪ್ಪಿಕೊಳ್ಳಬೇಕಾಗಿರುವ ಒಂದು ಸಂಗತಿಯೇನೆಂದರೆ, ಇಂಗ್ಲಿಷನ್ನು ನಮ್ಮ ವಿಶ್ವವಿದ್ಯಾನಿಲಯದಲ್ಲಿ ಈಗ ಅದಕ್ಕೆ ಇರತಕ್ಕ ಗೌರವ ಸ್ಥಾನದಿಂದ ಕದಲಿಸಕೂಡದು. ಇಂದು ಯುರೋಪಿನ ಜ್ಞಾನವಿಜ್ಞಾನಗಳ ಸಮಸ್ತ ಮಾನವ ಜಗತ್ತಿನ ವಿಶ್ವಾಸಕ್ಕೆ ಪಾತ್ರವಾಗಿದೆ. ಜ್ಞಾನ ಜ್ಯೋತಿಯು ಯಾವ ದಿಕ್ಕಿನಿಂದಲೇ ಬರಲಿ ಅದನ್ನು ಅಪರಿಚಿತವೆಂಬ ಕಾರಣದಿಂದಲೇ ತಿರಸ್ಕರಿಸುವುದು ಮನಸ್ಸಿನ ಕುರುಡುತನವನ್ನು ತೋರುತ್ತದೆ'

ಎಂದಿದ್ದಾರೆ. ಹೀಗೆ ಇಂಗ್ಲಿಷಿನಿಂದ ಒದಗಬಹುದಾದ ಎಲ್ಲ ರೀತಿಯ ಜ್ಞಾನವನ್ನು ನಾವು ಸ್ವೀಕರಿಸಬೇಕು. ಆದರೆ ಅದನ್ನು ಎಳೆಯ ಮಕ್ಕಳಿಗೆ ಕಲಿಸಿಕೊಡುವಾಗ ಅನ್ಯಭಾಷೆಯ ಮೊರೆ ಹೋಗಬಾರದು. ಆ ಮಗುವಿನ ಮಾತೃಭಾಷೆಯಲ್ಲಿಯೇ ಕಲಿಸಬೇಕು ಎಂಬುದು ಠಾಕೂರರ ಚಿಂತನೆಯಾಗಿತ್ತು.

**ಸ್ವಾಮಿ ವಿವೇಕಾನಂದ (೧೮೬೩-೧೯೦೨)**

ಚಿಕ್ಕವಯಸ್ಸಿನಲ್ಲಿ ನರೇಂದ್ರನಿಗೆ ಕುಲಪುರೋಹಿತರು ಬಂಗಾಳಿ ಅಕ್ಷರವನ್ನು ತಿದ್ದಿಸುತ್ತಾರೆ. ಆ ಮೂಲಕ ವಿದ್ಯಾಭ್ಯಾಸ ಆರಂಭವಾಗುತ್ತದೆ. ಆರು ವರ್ಷಕ್ಕೆ ಶಾಲೆಗೆ ಸೇರಿದ ನರೇಂದ್ರನಿಗೆ ಅಲ್ಲಿಯ ವಾತಾವರಣ ಇಷ್ಟವಾಗದೆ ಮನೆಗೆ ಹಿಂದಿರುಗುತ್ತಾನೆ. ಆಗ ಮನೆಯೇ ಆತನಿಗೆ ಶಾಲೆಯಾಗುತ್ತದೆ. ಅನಂತರ ಮೆಟ್ರೋಪಾಲಿಟನ್ ಶಾಲೆ ಸೇರಿದ ನರೇಂದ್ರ ಅಲ್ಲಿ ಸಂಸ್ಕೃತ, ಇಂಗ್ಲಿಷ್ ಮತ್ತು ಇತಿಹಾಸ ವಿಷಯಗಳಲ್ಲಿ ಆಸಕ್ತಿ ಹೊಂದಿ ಅವುಗಳನ್ನು ಕಲಿತನು. ತಂದೆಗೆ ರಾಯಪುರಕ್ಕೆ ವರ್ಗವಾಗುತ್ತದೆ. ನರೇಂದ್ರನು ತಂದೆಯೊಡನೆ ತೆರಳಬೇಕಾಗುತ್ತದೆ. ಆದರೆ ರಾಯಪುರದಲ್ಲಿ ಶಾಲೆ ಇಲ್ಲದ ಕಾರಣ ತಂದೆಯೇ ಮಗನಿಗೆ ಪಾಠ ಹೇಳಿಕೊಡುತ್ತಾರೆ. ಮಗನ ಆಸಕ್ತಿಯನ್ನು ಗುರುತಿಸಿದ ವಿಶ್ವನಾಥದತ್ತರು ದರ್ಶನ, ಇತಿಹಾಸ ಮತ್ತು ಸಾಹಿತ್ಯದ ಕೃತಿಗಳನ್ನು ಓದಿ ಹೇಳುತ್ತಾರೆ. ಎರಡು ವರ್ಷ ಶಾಲೆ ತಪ್ಪಿದರೂ ಅನಂತರ ಅಧ್ಯಾಪಕರೊಬ್ಬರ ಸಹಾಯದಿಂದ ಮೆಟ್ರಿಕ್ಯುಲೇಷನ್‌ಗೆ ಸೇರಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣನಾಗುತ್ತಾನೆ. ಹದಿನೈದನೇ ವಯಸ್ಸಿನಲ್ಲಿ ಕಲ್ಕತ್ತಾದ ಪ್ರೆಸಿಡೆನ್ಸಿ ಕಾಲೇಜು ಸೇರಿ (ಎಫ್.ಎ.) ತತ್ವಶಾಸ್ತ್ರವನ್ನು ಆಯ್ಕೆ ಮಾಡಿಕೊಂಡು ಬಿ.ಎ. ಪದವಿ ಪಡೆಯುತ್ತಾನೆ. ಆ ನರೇಂದ್ರನೇ ಸ್ವಾಮಿ ವಿವೇಕಾನಂದ.

ಕೇವಲ ಮೂವತ್ತೊಂಬತ್ತು ವರ್ಷ ಬದುಕಿದ್ದ ಸ್ವಾಮಿ ವಿವೇಕಾನಂದರು ತಮ್ಮ ಜ್ಞಾನದ ಬೆಳಕಿನಿಂದ ಉಂಟು ಮಾಡಿದ ಪ್ರಕಾಶಮಾನತೆ ಅದ್ವಿತೀಯವಾದುದು. ಬ್ರಿಟಿಷರಿಂದ ರೂಪುಗೊಂಡಿದ್ದ ಶಾಲೆ, ಕಾಲೇಜುಗಳಲ್ಲೇ ಶಿಕ್ಷಣ ಪಡೆದ ವಿವೇಕಾನಂದರು ಆ ಶಿಕ್ಷಣ ಪದ್ಧತಿಯಲ್ಲಿರುವ ವೈಫಲ್ಯಗಳನ್ನು ಗುರುತಿಸಿದ್ದಾರೆ. ಭಾರತೀಯ ಪರಿಸರಕ್ಕೆ ಈ ಬಗೆಯ ಶಿಕ್ಷಣ ಹೊಂದಿಕೆಯಾಗಲಾರದು ಎಂದಿದ್ದಾರೆ.

'ಇಂಗ್ಲಿಷ್ ಶಿಕ್ಷಣವು ನಿಷೇಧ ಪ್ರಾಧಾನ್ಯ ವಿದ್ಯಾಭ್ಯಾಸ ಹಾಗೂ ಅದರ ತಳಹದಿಯ ಮೇಲೆ ನಿಂತ ಯಾವ ಬಗೆಯ ಶಿಕ್ಷಣವಾದರೂ ಅದರಿಂದ ಪ್ರಯೋಜನವಿಲ್ಲ' ಎನ್ನುವುದು ವಿವೇಕಾನಂದರು ಇಂಗ್ಲಿಷ್ ಶಿಕ್ಷಣದ ಬಗ್ಗೆ ಮಾಡಿರುವ ಟೀಕೆ.

> ಶಿಕ್ಷಣವೆಂದರೆ ನೀವು ತಲೆಯಲ್ಲಿ ತುಂಬಿಕೊಂಡ ವಿಷಯ ಸಂಗ್ರಹವಲ್ಲ. ಜೀವಾವಧಿ ರಕ್ತಗತವಾಗದೆ ತೊಂದರೆ ಕೊಡುವ ವಸ್ತುವಲ್ಲ ಅದು. ಜೀವನ ವಿಕಾಸಕ್ಕೆ ಸಹಾಯ ಮಾಡುವ, ಮಾನವ ನಿರ್ಮಾಣಕ್ಕೆ ದಾರಿ ಮಾಡುವ ಚಾರಿತ್ರ ಸಂಪನ್ನತೆಯನ್ನು ಹೆಚ್ಚಿಸುವ, ಭಾವನೆಗಳ ಸಮೀಕರಿಸಿಕೊಳ್ಳುವಂತಹ ಶಿಕ್ಷಣ ನಮ್ಮದಾಗಬೇಕು[೧೭]

ಎನ್ನುವ ವಿವೇಕಾನಂದರು 'ಶಿಕ್ಷಣದ' ಅರ್ಥಸ್ವರೂಪವನ್ನು ವಿಸ್ತರಿಸುತ್ತಾರೆ. ಕೇವಲ ವಿಷಯ ಸಂಗ್ರಹವಷ್ಟೆ ಶಿಕ್ಷಣವಲ್ಲ. ಹಾಗಾಗಿದ್ದರೆ ಪುಸ್ತಕ ಭಂಡಾರಗಳೇ ಮಹಾಮುನಿಗಳಾಗಿ ಇರುತ್ತಿದ್ದವು. ಆದ್ದರಿಂದ ಶಿಕ್ಷಣದ ಉದ್ದೇಶ ಮತ್ತು ಗುರಿ ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆ ಎಂದಿದ್ದಾರೆ.

ಶೀಲವನ್ನು ರೂಪಿಸುವ, ಮಾನಸಿಕ ಶಕ್ತಿಯನ್ನು ಹೆಚ್ಚಿಸುವ ಹಾಗೂ ಬುದ್ಧಿಯನ್ನು ವಿಕಾಸಗೊಳಿಸುವ ಶಿಕ್ಷಣ ಬೇಕು. ಅದರಿಂದ ಸ್ವಂತಿಕೆಯನ್ನು ಪಡೆದು ನಾವು ಸ್ವಾವಲಂಬಿಗಳಾಗಬೇಕು. ಈ ಬಗೆಯ ಶಿಕ್ಷಣ ನಮಗೆ ಅವಶ್ಯವಾಗಿದೆ ಎನ್ನುತ್ತಾರೆ.

ಎಲ್ಲ ಬಗೆಯ ಶಿಕ್ಷಣ ಹಾಗೂ ತರಬೇತಿಯ ಮೂಲ ಉದ್ದೇಶ ಮನುಷ್ಯನನ್ನು ರೂಪಿಸುವುದು. ಆದರೆ ಅದನ್ನು ನಾವು ಸರಿಯಾಗಿ ಅರ್ಥ ಮಾಡಿಕೊಳ್ಳುತ್ತಿಲ್ಲ. ಆಂತರಿಕವಾಗಿ ಬರಿದಾಗಿ ಕೇವಲ ಹೊರ ಆವರಣ ಹೊಳೆಯುವಂತೆ ಮಾಡುತ್ತಿದ್ದೇವೆ. ಅಂದರೆ ಬಾಹ್ಯದ ಬಗೆಗಿನ ಮೋಹದಿಂದ ಯಾವ ಬಗೆಯ ಪ್ರಯೋಜನವೂ ಇಲ್ಲ. ಯಾವ ಬಗೆಯ ತರಬೇತಿ ಅಥವಾ ನಮ್ಮ ಇಚ್ಛಾಶಕ್ತಿಯ ಸೆಳೆತ ಮತ್ತು ಅಭಿವ್ಯಕ್ತಿಗಳನ್ನು ನಿಯಂತ್ರಣದಲ್ಲಿಟ್ಟು ಅವುಗಳನ್ನು ಪ್ರಯೋಜನಕರವಾಗಿ ಮಾಡುತ್ತದೆಯೇ ಅದು ನಿಜವಾದ ಶಿಕ್ಷಣ. ಹೀಗೆ ಶಿಕ್ಷಣದ ಅರ್ಥವ್ಯಾಪ್ತಿಯನ್ನು ವಿಸ್ತರಿಸಿದ ಸ್ವಾಮಿ ವಿವೇಕಾನಂದರು 'ಶಿಕ್ಷಣವೆಂದರೆ ಮೊದಲೇ ಮನುಷ್ಯನಲ್ಲಿ ಇರುವ ಪರಿಪೂರ್ಣತೆಯನ್ನು ಪ್ರಕಾಶಪಡಿಸುವುದು' ಎಂದಿದ್ದಾರೆ. ಇವರು 'ವಿದ್ಯೆ' ಮತ್ತು 'ಶಿಕ್ಷಣ' – ಇವುಗಳ ನಡುವಿನ ವ್ಯತ್ಯಾಸಗಳನ್ನು ಗುರುತಿಸುತ್ತಾರೆ. ಶಿಕ್ಷಣ ಎನ್ನುವುದು ಲೌಕಿಕಕ್ಕೆ ಸಂಬಂಧಿಸಿದ್ದು 'ವಿದ್ಯೆ' ಎನ್ನುವುದು ಆಧ್ಯಾತ್ಮಕ್ಕೆ ಸಂಬಂಧಿಸಿದ್ದು ಎನ್ನುತ್ತಾ, ಮುಕ್ಕಾಲು ಪಾಲು ಸನ್ಯಾಸಿಗಳೆಲ್ಲಾ ವಿದ್ಯಾವಂತರು. ಯಾರು ವಿದ್ಯಾವಂತರಲ್ಲವೋ ಅವರಿಗೆ ಲೌಕಿಕ ಶಿಕ್ಷಣದ ಅಗತ್ಯವಿದೆ. ವಿದ್ಯಾಭ್ಯಾಸವೆಂದರೆ ಬರೀ ಪುಸ್ತಕಗಳ ಓದು ಮಾತ್ರವಲ್ಲ. ಯಾವ ಶಿಕ್ಷೆಯ ಮೂಲಕ ಇಚ್ಛಾಶಕ್ತಿಯ ವೇಗ ಸ್ಫೂರ್ತಿಗಳು ಆತ್ಮಕ್ಕೆ ಅಧೀನವಾಗಿ ಫಲಿಸುತ್ತವೆಯೋ ಅದೇ ಶಿಕ್ಷಣ ಎನಿಸುತ್ತದೆ. ಈ ಹಿನ್ನೆಲೆಯಲ್ಲಿ ಮನುಷ್ಯನನ್ನು ಯಂತ್ರವನ್ನಾಗಿಸುವ ಶಿಕ್ಷಣ ನಿಜವಾದ ಶಿಕ್ಷಣವಲ್ಲ, ಶಿಕ್ಷಣವು ಅನುಭವದ ಶಿಕ್ಷಣವಾಗಬೇಕು. ಅಂದರೆ ಯಾವುದೆ ರೀತಿಯ ಸಮಸ್ಯೆಗಳು ಉಂಟಾದರೂ ಮೊದಲಿಗೆ ಆ ಸಮಸ್ಯೆಗಳನ್ನು ಹೃದಯದಿಂದ ಪರಿಭಾವಿಸಬೇಕು, ಅನುಭವಿಸಬೇಕು. ಅನಂತರದಲ್ಲಿ ಅದರ ಪರಿಹಾರಕ್ಕೆ ಲಭ್ಯವಿರುವ ಅನುಷ್ಠಾನ ಯೋಗ್ಯವಾದ ವಾಸ್ತವಿಕ ಉತ್ತರವನ್ನು ಕಂಡುಕೊಳ್ಳಬೇಕು. ಅದನ್ನು ಕಾರ್ಯಗತಗೊಳಿಸುವ ಇಚ್ಛಾಶಕ್ತಿಯನ್ನು ತೋರಬೇಕು. ಹಾಗಾಗಿ ಬದುಕಿನ ಗುಟ್ಟು ಸಂತೋಷಪಡುವುದಲ್ಲ ಅದರ ಅನುಭವದ ಮೂಲಕ ಶಿಕ್ಷಣ ಪಡೆಯುವುದು ಎಂದಿದ್ದಾರೆ.

ನಿಸರ್ಗದಲ್ಲಿರುವ ಒಂದು ಮರವು ಸ್ವಾಭಾವಿಕವಾಗಿ ಪ್ರಕೃತಿಯಲ್ಲಿನ ಸತ್ವವನ್ನು ಹೀರಿಕೊಂಡು ಬೆಳೆಯುವಂತೆ ಮಗು ಕೂಡ ಪ್ರಕೃತಿಯ ಒಡನಾಟದಲ್ಲಿಯೇ ತನ್ನ ಕಲಿಕೆಗಳನ್ನು ಆರಂಭಿಸಬೇಕು.

> ನನ್ನ ದೃಷ್ಟಿಯಲ್ಲಿ ಶಿಕ್ಷಣದ ಸಾರವಿರುವುದು ಮನಸ್ಸಿನ ಏಕಾಗ್ರತೆಯಲ್ಲಿ, ಕೇವಲ ವಿಷಯ ಸಂಗ್ರಹಣೆಯಲಿಲ್ಲ. ನಾನು ಮತ್ತೆ ಶಿಕ್ಷಣವನ್ನು ಕಲಿಯುವುದಾದರೆ, ಅಂಕಿ–ಅಂಶಗಳನ್ನು, ಸಂಗತಿಗಳನ್ನು ಕಲಿಯುವುದಿಲ್ಲ. ಏಕಾಗ್ರತೆ ಮತ್ತು ನಿರ್ಲಿಪ್ತ ಮನೋಭಾವವನ್ನು ನಾನು ರೂಢಿಸಿಕೊಳ್ಳುವೆ. ಅನಂತರ ಉತ್ಕೃಷ್ಟ ಸಾಧನೆಯ ಮೂಲಕ ಇಚ್ಛಾನುಸಾರ ವಿಷಯವನ್ನು ಸಂಗ್ರಹಿಸುವೆ[೧೮] ಎಂದಿದ್ದಾರೆ.

ಈ ಬಗೆಯಲ್ಲಿ ಶಿಕ್ಷಣದ ಅರ್ಥವನ್ನು ವಿಸ್ತರಿಸಿರುವ ಸ್ವಾಮಿ ವಿವೇಕಾನಂದರು ಅದನ್ನು ಸಾಮಾನ್ಯ ಜನರಿಗೆ ನೀಡಬೇಕೆಂದು ಬಯಸುತ್ತಾರೆ. ಅಲ್ಲದೇ, ಮಿಲಿಯಗಟ್ಟಲೆ ಜನ ಹಸಿವು ಮತ್ತು ಅಜ್ಞಾನದಲ್ಲಿ ಬದುಕುತ್ತಿರುವವರೆಗೂ, ಅವರ ದುಡ್ಡಿನಿಂದ ಶಿಕ್ಷಣ ಪಡೆದು, ಅವರ ಬಗ್ಗೆ ಒಂದಿಷ್ಟೂ ಗಮನವನ್ನು ನೀಡದಿರುವ ಪ್ರತಿಯೊಬ್ಬರು ವಂಚಕರು. ಹೀನ ಸ್ಥಿತಿಯಲ್ಲಿರುವ ನಮ್ಮ ಬಡವರಿಗೆ ನಾವು ಮಾಡಬೇಕಾದ ಮುಖ್ಯ ಕರ್ತವ್ಯವೆಂದರೆ ಅವರಿಗೆ ವಿದ್ಯೆಯನ್ನು ಕೊಟ್ಟ ಅವರನ್ನು ಪುನಃ ಮಾನವರನ್ನಾಗಿ ಮಾಡುವುದು ಎನ್ನುವ ಆಶಯಗಳನ್ನು ಹೊಂದಿದ್ದರು. ಅಲ್ಲದೇ ಬಡವರಿಗೆ ಅವರಿರುವಲ್ಲಿಯೇ ಶಿಕ್ಷಣ ದೊರಕಬೇಕೆಂದು, ವ್ಯಾಪಾರ, ವ್ಯವಹಾರ, ವ್ಯವಸಾಯ ಮುಂತಾದ ವಿಷಯಗಳಲ್ಲಿ ಶಿಕ್ಷಣ ನೀಡಬೇಕು ಎಂದು ಬಯಸಿದ್ದರು.

> ಪರಹಿತವನ್ನು ಬಯಸುವ, ಸ್ವಾರ್ಥಶೂನ್ಯರಾದ ಕೆಲವು ಸನ್ಯಾಸಿಗಳು ಗ್ರಾಮ ಸಂಚಾರ ಹೊರಟು ವಿದ್ಯಾ ಪ್ರಚಾರ ಮಾಡುತ್ತ, ಭೂಪಟ, ಮಾಯಾದೀಪ, ಕೃತಕಗೋಳ ಇವೇ ಮೊದಲಾದ ಉಪಕರಣಗಳ ಮೂಲಕ, ಉತ್ತಮರಿಂದ ಹಿಡಿದು ಚಂಡಾಲರವರೆವಿಗೆ ತಿಳುವಳಿಕೆಯನ್ನು ಹರಡುತ್ತ, ಸಕಲರ ಮೇಲ್ಮೆಗಾಗಿ ಪ್ರಯತ್ನಪಟ್ಟಲ್ಲಿ ಅದರಿಂದ ಕಾಲಾನುಕಾಲಕ್ಕೆ ಕಲ್ಯಾಣ ಉಂಟಾಗದೇ?[೧೯] ಎಂದು ಪ್ರಶ್ನಿಸಿದ್ದಾರೆ.

ಈ ರೀತಿಯಲ್ಲಿ ಶಿಕ್ಷಣದ ಅರ್ಥ ಮತ್ತು ಮಹತ್ವಗಳನ್ನು ವಿಸ್ತರಿಸಿದ ಸ್ವಾಮಿ ವಿವೇಕಾನಂದ ಅವರು ಶಿಕ್ಷಣದ ಒಳಿತು ಕೆಡಕುಗಳನ್ನು ವಿಶ್ಲೇಷಿಸಿದ್ದಾರೆ.

ತಮ್ಮ ಕಾಲದಲ್ಲಿ ಪ್ರಚುರಗೊಳ್ಳುತ್ತಿದ್ದ ಇಂಗ್ಲಿಷ್ ಶಿಕ್ಷಣ ಪದ್ಧತಿಯು ಭಾರತೀಯ ಸಂಸ್ಕೃತಿಗೆ ಹೊಂದಿಕೊಳ್ಳಲಾರದ ಶಿಕ್ಷಣ ಪದ್ಧತಿ. ಅದು ಬಾಹ್ಯ ಬದಲಾವಣೆಯನ್ನು ತರುತ್ತದೆಯೇ ಹೊರತು ಆಂತರಿಕ ಪರಿವರ್ತನೆಯನ್ನು ಉಂಟುಮಾಡುವುದಿಲ್ಲ ಎಂದು ತೀವ್ರವಾಗಿ ಟೀಕಿಸಿದ್ದಾರೆ. ದಾರ್ಶನಿಕ ಸ್ವಾಮಿ ವಿವೇಕಾನಂದರ ಈ ಶೈಕ್ಷಣಿಕ ಚಿಂತನೆಗಳ ಸಾರವನ್ನು ಒಟ್ಟುಗೂಡಿಸಿದರೆ ಈ ಕಾಲಮಾನದ ಕೆಲವು ಶೈಕ್ಷಣಿಕ ಬಿಕ್ಕಟ್ಟುಗಳಿಗೆ ಪರಿಹಾರ ದೊರೆಯುತ್ತದೆ. ಶಿಕ್ಷಣದಲ್ಲಿ ಆಧ್ಯಾತ್ಮಿಕತೆಯ ಅಗತ್ಯವನ್ನು ತಿಳಿಸಿದ ಅವರು ಮಾನವನ ಜ್ಞಾನದ ಉನ್ನತಿಯ ಜತೆಗೆ ಆತ್ಮದ ಉದ್ಧಾರವನ್ನು ಕೇಂದ್ರವಾಗಿಸಿದ್ದಾರೆ. ವ್ಯಕ್ತಿತ್ವದ

ವಿಕಸನವೇ ಶಿಕ್ಷಣದ ಮೂಲ ಉದ್ದೇಶ ಎನ್ನುವ ಮೂಲಕ ಶಿಕ್ಷಣದ ಅರ್ಥವನ್ನು ವಿಸ್ತರಿಸಿದ್ದಾರೆ.

ಸಮಾಜದಲ್ಲಿನ ದೀನ ದಲಿತರು, ಕೆಳವರ್ಗದವರು ಮತ್ತು ದರಿದ್ರ ನಾರಾಯಣರಿಗೆ ಶಿಕ್ಷಣ ನೀಡುವುದರ ಮೂಲಕ ಅವರನ್ನು ಆ ಸ್ಥಿತಿಯಿಂದ ಹೊರತರಬೇಕು. ಅಲ್ಲದೇ ಪ್ರತಿಯೊಬ್ಬನು ತನ್ನ ಸುತ್ತಲಿನವರ ಏಳಿಗೆಗಾಗಿ ತನ್ನ ಗಳಿಕೆಯ ತುಸು ಭಾಗವನ್ನಾದರೂ ವ್ಯಯ ಮಾಡಬೇಕು ಎಂದಿದ್ದಾರೆ. ಶಿಕ್ಷಣ ದುರ್ಬಲರಿಗೆ ಒಂದು ಬಿಡುಗಡೆಯ ಮಾರ್ಗವೆಂಬುದನ್ನು ವಿವರಿಸಿದರು.

ಪುಸ್ತಕದ ಓದು ಮಾತ್ರ ಶಿಕ್ಷಣವೆನಿಸದೆ ಅದರಿಂದ ಆತ್ಮೋದ್ಧಾರದ ಜತೆಗೆ ಮಾನವನ ಬದುಕಿಗೆ ಅಗತ್ಯವಾದಷ್ಟು ಗಳಿಕೆಯಾಗಬೇಕು. ಅದಕ್ಕಾಗಿ ಆಧುನಿಕ ಹಾಗೂ ಔದ್ಯೋಗಿಕ ಶಿಕ್ಷಣದ ಅಗತ್ಯತೆಯನ್ನು ಹೇಳಿದ್ದಾರೆ. ಅಲ್ಲದೇ ಹೊಸಕಾಲದ ಜ್ಞಾನವನ್ನು ಆಂಗ್ಲ ಭಾಷೆಯನ್ನು ಪಾಶ್ಚಾತ್ಯರ ವಿಜ್ಞಾನಗಳನ್ನು ಓದಿಕೊಳ್ಳಬೇಕು. ತಾನು ಉದ್ಯೋಗ ಪಡೆದು ಇತರರಿಗೂ ಉದ್ಯೋಗ ನೀಡುವ ಸಾಮರ್ಥ್ಯವನ್ನು ಗಳಿಸಿಕೊಳ್ಳಬೇಕು. ಶಿಕ್ಷಣ ಇದಕ್ಕೆ ನೆರವಾಗಬೇಕೆಂದಿದ್ದಾರೆ.

ನಮಗೆ ಅಗತ್ಯವಾದ ಶಿಕ್ಷಣ ಕುರಿತು ಚಿಂತಿಸುವ ಸ್ವಾಮಿ ವಿವೇಕಾನಂದರೂ ಇಂಗ್ಲಿಷ್ ಶಿಕ್ಷಣ ಪದ್ಧತಿಯನ್ನು ಕಟುವಾಗಿ ಟೀಕಿಸಿದ್ದಾರೆ. ಅದು ನಿಷೇಧಮಯ ವಿದ್ಯಾಭ್ಯಾಸ ಪದ್ಧತಿ. ಅಲ್ಲದೇ ಪುರುಷ ಸಿಂಹರನ್ನಾಗಿ ಮಾಡುವ ವಿದ್ಯಾಭ್ಯಾಸ ಕ್ರಮವಲ್ಲ ಎಂದಿದ್ದಾರೆ. ಅದಕ್ಕಾಗಿ ಯುವಕರು ಶಿಕ್ಷಿತರಾಗಿ ಇತರರಿಗೆ ಶಿಕ್ಷಣ ದೊರಕಿಸುವಲ್ಲಿ ನೆರವಾಗಬೇಕೆಂದು ಬಯಸುತ್ತಾರೆ.

> ಇಂಗ್ಲಿಷ್ ಶಿಕ್ಷಣ ಪದ್ಧತಿಯು ವ್ಯಕ್ತಿ ನಿರ್ಮಾಣಕಾರಿಯಾದ ವಿದ್ಯಾಭ್ಯಾಸವಲ್ಲ ಅದು ಸಂಪೂರ್ಣ ನಕಾರಾತ್ಮಕವಾದ ವಿದ್ಯಾಭ್ಯಾಸ ಪದ್ಧತಿ. ಇಂಥ ವಿದ್ಯಾಭ್ಯಾಸವನ್ನು ಪಡೆದು ಕಳೆದು ಐವತ್ತು ವರ್ಷಗಳ ಅವಧಿಯಲ್ಲಿ ಮದ್ರಾಸು, ಮುಂಬೈ ಮತ್ತು ಬಂಗಾಳ ಪ್ರಾಂತ್ಯಗಳಲ್ಲಿ ಸ್ವಂತ ಪ್ರತಿಭೆಯುಳ್ಳ ಒಬ್ಬನೇ ಒಬ್ಬ ವ್ಯಕ್ತಿಯೂ ನಿರ್ಮಾಣಗೊಂಡಿಲ್ಲ. ಇಂಗ್ಲಿಷ್ ಶಿಕ್ಷಣ ಹಳ್ಳಿಗರನ್ನು ನಗರಕ್ಕೆ ಅಟ್ಟುತ್ತದೆ. ಅದು ಸೋದರ ಭಾವವನ್ನು, ಪ್ರತಿ ಸಹಾನುಭೂತಿಯನ್ನು ಬೆಳೆಸದ ಶಿಕ್ಷಣ[೨೦].

ಎಂದು ಹೇಳಿದ್ದಾರೆ. ಕೇವಲ ಪಠ್ಯಪುಸ್ತಕಗಳ ಓದಿಗೆ ಸೀಮಿತಗೊಳಿಸದೆ ಕರಕುಶಲತೆಗಳನ್ನು ಕಲಿಸುವ ಸ್ವಾವಲಂಬಿಯನ್ನಾಗಿ ಮಾಡುವ ಶಿಕ್ಷಣ ಅವಶ್ಯಕವಾಗಿದೆ. ಭಾರತದಂತಹ ದೇಶದ ದುಃಸ್ಥಿತಿಗೆ ಶಿಕ್ಷಣವು ಪ್ರಮುಖ ಕಾರಣವಾಗಿದೆ. ಕೆಳವರ್ಗದವರಿಗೆ ನಾವು ವ್ಯಕ್ತಿತ್ವ ರೂಢಿಸಿಕೊಳ್ಳುವಂತಹ ಮತ್ತು ಸುತ್ತಲಿನ ಸಮಾಜದಲ್ಲಿ ನಡೆಯುತ್ತಿರುವ

ಸಂಗತಿಗಳನ್ನು ಅರಿಯಲು ಹಾಗೂ ಆತ್ಮೋದ್ಧಾರದ ದಾರಿಯನ್ನು ಕಂಡುಕೊಳ್ಳಲು ಶಿಕ್ಷಣ ನೀಡಬೇಕು ಎನ್ನುತ್ತ ಪರಭಾಷೆಯ ಶಿಕ್ಷಣದ ತೊಡಕುಗಳನ್ನು ವಿವರಿಸುತ್ತಾರೆ.

ಪರಭಾಷೆಯಲ್ಲಿ ಮತ್ತೊಬ್ಬರ ಭಾವನೆಗಳನ್ನು ಕಂಠಪಾಠ ಮಾಡಿ, ಅದರಿಂದ ನಿಮ್ಮ ಮೆದುಳನ್ನು ತುಂಬಿಕೊಂಡು ವಿಶ್ವವಿದ್ಯಾನಿಲಯದ ಪದವಿಗಳಿಂದ ನೀವೇ ವಿದ್ಯಾವಂತರೆಂದು ತಿಳಿದಿದ್ದೀರಿ. ಇದು ಶಿಕ್ಷಣವೇ? ಕಣ್ಣು ತೆರೆದು ನೋಡಿ 'ಅನ್ನಕ್ಕೆ ನೆಲೆವೀಡೆನಿಸಿದ ಈ ಭಾರತ ದೇಶದಲ್ಲಿ ಒಪ್ಪೊತ್ತಿನ ಕೂಳಿಗಾಗಿ ಏಳುತ್ತಿರುವ ಹೃದಯ ವಿದ್ರಾವಕ ಕೂಗನ್ನು ಕೇಳಿ ನಿಮ್ಮ ಶಿಕ್ಷಣ ಅನುದಿನ ಜೀವನದ ಹೋರಾಟಕ್ಕೆ ಅಗತ್ಯವಾದ ಸಲಕರಣೆಗಳನ್ನು ಸಾಧಾರಣ ಜನತೆಗೆ ಒದಗಿಸಲಾರದೋ ಶೀಲಶಕ್ತಿಯನ್ನು ಹೊರಹೊಮ್ಮಿಸಲಾರದೋ, ಸಿಂಹ ಸದೃಶ ಧೈರ್ಯವನ್ನು ಹಾಗೂ ಉದಾರ ಚಿತ್ತ ಮನೋಭಾವವನ್ನು ರೂಢಿಸಲಾರದೋ, ಅಂತಹ ವಿದ್ಯೆಯಿಂದ ಪ್ರಯೋಜನವಾದರೂ ಏನು?' ಎಂದು ಪ್ರಶ್ನಿಸುತ್ತಾರೆ. ಶಿಕ್ಷಣ ನೌಕರಿಯನ್ನು ಗಿಟ್ಟಿಸಲಿಕ್ಕೆ ಸಾಧನವಾದರೆ ಸಾಲದು, ಅದು ಬದುಕನ್ನು ಸಾಕ್ಷಾತ್ಕಾರಗೊಳಿಸಬೇಕು ಎನ್ನುತ್ತಾರೆ. ಕಲ್ಕತ್ತಾದ ಎಂ.ಇ. ಶಾಲೆಯ ಸಮಾರಂಭದಲ್ಲಿ ಭಾಗವಹಿಸಿದ್ದ ವಿವೇಕಾನಂದರು ತಮ್ಮ ಭಾಷಣದಲ್ಲಿ

> ಆಧುನಿಕ ವಿದ್ಯಾರ್ಥಿಗಳು ಕಾರ್ಯಶೀಲರಾಗಿಲ್ಲ. ಅವರು ನಿಸ್ಸಹಾಯಕರು. ಇಂದಿನ ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧತಿಯು ಕೇವಲ ಪುಸ್ತಕ ಜ್ಞಾನ ಪ್ರಧಾನವಾದದ್ದು ನಮ್ಮ ವಿದ್ಯಾರ್ಥಿಗಳಿಗೆ ಕುಶಲಕಲೆಗಳನ್ನು, ಕೈಕೆಲಸವನ್ನು ಬೋಧಿಸಲಾಗುತ್ತಿಲ್ಲ. ಆದ್ದರಿಂದ ಅವರಿಗೆ ತಮ್ಮ ಕಂಗಳನ್ನು, ತಮ್ಮ ಕೈಗಳನ್ನು ಬಳಸುವುದು ಹೇಗೆಂಬುದೇ ತಿಳಿಯದು. ತಾವೇ ಸ್ವತಃ ಆಲೋಚಿಸುವುದು ಹೇಗೆ ಮತ್ತು ತಮ್ಮ ಕಾಲಿನ ಮೇಲೆ ನಿಂತುಕೊಳ್ಳುವುದು ಹೇಗೆ ಎಂಬುದನ್ನು ಅವರಿಗೆ ತಿಳಿಸಿಕೊಡಬೇಕು.[೨೧] ಎಂದಿದ್ದಾರೆ.

ಸ್ವಾಮಿ ವಿವೇಕಾನಂದರು ಆಧುನಿಕ ವಿದ್ಯಾಭ್ಯಾಸ ಪಡೆದ ತರುಣ ಸಮುದಾಯವನ್ನು ಅವರು ಕಲಿತ ವಿದ್ಯೆಯ ಸಾರ್ಥಕತೆಯನ್ನು ಕಂಡುಕೊಳ್ಳುವಂತೆ ಎಚ್ಚರಿಸುತ್ತಾರೆ. ವಿದ್ಯಾಭ್ಯಾಸದ ಗುರಿ ಏನು? ಎಂದು ಪ್ರಶ್ನೆ ಮಾಡುತ್ತ ಗುಮಾಸ್ತಗಿರಿ, ಒಬ್ಬ ವಕೀಲನಾಗುವುದು ಹೆಚ್ಚೆಂದರೆ ಡೆಪ್ಯುಟಿ ಮ್ಯಾಜಿಸ್ಟ್ರೇಟ್ ಆಗುವುದು. ಇವೆಲ್ಲ ಒಂದೊಂದು ಬಗೆಯ ಗುಲಾಮಗಿರಿ ಇದರಿಂದ ದೇಶಕ್ಕೆ ಯಾವುದೇ ರೀತಿಯ ಸಾಧನೆಯಾಗುವುದಿಲ್ಲ. ಅದಕ್ಕಾಗಿ ನೀವು ಪಡೆದಿರುವ ವಿದ್ಯೆಯಿಂದ ಇತರರಿಗೆ ಆಗಬಹುದಾದ ಪ್ರಯೋಜನಗಳನ್ನು ತಿಳಿಯಿರಿ. ಜತೆಗೆ ಪರದೇಶದವರ ಅಧೀನಕ್ಕೆ ಒಳಪಡದೆ ನಮ್ಮದೇ ಆದ ಹಲವು ಶಾಸ್ತ್ರಗಳನ್ನು ಓದಿ, ಕೈಗಾರಿಕೆಯನ್ನು ಅಭಿವೃದ್ಧಿಪಡಿಸುವಂತಹ ಉದ್ಯೋಗಕ್ಕೆ ಪೂರಕವಾದ ವಿಷಯಗಳನ್ನು ಕಲಿಯಬೇಕು. ಉದ್ಯೋಗಗಳನ್ನು ಹುಡುಕಿಕೊಂಡು ಹೋಗುವುದಕ್ಕಿಂತ ತಮಗೆ ಸಾಕಾಗುವಷ್ಟನ್ನು ತಾವೇ ಸಂಪಾದಿಸಿ ಕಷ್ಟಕಾಲಕ್ಕೆ ಕೊಂಚ ಹಣವನ್ನು ಕೂಡಿಸುವುದಕ್ಕೆ ಅವರು ಕಲಿತ ವಿದ್ಯೆ ಅವರಿಗೆ ಸಹಾಯಕವಾಗಬೇಕು ಎನ್ನುತ್ತಾರೆ.

**ಮಹಾತ್ಮ ಗಾಂಧಿ (೧೮೬೯-೧೯೪೮)**

ಗಾಂಧೀಜಿ ಅವರು ದೇಶದ ಅಭಿವೃದ್ಧಿಗೆ ತಮ್ಮದೇ ಚಿಂತನೆಗಳಿರುವ ಶಿಕ್ಷಣ ಪದ್ಧತಿ ಬೇಕೆಂದು ಚಿಂತಿಸಿದ್ದರ ಫಲ 'ಮೂಲ ಶಿಕ್ಷಣ'. ಬ್ರಿಟಿಷರ ಶಿಕ್ಷಣ ಪದ್ಧತಿ ಭಾರತೀಯ ಪರಂಪರೆಯೊಡನೆ ಸಂಪರ್ಕವನ್ನು ಕಡಿದುಹಾಕಿತ್ತು. ಈ ದೋಷದಿಂದ ಪಾರಾಗಲು ಭಾರತಕ್ಕೆ ಅದರದೇ ಸುದೀರ್ಘ ಪರಂಪರೆಯ ಹಿನ್ನೆಲೆಯಲ್ಲಿ ಹೊಸ ಶಿಕ್ಷಣ ಪದ್ಧತಿಯ ಅನಿವಾರ್ಯತೆ ಇತ್ತು. ಇದನ್ನು ಗಾಂಧೀಜಿ ಅವರ 'ಮೂಲ ಶಿಕ್ಷಣ' ಪದ್ಧತಿಯು ಈಡೇರಿಸುವಲ್ಲಿ ಪ್ರಯತ್ನಿಸಿತು.

ಉತ್ತಮ ಶಿಕ್ಷಣದಿಂದ ಮಾತ್ರ ಭಾರತದ ಪುನರುಜ್ಜೀವನ ಸಾಧ್ಯ. ಆದರೆ, ಶಿಕ್ಷಣ ಪದ್ಧತಿ ದೇಶದ ಅವಶ್ಯಕತೆಗೆ ತಕ್ಕಂತೆ ಇಲ್ಲ. ಇದರಿಂದ ವಿದ್ಯಾವಂತರು ಮತ್ತು ಅವಿದ್ಯಾವಂತರ ನಡುವೆ ಗೋಡೆ ಸೃಷ್ಟಿಯಾಗಿದೆ. ವಿದ್ಯಾವಂತರು ವೃತ್ತಿ ಶಿಕ್ಷಣ ಲೋಪದಿಂದ ಹೆಚ್ಚಾಗಿ ನಿರುದ್ಯೋಗಿಗಳಾಗುತ್ತಿದ್ದಾರೆ ಮತ್ತು ದೈಹಿಕ ಶ್ರಮಕ್ಕೆ ಮನಗೊಡುತ್ತಿಲ್ಲ. ಹಳ್ಳಿಗಳಿಗೂ, ನಗರಗಳಿಗೂ ಇದರಿಂದ ಯಾವ ಪ್ರಯೋಜನವು ಆಗುತ್ತಿಲ್ಲ. ಇಂಗ್ಲಿಷ್ ಮಾಧ್ಯಮದ ಶಿಕ್ಷಣ ವ್ಯರ್ಥ ಮತ್ತು ಹಾನಿಕಾರಕವಾಗಿದೆ ಎಂಬುದು ಗಾಂಧೀಜಿಯವರ ಯೋಚನೆಯಾಗಿತ್ತು.

ಈ ಹಿನ್ನೆಲೆಯಲ್ಲಿ ಮೂಲ ಶಿಕ್ಷಣದ ಉದ್ದೇಶ, ಕಾರ್ಯಯೋಜನೆ, ಸ್ವರೂಪ ಮುಂತಾದ ವಿಚಾರಗಳನ್ನು ೧೯೩೭ರ ಅಕ್ಟೋಬರ್ ೨೨, ೨೩ರಂದು ವರ್ಧಾದಲ್ಲಿ ನಡೆದ ರಾಷ್ಟ್ರೀಯ ಶಿಕ್ಷಣ ಸಮ್ಮೇಳನದಲ್ಲಿ ಅದರ ಅಧ್ಯಕ್ಷರೆ ಆಗಿದ್ದ ಗಾಂಧೀಜಿ ಅವರು ಮಂಡಿಸಿದರು. ದೇಶದ ಶೈಕ್ಷಣಿಕ ವ್ಯವಸ್ಥೆ ಪುನರ್ ರಚನೆಯಾಗಬೇಕೆಂಬ ಉದ್ದೇಶದಿಂದ ಗಾಂಧೀಜಿ ಅವರು ಮಂಡಿಸಿದ ಶೈಕ್ಷಣಿಕ ಯೋಜನೆಯಲ್ಲಿ ಈ ಕೆಳಗಿನ ವಿಚಾರಗಳಿದ್ದವು.

- ಪ್ರಾಥಮಿಕ ಶಿಕ್ಷಣದ ಅವಧಿ ಕನಿಷ್ಠ ಏಳು ವರ್ಷಗಳಾಗಿರಬೇಕು. ಮೆಟ್ರಿಕ್ಯುಲೇಷನ್ ಓದಿನ ಸಾಮಾನ್ಯ ಜ್ಞಾನ ಈ ಹಂತದಲ್ಲಿಯೇ ದೊರಕಬೇಕು. ಜೊತೆಗೆ ಒಂದು ಉಪಯುಕ್ತ ಉದ್ಯೋಗದ ಕಲಿಕೆ ಇರಬೇಕು. ಇಂಗ್ಲಿಷ್ ಕಲಿಕೆ ಇರಬಾರದು.
- ವಿದ್ಯಾರ್ಥಿ ಕಲಿಯುವ ಉದ್ಯೋಗ ಆತನಿಗೆ ಎರಡು ರೀತಿ ಅನುಕೂಲವಾಗಬೇಕು-
  - ಅ) ವಿದ್ಯಾರ್ಥಿ ಪರಿಶ್ರಮದಿಂದ ಉತ್ಪತ್ತಿ ಮಾಡಿದುದು ಅವನ ಶಿಕ್ಷಣದ ಶುಲ್ಕಕ್ಕೆ ಆಗಬೇಕು.
  - ಆ) ಇದರ ಮೂಲಕ ವಿದ್ಯಾರ್ಥಿಯ ಪೂರ್ಣ ಮಾನವೀಯತೆ ವಿಕಾಸವಾಗಬೇಕು.
- ಪ್ರೌಢ ಶಿಕ್ಷಣವನ್ನು ಖಾಸಗಿ ಉದ್ಯಮಕ್ಕೆ ಬಿಡಬೇಕು. ವಿಶ್ವವಿದ್ಯಾನಿಲಯಗಳೇ ಅಂತಿಮವಾಗಿ ಶಿಕ್ಷಣ ಕ್ಷೇತ್ರದ ಮೇಲ್ವಿಚಾರಣೆ ನಡೆಸಬೇಕು. ಸರ್ಕಾರವು ಇದರ ಜವಾಬ್ದಾರಿ ಹೊರಬೇಕು.

ಮೇಲಿನ ಈ ವಿಚಾರಗಳನ್ನು ಕುರಿತು ಸಮ್ಮೇಳನ ಈ ತೀರ್ಮಾನಗಳನ್ನು ಅಂಗೀಕರಿಸಿತು–

- ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಏಳು ವರ್ಷಗಳ ಕಾಲಾವಧಿಯವರೆಗೆ ರಾಷ್ಟ್ರವ್ಯಾಪಿಯಾಗಿ ನೀಡಬೇಕು.
- ಶಿಕ್ಷಣ ಮಾಧ್ಯಮ ಮಾತೃಭಾಷೆ ಆಗಿರಬೇಕು.
- ಶಿಕ್ಷಣದ ಅವಧಿಯು ಪೂರ್ಣವಾಗಿ ಯಾವುದಾದರೂ ಲಾಭದಾಯಕ ಕಸುಬನ್ನು ಕೇಂದ್ರವಾಗಿರಿಸಿಕೊಳ್ಳಬೇಕು ಮತ್ತು ಈ ಕಸುಬಿಗೆ ಹೊಂದಿಕೊಂಡಂತೆ ಮಕ್ಕಳಲ್ಲಿ ಇರಬೇಕಾದ ಇತರ ಎಲ್ಲ ಬೆಳವಣಿಗೆಗಳು ಇರಬೇಕು.

ಈ ತೀರ್ಮಾನಗಳನ್ನು ಪರಿಶೀಲಿಸಿ ಅವುಗಳನ್ನು ಸಮ್ಮೇಳನದ ಅಧ್ಯಕ್ಷರಿಗೆ ಸಲ್ಲಿಸುವಂತೆ ಜಾಮಿಯ ಮಿಲಿಯ ಇಸ್ಲಾಮಿಯಾ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದ ಜಾಕಿರ್‌ಹುಸೇನ್ ಅವರ ಅಧ್ಯಕ್ಷತೆಯಲ್ಲಿ ಸಮಿತಿ ನೇಮಿಸಿ ವರದಿಯನ್ನು ಶಿಫಾರಸು ಮಾಡುವಂತೆ ತಿಳಿಸಲಾಯಿತು. ಈ ಸಮಿತಿಯ ಶಿಫಾರಸನ್ನು ೧೯೩೮ರ ಫೆಬ್ರವರಿಯಲ್ಲಿ ಹರಿಪುರದ ಕಾಂಗ್ರೆಸ್ ಅಧಿವೇಶನ ಪರಿಶೀಲಿಸಿ ಅದನ್ನು ಭಾರತೀಯ 'ರಾಷ್ಟ್ರೀಯ ಶಿಕ್ಷಣ ಯೋಜನೆ' ಎಂದು ಅಂಗೀಕರಿಸಿತು.

'ಮೂಲ ಶಿಕ್ಷಣ'ದ ಸ್ವರೂಪ ಮಕ್ಕಳ ಸರ್ವತೋಮುಖ ಬೆಳವಣಿಗೆಯ ದೃಷ್ಟಿಕೋನವನ್ನು ಹೊಂದಿತ್ತು. ಅಂದರೆ ಗಾಂಧೀಜಿ ಅವರ ಪ್ರಕಾರ ಶಿಕ್ಷಣವೆಂದರೆ ಮಗುವಿನ ದೇಹ, ಮನಸ್ಸು ಮತ್ತು ಆತ್ಮಗಳ ಉತ್ತಮ ಶಕ್ತಿಗಳನ್ನೆಲ್ಲ ಸರ್ವತೋಮುಖವಾಗಿ ವಿಕಾಸಗೊಳಿಸುವುದಾಗಿದೆ. ಈ ನಿಟ್ಟಿನಲ್ಲಿ ಅಕ್ಷರ ಕಲಿಕೆ ಮಾತ್ರ ಶಿಕ್ಷಣದ ಆರಂಭ ಅಥವಾ ಅಂತ್ಯವಾಗುವುದಿಲ್ಲ, ಅದೊಂದು ಸಾಧನ ಮಾತ್ರವಾಗಿದೆ. ಕೈ ಕಸುಬಿನ ಮೂಲಕ ಕಲಿಯುವ ಈ ಶಿಕ್ಷಣದ ಉದ್ದೇಶ ಉತ್ಪಾದನೆಯಲ್ಲ, ಇದು ವಿದ್ಯಾರ್ಥಿಗಳ ಬೌದ್ಧಿಕ ವಿಕಾಸಕ್ಕಾಗಿ ಆಗಿದೆ. ಏಳರಿಂದ ಹದಿನಾಲ್ಕರ ಒಳಗಿನ ವಯಸ್ಸಿನ ಮಕ್ಕಳನ್ನು ಉತ್ಪಾದಕ ಶ್ರಮದ ಮೂಲಕ ಅವರ ದೇಹ ಮತ್ತು ಮನಸ್ಸುಗಳನ್ನು ತರಬೇತು ಮಾಡಿದರೆ ಅವರು ಮತ್ತು ಆ ಶಾಲೆಗಳು ಸ್ವಾವಲಂಬನೆಯಾಗುತ್ತವೆ. ಸ್ವಾವಲಂಬನೆಯೇ ಈ ಶಿಕ್ಷಣದ ಗುರಿಯಲ್ಲ, ಅದು ಕೊನೆಯ ಫಲ. ಆದರೆ ಸ್ವಾವಲಂಬನೆಯೇ ಶಿಕ್ಷಣದ ದಕ್ಷತೆಯ ಪರೀಕ್ಷೆಯಾಗುತ್ತದೆ. ವಿದ್ಯಾರ್ಥಿಯು ತನ್ನ ಸಮಸ್ತ ಸಾಮರ್ಥ್ಯವನ್ನು ಉಪಯೋಗಿಸಲು ಕಲಿತಾಗ ಸ್ವಾವಲಂಬನೆ ತಾನೇ ಸಿದ್ಧಿಯಾಗುತ್ತದೆ. ಆದ್ದರಿಂದ ಗ್ರಾಮ ಮತ್ತು ಪಟ್ಟಣಗಳಲ್ಲಿನ ವಿದ್ಯಾರ್ಥಿಗಳು ತಮ್ಮ ಅವಶ್ಯಕತೆಗೆ ಸಂಬಂಧಿಸಿದ ಉದ್ಯೋಗಗಳ ಮೂಲಕ ಶಿಕ್ಷಣ ಪಡೆಯಬೇಕು ಎಂಬುದು ಇದರ ತಿರುಳಾಗಿದೆ. ನಮ್ಮ ಹುಡುಗರು ನಮ್ಮ ದೇಶದ, ಸಂಸ್ಕೃತಿಯ, ಪ್ರತಿಭೆಯ, ಸಭ್ಯತೆಯ ಪ್ರತಿನಿಧಿಗಳಾಗಬೇಕು. ಇದು ಸ್ವಾವಲಂಬಿಯಾದ ಪ್ರಾಥಮಿಕ ಶಿಕ್ಷಣದಿಂದ ಮಾತ್ರ ಸಾಧ್ಯವಾಗುತ್ತದೆ ಎನ್ನುವುದು ಗಾಂಧೀಜಿಯವರ ಚಿಂತನೆ.

ಗಾಂಧೀಜಿ ಅವರ ಮೂಲ ಶಿಕ್ಷಣದ ಈ ಉದ್ದೇಶಗಳನ್ನು ಜಾಕೀರ್ ಹುಸೇನ್ ಅವರ ಸಮಿತಿ ಒಪ್ಪಿದರೂ ಉದ್ಯೋಗಗಳು ಆರ್ಥಿಕ ಸ್ವಾವಲಂಬನೆ ತರುತ್ತವಾದರೂ, ಅವುಗಳು ಹೆಚ್ಚಾಗಿ ಬೋಧನಾ ಕ್ರಮವನ್ನು ಪ್ರೋತ್ಸಾಹಿಸುವಂತೆ ಇರಬೇಕು, ವಿದ್ಯಾರ್ಥಿಯ ಸಮಗ್ರ ಕಲಿಕೆ ಇದರ ಗುರಿಯಾಗಬೇಕು ಎಂದಿತು.

ಈ ಶಿಕ್ಷಣದ ಬಗ್ಗೆ ದೇಶದಲ್ಲಿ ಸದಭಿಪ್ರಾಯಗಳು ಬಂದರೂ ಅದಕ್ಕೆ ಸಾಕಷ್ಟು ಉತ್ತೇಜನ ದೊರಕಲಿಲ್ಲ. ೧೯೩೮ ಮತ್ತು ೧೯೪೦ರಲ್ಲಿ ಕೇಂದ್ರ ಶಿಕ್ಷಣ ಸಲಹಾ ಮಂಡಳಿ ಬಿ.ಜಿ ಖೇರ್ ಅವರ ಅಧ್ಯಕ್ಷತೆಯಲ್ಲಿ ಎರಡು ಸಮಿತಿಗಳನ್ನು ನೇಮಿಸಿ ಈ ಬಗ್ಗೆ ವರದಿ ಪಡೆಯಿತು. ಆ ವರದಿ ಮೂಲ ಶಿಕ್ಷಣದ ಉದ್ದೇಶಗಳೊಂದಿಗೆ, ಮೂಲ ಶಿಕ್ಷಣಕ್ಕೆ ೫ ವರ್ಷದ ಮಕ್ಕಳನ್ನು ಸೇರಿಸಬಹುದು, ೧೧ನೇ ವಯಸ್ಸಿನ ಅನಂತರ ವಿದ್ಯಾರ್ಥಿಗಳು ಇತರ ಪಾಠಶಾಲೆಗಳಿಗೆ ಹೋಗಲು ಅವಕಾಶ ನೀಡಬೇಕು, ಮೂಲ ಶಿಕ್ಷಣ ಪಡೆದವರಿಗೆ ಅವರ ಆಂತರಿಕ ಪರೀಕ್ಷೆಗಳ ಆಧಾರದ ಮೇಲೆ ಅರ್ಹತಾ ಪತ್ರವನ್ನು ನೀಡಬೇಕು ಎಂಬ ಮಾರ್ಪಡುಗಳನ್ನು ಸೇರಿಸಿತು. ಅವನ್ನು ಶಿಕ್ಷಣ ಮಂಡಳಿ ಅಂಗೀಕರಿಸಿತು. ಹೀಗೆ ಗಾಂಧೀಜಿಯವರು ರೂಪಿಸಿದ ಮೂಲ ಶಿಕ್ಷಣ ಭಾರತದಲ್ಲಿ ಕೆಲವು ಮಾರ್ಪಾಡುಗಳೊಂದಿಗೆ ನಯೀ ತಾಲೀಂ ಅಥವಾ ಹೊಸ ಶಿಕ್ಷಣ ಎಂಬ ಹೆಸರಿನಲ್ಲಿ ರೂಪುಗೊಂಡಿತು.

೧೯೩೭ರಿಂದ ಆರಂಭವಾದ ಈ ಶಿಕ್ಷಣ ಸುಮಾರು ಹತ್ತು ವರ್ಷಗಳವರೆಗೆ ಪ್ರಚಲಿತವಾಗಿತ್ತು. ಈ ಅವಧಿಯಲ್ಲಿ ಹೊಸದಾಗಿ ಮೂಲ ಶಿಕ್ಷಣದ ಶಾಲೆಗಳನ್ನು ಸ್ಥಾಪಿಸುವ ಮತ್ತು ಈಗಾಗಲೇ ಇದ್ದ ಶಾಲೆಗಳನ್ನು ಮೂಲ ಶಿಕ್ಷಣದ ಶಾಲೆಗಳಾಗಿ ಪರಿವರ್ತಿಸುವ ಕಾರ್ಯಗಳು ನಡೆದವು.

ಬ್ರಿಟಿಷರು ಜಾರಿಗೆ ತಂದ ಇಂಗ್ಲಿಷ್ ವಿದ್ಯಾಭ್ಯಾಸ ಇಲ್ಲಿನ ವಿದ್ಯಾರ್ಥಿಗಳನ್ನು ಅವರು ಕಲಿಯುವ ಪರಿಸರದಿಂದ ಬೇರೆ ಮಾಡಿದೆ. ಕಲಿತವರು ಮತ್ತು ಕಲಿಯದವರೆಂಬ ಎರಡು ಹೊಸ ಜಾತಿಗಳನ್ನು ಸೃಷ್ಟಿಸಿದೆ. ಇಂಥ ಗುಂಪುಗಳನ್ನು ರೂಪಿಸಿದ್ದು ಈ ಶಿಕ್ಷಣದ ಕೆಟ್ಟ ಪರಿಣಾಮಗಳಲ್ಲಿ ಒಂದಾಗಿದೆ. ಭಾರತೀಯ ಪರಂಪರೆಯಲ್ಲಿದ್ದ ಗುರು ಶಿಷ್ಯರ ಸಂಬಂಧವನ್ನು ಇದು ಕಡೆಗಣಿಸಿದೆ. ಇದು ಜನಸಾಮಾನ್ಯರ ಶಿಕ್ಷಣವನ್ನು ನಿರ್ಲಕ್ಷಿಸಿದೆ. ಅಲ್ಲದೇ ಇಲ್ಲಿನ ವಿದ್ಯಾರ್ಥಿಗಳಲ್ಲಿ ಬುದ್ಧಿ ವಿಕಾಸಕ್ಕೆ ಮಾತ್ರ ಬೆಲೆ ಕೊಟ್ಟಿದೆ ಎಂದು ಟೀಕಿಸಿದ್ದಾರೆ. ಶಿಕ್ಷಣ ಎಂಬುದು ಆಯಾ ದೇಶದ ಜಾಯಮಾನಕ್ಕೆ ಹೊಂದಿಕೊಂಡ ತನ್ನ ಸ್ವಂತ ಆಲೋಚನೆಗಳಿಂದ ರೂಪುಗೊಳ್ಳಬೇಕು ಎಂದು ನಂಬಿದ್ದ ಗಾಂಧೀಜಿ ಅವರು ಈ ಹೊಸ ಶಿಕ್ಷಣವನ್ನು ರೂಪಿಸಿದರು. ಈ ಮೂಲ ಶಿಕ್ಷಣ ಯೋಜನೆಯ ತತ್ವಗಳು ಮೂರು ರೀತಿಯವು. ಒಂದು ಉಚಿತವಾದ ಸಾರ್ವತ್ರಿಕವಾದ ಪ್ರಾಥಮಿಕ ಶಿಕ್ಷಣ ಮತ್ತು ಸೆಕೆಂಡರಿ ಶಿಕ್ಷಣ ನೀಡುವುದು, ಎರಡು ಮಾತೃಭಾಷೆಯ ಮೂಲಕ ಶಿಕ್ಷಣ ಒದಗಿಸುವುದು, ಮೂರು ಔದ್ಯೋಗಿಕ ಶಿಕ್ಷಣ ಕೊಡುವುದು.

ಈ ಹಿನ್ನೆಲೆಯಲ್ಲಿ ಇಂಗ್ಲಿಷ್ ಶಿಕ್ಷಣ ನಮಗೆ ಎಷ್ಟು ಬೇಕು ಎಂಬುದರ ಅರಿವು ಇರಬೇಕು. ಮೆಕಾಲೆಯ ಉದ್ದೇಶ ಯಾವುದೇ ಇರಲಿ ಪರಭಾಷೆಯಿಂದ ನಾವು ಗುಲಾಮರಾಗಿದ್ದೇವೆ. ಸ್ವಂತ ಮನೆಯಲ್ಲಿಯೇ ಪರಕೀಯರಾಗಿದ್ದೇವೆ. ಇದು ಒಂದು ರೀತಿಯ ಸಂಕೋಲೆಯೇ ಆಗಿದೆ ಎಂಬ ವಿವೇಕದಿಂದ ಭಾರತಕ್ಕೆ ಹೊಸ ಶಿಕ್ಷಣ ನೀತಿಯನ್ನು 'ಮೂಲ ಶಿಕ್ಷಣ' ಪರಿಚಯಿಸಿತು.

ಮಾತೃಭಾಷೆಯ ಸಮರ್ಪಕ ಶಿಕ್ಷಣವೇ ಎಲ್ಲ ಶಿಕ್ಷಣಕ್ಕೂ ಅಡಿಗಲ್ಲಾಗುತ್ತದೆ. ಪರಿಣಾಮಕಾರಿಯಾಗಿ ಮಾತನಾಡುವ ಶಕ್ತಿ, ಸ್ಪಷ್ಟವಾಗಿಯೂ ನಿರ್ದಿಷ್ಟವಾಗಿಯೂ ಓದಿ ಬರೆಯುವ ಶಕ್ತಿ ಇಲ್ಲದಿದ್ದರೆ, ಖಚಿತ ಆಲೋಚನೆ ಮತ್ತು ಅಭಿವ್ಯಕ್ತಿಗಳಲ್ಲಿ ಸ್ಪಷ್ಟತೆ ಸಾಧ್ಯವಾಗುವುದಿಲ್ಲ. ಭಾಷೆ ಮಗುವಿಗೆ ವೈಭವಪೂರ್ಣ ಪರಂಪರೆಯ ಪರಿಚಯವನ್ನು ಮಾಡಿಕೊಡುವ ಮಾಧ್ಯಮ. ಆದ್ದರಿಂದ ಉತ್ತಮ ನೈತಿಕ ಮೌಲ್ಯಗಳನ್ನು ಬೆಳೆಸುವುದರ ಜೊತೆಗೆ ಅದನ್ನು ಸಮಾಜ ಶಿಕ್ಷಣಕ್ಕೂ ಮೌಲಿಕವಾದ ಮಾಧ್ಯಮವಾಗಿಸಬಹುದು. ಇದು ಮಗುವಿನ ಸೌಂದರ್ಯಪ್ರಜ್ಞೆ ಮತ್ತು ವಿಮರ್ಶಾತ್ಮಕ ಶಕ್ತಿಯ ವಿಕಾಸಕ್ಕೆ ಸಹಜ ಮಾರ್ಗವಾಗುತ್ತದೆ. ಸರಿಯಾದ ಮಾರ್ಗವನ್ನು ಅನುಸರಿಸಿದರೆ ಸಾಹಿತ್ಯ ಅಧ್ಯಯನ ಆನಂದದ, ಸೃಜನಾತ್ಮಕ ಅಭಿವ್ಯಕ್ತಿಯಾಗಿ ಪರಿಣಮಿಸುತ್ತದೆ. ಆದ್ದರಿಂದ ಮಾತೃಭಾಷೆಯೇ ಶಿಕ್ಷಣದ ಮಾಧ್ಯಮ ಆಗಬೇಕೆಂದು 'ಮೂಲ ಶಿಕ್ಷಣ' ಪ್ರಬಲವಾಗಿ ಪ್ರತಿಪಾದಿಸಿದೆ. ನಮ್ಮ ಭಾಷೆ ನಮ್ಮದೇ ಪ್ರತಿಬಿಂಬ. ನಮ್ಮ ವಿಚಾರ ಪ್ರಕಟಣೆಗೆ ನಮ್ಮ ಭಾಷೆಗಳು ತೀರಾ ಅಶಕ್ತ ಎಂದರೆ ಆದಷ್ಟು ಬೇಗ ನಾವು ನಿರ್ನಾಮವಾಗುವುದೇ ಮೇಲು ಎನ್ನುವ ಗಾಂಧೀಜಿ 'ಭಾಷೆಯನ್ನು ಕಲಿಯುವುದೆಂದರೆ ಜ್ಞಾಪಕ ಶಕ್ತಿಯನ್ನು ಬೆಳೆಸುವುದು. ಹಾಗಾಗಿ ತಾಯಿಯ ಎದೆಗೆ ಅವುಚಿಕೊಳ್ಳುವಂತೆ ನಾವು ತಾಯಿನುಡಿಯನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕು. ಅದರಲ್ಲಿ ಎಷ್ಟೇ ಲೋಪ ದೋಷಗಳಿರಲಿ ಅದೊಂದೇ ನನಗೆ ಅಮೃತಪಾನ ಮಾಡಬಲ್ಲದು' ಎಂದು ನುಡಿದಿದ್ದಾರೆ.

'ನನಗೆ ನಿರಂಕುಶಾಧಿಕಾರವಿದ್ದಿದ್ದರೆ ಇವತ್ತೆ ಈ ಪರಭಾಷಾ ಮಾಧ್ಯಮದ ಶಿಕ್ಷಣವನ್ನು ನಿಲ್ಲಿಸಿಬಿಡುತ್ತಿದ್ದೆ. ಪಠ್ಯಪುಸ್ತಕಗಳಿಗಾಗಿ ನಾನು ಕಾಯುವುದಿಲ್ಲ. ಪರಿವರ್ತನೆಯಾದರೆ ಅವು ತಾವೇ ಬರುತ್ತವೆ. ಕೂಡಲೆ ಗುಣಪಡಿಸಬೇಕಾದ ರೋಗ ಇದು' ಎಂದಿರುವುದು ಇದುವರೆಗೂ ಪ್ರಾದೇಶಿಕ ಭಾಷೆಗಳನ್ನು ಮೂಲೆಗುಂಪು ಮಾಡುತ್ತಲೇ ಬಂದ ಇಂಗ್ಲಿಷ್ ಶಿಕ್ಷಣಕ್ಕೆ ನೀಡಿದ ಪ್ರತಿಕ್ರಿಯೆಯಾಗಿದೆ.

ಈ ಕಾರಣಗಳಿಂದಲೇ ಮೂಲ ಶಿಕ್ಷಣದ ಮೂಲಕ ರಾಷ್ಟ್ರಕ್ಕೆ ಒಂದು ಶಿಕ್ಷಣ ನೀತಿಯನ್ನು ನೀಡಿದ ಇವರು ಕಡ್ಡಾಯವಾಗಿ ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕು ಎನ್ನುತ್ತಾ ಅದರ ಅನುಕೂಲಗಳನ್ನು ವಿವರಿಸಿದ್ದಾರೆ. ಇದುವರೆಗೂ ಪ್ರಾದೇಶಿಕ ಭಾಷೆಗಳನ್ನು ಮೂಲೆಗುಂಪು ಮಾಡಿದ ಇಂಗ್ಲಿಷ್ ಶಿಕ್ಷಣವನ್ನು ತಿರಸ್ಕರಿಸಿ ರಾಷ್ಟ್ರದ ಸಂಪರ್ಕ ಭಾಷೆ

ಹಿಂದೂಸ್ಥಾನಿಯಾಗಬೇಕೆಂದು ಹೇಳಿದ್ದಾರೆ. ಹೀಗೆ ವಸಾಹತುಶಾಹಿಯ ಶಿಕ್ಷಣ ಪದ್ಧತಿಯಲ್ಲಿ ಕಲಿತ ಗಾಂಧೀಜಿ ತಾವು ಪಡೆದುಕೊಂಡ ಶಿಕ್ಷಣವೇ ಪೊಳ್ಳು ಎಂದು ಅದರ ಮಿತಿಗಳನ್ನು ವಿವರಿಸಿ ಅರ್ಥೈಸಲು ಪ್ರಯತ್ನಿಸಿದ್ದಾರೆ. ಇವರ ಚಿಂತನೆಗಳನ್ನು ಶಿಕ್ಷಣ ಎಂದರೇನು? ಸರಿಯಾದ ಶಿಕ್ಷಣ ಕ್ರಮ ಯಾವುದು? ಎಂಬ ಈ ಎರಡು ಆಯಾಮಗಳಲ್ಲಿ ಗುರುತಿಸಬಹುದಾಗಿದೆ.

ಶಿಕ್ಷಣ ಅಕ್ಷರ ಜ್ಞಾನ ಮಾತ್ರವಲ್ಲ. ಅಕ್ಷರ ಕಲಿಕೆಯೇ ಅದರ ಆರಂಭ ಅಥವಾ ಅಂತ್ಯವಲ್ಲ ಎಂಬುದು ಇವರ ನಿಲುವು. ಈ ಹಿನ್ನೆಲೆಯಲ್ಲಿ ನಮ್ಮ ದೇಶಕ್ಕೆ ಒಂದು ಹೊಸ ಶಿಕ್ಷಣ ಪದ್ಧತಿಯ ಆವಿಷ್ಕಾರಕ್ಕೆ ಇವರು ಪ್ರಯತ್ನಿಸಿದರು. 'ಮೆಕಾಲೆ' ಆಧುನಿಕ ಶಿಕ್ಷಣ ಪದ್ಧತಿಯನ್ನು ಯಾವ ಉದ್ದೇಶದಿಂದ ನಮ್ಮ ದೇಶಕ್ಕೆ ಅಳವಡಿಸಿದನೋ ಏನೋ ಅದರ ಪರಿಣಾಮ 'ಗುಲಾಮಗಿರಿ' ಎಂದು ನಂಬಿದ್ದ ಇವರು ಸರ್ಕಾರ ನೀಡುತ್ತಿರುವ ರಾಷ್ಟ್ರೀಯ ಶಿಕ್ಷಣದ ಮಾದರಿ ಬ್ರಿಟನ್, ಅಮೆರಿಕಗಳು ಪ್ರಯೋಗ ಮಾಡಿ ಬಿಟ್ಟ ಮಾದರಿಗಳಾಗಿವೆ. ಆದ್ದರಿಂದ ಭಾರತಕ್ಕೆ ಅದರದೇ ಆದ ಸುದೀರ್ಘ ಪರಂಪರೆಯ ಹಿನ್ನೆಲೆಯಲ್ಲಿ ಹೊಸ ಶಿಕ್ಷಣ ಪದ್ಧತಿಯ ಅನಿವಾರ್ಯತೆಯನ್ನು ಮನದಟ್ಟು ಮಾಡಿಸಲು ಪ್ರಯತ್ನಿಸಿದರು.

ಶಿಕ್ಷಣದ ವ್ಯಾಖ್ಯಾನ ಮಾಡುತ್ತಲೆ ವಸಾಹತು ಶಿಕ್ಷಣದಿಂದಾದ ಪರಿಣಾಮಗಳನ್ನು ಗುರುತಿಸುತ್ತಾರೆ. ಈ ಆಧುನಿಕ ಶಿಕ್ಷಣವು ಕಲಿಕೆ ಮತ್ತು ಬದುಕಿಗೆ ಪೂರಕ ಸಂಬಂಧವನ್ನು ಬೆಸೆಯುತ್ತಿಲ್ಲ. ಆದ್ದರಿಂದ ವಿದ್ಯಾಭ್ಯಾಸ ಎಷ್ಟು ಮೇಲೇರಿದರೆ ಅಷ್ಟು ಅದು ಬಾಳಿಗೆ ದೂರ. ಕೊನೆಗೆ ದೋಷಪೂರಿತವಾಗಿ, ನಿಷ್ಪ್ರಯೋಜಕ ಸಂಸ್ಕೃತಿಯಂತೆ ರೂಢಿಯಾಗುತ್ತದೆ ಎಂದು ಆತಂಕ ಪಟ್ಟ ಗಾಂಧಿ ದೇಶದ ಭವಿಷ್ಯ ನಿರ್ಮಾಣ ಶಿಕ್ಷಣದ ಬುನಾದಿಯನ್ನು ಅವಲಂಬಿಸಿದೆ ಎಂದಿದ್ದಾರೆ.

ಇಂದು ಭಾರತದಲ್ಲಿ ಶಿಕ್ಷಣ ಸಂಸ್ಥೆಗಳು ಬಳಸುತ್ತಿರುವ ಪದ್ಧತಿಯನ್ನು ಶಿಕ್ಷಣವೆಂಬ ಹೆಸರಿನಲ್ಲಿ ನಾನು ಕರೆಯಲಾರೆ. ಏಕೆಂದರೆ ಅದು ಮನುಷ್ಯರಲ್ಲಿನ ಉತ್ತಮಿಕೆಯನ್ನು ಹೊರ ಹೊಮ್ಮಿಸುತ್ತಿಲ್ಲ. ಈಗಿನ ಶಿಕ್ಷಣವನ್ನು ಮಾನಸಿಕ ವ್ಯಭಿಚಾರ ಎನ್ನುತ್ತೇನೆ. ಅದು ಸುಮ್ಮನೆ ಮನಸ್ಸಿಗೆ ವಿಚಾರಗಳನ್ನು ತುಂಬುತ್ತದೆ ಅಷ್ಟೆ ಎಂದು ನಿರ್ದಾಕ್ಷಿಣ್ಯವಾಗಿ ವಸಾಹತು ಶಿಕ್ಷಣ ಪದ್ಧತಿಯನ್ನು ವಿರೋಧಿಸಿದ ಗಾಂಧಿ ವಿದೇಶಿಯರ ಚಿಂತನೆ ಹಾಗೂ ಅವರ ಕ್ರಮಗಳನ್ನು ಅನುಸರಿಸುವ ಭಾರತೀಯರನ್ನು 'ಒತ್ತು ಕಾಗದ'ಕ್ಕೆ ಹೋಲಿಸಿದ್ದಾರೆ.

ಈ ಎಲ್ಲ ಚಿಂತನೆಗಳ ಫಲವಾಗಿ ಗಾಂಧೀಜಿಯವರೇ ಭಾರತಕ್ಕೆ ಅಗತ್ಯವಿರುವ 'ಹೊಸ ಶಿಕ್ಷಣ ಪದ್ಧತಿ'ಯೊಂದನ್ನು ೧೯೩೭ರಲ್ಲಿ ರೂಪಿಸುತ್ತಾರೆ. ಅದು ಮೂಲ ಶಿಕ್ಷಣ ಅಥವಾ ನಯತಾಲೀಮ್. ಇದು ಕೈಗಾರಿಕೆ ಮೂಲಕ ಶಿಕ್ಷಣ ಕಲಿಸುವ ಉದ್ದೇಶ ಹೊಂದಿದೆ. ಸ್ವಾವಲಂಬನೆ, ಉತ್ಪಾದನೆ ಮುಂತಾದ ಅಂಶಗಳ ಅಂತಿಮ ಫಲದ ಮೇಲೆ ಗಾಂಧೀಜಿಗೆ ನಂಬಿಕೆ ಇತ್ತು. ಗುಣ ವಿಕಾಸಕ್ಕೆ, ವಿವೇಕಕ್ಕೆ ಭಾರತದ ಕೈಗಾರಿಕೆ ಮತ್ತು ಕೈ

ಕಸುಬುಗಳ ಪುನರುಜ್ಜೀವನ ಈ ಎಲ್ಲದಕ್ಕೂ 'ಮೂಲ ಶಿಕ್ಷಣ'ವನ್ನು ಇವರು ಆಧರಿಸಿದ್ದರು.

**ಶ್ರೀ ಅರವಿಂದರು (೧೮೭೨-೧೯೫೦)**

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯ ಭಾರತ ಈ ಎರಡು ಕಾಲಘಟ್ಟಗಳನ್ನು ಕಂಡವರು ಶ್ರೀ ಅರವಿಂದರು. ಸ್ವಾತಂತ್ರ್ಯ ಪೂರ್ವದಲ್ಲಿದ್ದ ಯುರೋಪಿಯನ್ ಶಿಕ್ಷಣ ಕ್ರಮವೇ ಸ್ವಾತಂತ್ರ್ಯ ಅನಂತರವೂ ಭಾರತೀಯ ನೆಲದಲ್ಲಿ ಗಟ್ಟಿಯಾಗಿ ಬೇರೂರಿದ ಬಗೆಯನ್ನು ಅವರು ವಿಶ್ಲೇಷಣೆ ಮಾಡಿದ್ದಾರೆ.

> ಶಿಕ್ಷಣವು ಮನುಷ್ಯನಿಗೆ, ಅವನ ವ್ಯಕ್ತಿ ವಿಶಿಷ್ಟತೆಗೆ, ರಾಷ್ಟ್ರಕ್ಕೆ, ಜನಾಂಗಕ್ಕೆ ಮತ್ತು ವಿಶ್ವಮಾನವತೆಗೆ ಮಹತ್ತರ ಸ್ಥಾನವನ್ನು ಕೊಡಬೇಕು. ಭಾರತವು ತನ್ನದೇಯದ ಮನೋದೃಷ್ಟಿಯನ್ನು, ಮನೋಧರ್ಮವನ್ನು ಹೊಂದಿದೆ. ಇದರ ತಳಹದಿಯ ಮೇಲೆಯೇ ಶಿಕ್ಷಣ ರೂಪಿತಗೊಳ್ಳಬೇಕು.[೨೨]

ಎನ್ನುವ ಮೂಲಕ ಶಿಕ್ಷಣದ ಮಹತ್ವವನ್ನು ವಿವರಿಸುತ್ತಾರೆ. ಶಿಕ್ಷಣದ ಮೊದಲ ಉದ್ದೇಶ ಮಕ್ಕಳನ್ನು ಸುತ್ತಣ ಪರಿಸರದಲ್ಲಿ ಕಾಣಬರುವ ಜೀವನಕ್ಕೆ ಯೋಗ್ಯರನ್ನಾಗಿ ತಯಾರು ಮಾಡುವುದು ಎನ್ನುವ ಮೂಲಕ ಶಿಕ್ಷಣದಲ್ಲಿ ಆಗಬೇಕಾದ ಬದಲಾವಣೆಗಳನ್ನು ತಿಳಿಸಿ ಅದರ ಅರ್ಥವ್ಯಾಪ್ತಿಯನ್ನು ಹಿಗ್ಗಿಸಿದ್ದಾರೆ.

ಚಿಕ್ಕವಯಸ್ಸಿನಲ್ಲಿ ಮಕ್ಕಳಿಗೆ ಅನುಕರಣ ಶಕ್ತಿ ವಿಶೇಷವಾಗಿರುತ್ತದೆ. ಅವರು ಓದಿಗಿಂತ ನೋಡಿ ಕಲಿಯುವುದೇ ಹೆಚ್ಚು. ಕುಟುಂಬಗಳಲ್ಲಿ ಮಾತುಗಳನ್ನು, ನಡವಳಿಕೆಗಳನ್ನು, ಸ್ವಚ್ಛವಾಗಿರುವುದನ್ನು, ವಿಕಾಸವನ್ನು, ಕೋಪಿಸಿಕೊಳ್ಳುವುದನ್ನು – ಹೀಗೆ ಎಲ್ಲ ಬಗೆಯ ಚಟುವಟಿಕೆಗಳನ್ನು ನೋಡಿಯೇ ಕಲಿಯುತ್ತವೆ. ಹಾಗಾಗಿ ಶಾಲೆಗಳಲ್ಲಿ ನೈತಿಕ ಪರಿಸರವನ್ನು ಉಂಟು ಮಾಡಬೇಕು. ಆ ಮೂಲಕ ಮಗುವಿನ ಮನಸ್ಸಿಗೆ ಮುಟ್ಟುವಂತೆ ಶಿಕ್ಷಣ ನೀಡಬೇಕು.

ಈ ಆಧುನಿಕ ಯುಗದಲ್ಲಿ ಶಾಲಾ ಕಾಲೇಜುಗಳಲ್ಲಿ ಯುಕ್ತ ನೈತಿಕವಾದ ತರಬೇತಿಯನ್ನು ಕೊಡಲು ಸಾಧ್ಯವಾಗಿಲ್ಲ. ಮನಸ್ಸಿಗೆ ಉಚಿತವಾದ ತರಬೇತಿಯನ್ನು ಒದಗಿಸಿದರೆ ಹೃದಯದ ಪ್ರಗತಿ ಸಾಧ್ಯವಾಗುತ್ತದೆ ಎಂದು ಹೇಳುವ ಶ್ರೀ ಅರವಿಂದರು ಭಾರತಕ್ಕೆ ಬೇಕಾದ ನೈತಿಕ ಶಿಕ್ಷಣದ ಅಗತ್ಯವನ್ನು ಪ್ರತಿಪಾದಿಸಿದ್ದಾರೆ.

ಮಕ್ಕಳನ್ನು ಅಜ್ಞಾನುವರ್ತಿಗಳನ್ನಾಗಿಸಿ ಅವರ ಮೇಲೆ ನಮ್ಮ ಅಭಿಪ್ರಾಯಗಳನ್ನು ಹೇರುವುದು ಆ ಮೂಲಕ ತರಬೇತಿಗೊಳಿಸುವುದು ಸರಿಯಾದ ಕ್ರಮವಲ್ಲ. ಚಿಕ್ಕಮಕ್ಕಳಿಗೆ ನೈತಿಕ ಗ್ರಂಥಗಳನ್ನು, ಉದಾತ್ತ ಉದಾಹರಣೆಗಳನ್ನು, ಆದರ್ಶ ವ್ಯಕ್ತಿಗಳ ಬದುಕನ್ನು ವಿವರಿಸಬೇಕು. ಕೇವಲ ನೀತಿ ಬೋಧನೆಯಿಂದ ಮಕ್ಕಳಿಗೆ ಯಾವ ಬಗೆಯ ಪ್ರಯೋಜನವೂ ಉಂಟಾಗುವುದಿಲ್ಲ. ಜ್ಞಾನದಾಹ, ಆತ್ಮ ನಿವೇದನೆ, ಪರಿಶುದ್ಧತೆ, ಸರ್ವಸಂಗ ಪರಿತ್ಯಾಗ,

ಧೈರ್ಯ, ಉತ್ಸಾಹ, ಗೌರವ, ಉದಾತ್ತ ಗುಣ, ದೀನ ರಕ್ಷಣೆ, ರಾಷ್ಟ್ರಾಭಿಮಾನ, ಉಪಕಾರ ಬುದ್ಧಿ, ಕಷ್ಟ ಸಹಿಷ್ಣುತೆ, ಉದ್ಯಮದಲ್ಲಿ ಉದಾರತೆ, ಧಾರಾಳತನ, ಸೇವಾ ಮನೋಭಾವ ಇತ್ಯಾದಿ ಗುಣಗಳು ವಿದ್ಯಾರ್ಥಿಗಳಲ್ಲಿ ಉಂಟಾಗುವಂತೆ ಅವರಿಗೆ ನೈತಿಕ ಶಿಕ್ಷಣ ನೀಡಬೇಕಾಗಿದೆ.

> ನೈಜ ಬೋಧನೆಯ ಮೊದಲ ತತ್ವವೆಂದರೆ ಏನನ್ನು ಬೋಧಿಸದಿರುವುದು, ಉಪಾಧ್ಯಾಯನು ಬೋಧಕನಲ್ಲ, ಸಹಾಯಕ ಹಾಗೂ ಮಾರ್ಗದರ್ಶಕ ಮಕ್ಕಳಿಗೆ ತರಬೇತಿ ಕೊಡುವುದು ಅವನ ಕೆಲಸವಲ್ಲ. ಜ್ಞಾನ ಸಾಧನಗಳನ್ನು ಶೃತಿಗೊಳಿಸುವುದು ಮುಖ್ಯ ಕರ್ತವ್ಯ[೨೩]

ಎಂದು ಬೋಧನೆಯನ್ನು ಕುರಿತು ಹೇಳುವ ಮೂಲಕ ಶಿಕ್ಷಕರ ಜವಾಬ್ದಾರಿಗಳನ್ನು ಪುನರ್ ಮೌಲ್ಯೀಕರಿಸುತ್ತಾರೆ. ಶಿಕ್ಷಕ ತನ್ನ ಆಲೋಚನೆ ಅಭಿಪ್ರಾಯಗಳನ್ನು ವಿದ್ಯಾರ್ಥಿಗೆ ಒತ್ತಾಯಪೂರ್ವಕವಾಗಿ ಹೇರುವುದನ್ನು ನಿರಾಕರಿಸುವ ಅರವಿಂದರು ಶಿಕ್ಷಕ ಕೇವಲ ಮಾರ್ಗದರ್ಶಕನಾಗಿ ಕರ್ತವ್ಯ ನಿರ್ವಹಿಸಬೇಕು ಎನ್ನುತ್ತಾರೆ.

ಶಿಕ್ಷಣವು ಬೌದ್ಧಿಕ ಶಕ್ತಿಯ ಜತೆಗೆ ಮಾನಸಿಕ ಶಕ್ತಿ ಸಾಮಾರ್ಥ್ಯಗಳನ್ನು ಸುಸಂಸ್ಕೃತಗೊಳಿಸಬೇಕು. ಇದು ವಿದೇಶಿ ಶಿಕ್ಷಣ ಕ್ರಮದಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ನಮ್ಮದೇ ನೆಲದ ನಮ್ಮದೇ ಚಿಂತನೆಗಳಿಂದ ಕೂಡಿದ ವಿಶ್ವವ್ಯಾಪ್ತಿಯಾಗಬಲ್ಲ ಶಿಕ್ಷಣವನ್ನು ರಾಷ್ಟ್ರೀಯ ಶಿಕ್ಷಣದ ಮೂಲಕ ರೂಪಿಸಿಕೊಳ್ಳಬೇಕೆಂದು ಅರವಿಂದರು ಆಶಿಸಿದರು. ಈ ರಾಷ್ಟ್ರೀಯ ಶಿಕ್ಷಣದ ಮೂಲಕ ಮೊದಲಿಗೆ ಮಾತೃಭಾಷೆಯನ್ನು ಶಿಕ್ಷಣ ಮಾಧ್ಯಮವನ್ನಾಗಿ ಮಾಡಿ ಇಂಗ್ಲಿಷ್ ಶಿಕ್ಷಣ ಪದ್ಧತಿಯಿಂದ ಉಂಟಾಗಿರುವ ನ್ಯೂನತೆಗಳನ್ನು ಪರಿಹರಿಸಬೇಕು. ನೈತಿಕ ಶಿಕ್ಷಣವು ರಾಷ್ಟ್ರೀಯ ಶಿಕ್ಷಣದ ಭಾಗವಾಗಬೇಕು. ಏಕೆಂದರೆ ನೈತಿಕ ಮತ್ತು ಭಾವುಕ ಪ್ರವೃತ್ತಿಗಳಿಂದ ದೊರೆಯದ ಬೌದ್ಧಿಕ ಶಿಕ್ಷಣ ಆತನ ಏಳಿಗೆಗೆ ಹಾನಿಕಾರಕವಾದುದು ಎನ್ನುವ ಅರವಿಂದರು ವಿದೇಶಿ ಶಿಕ್ಷಣ ಕ್ರಮದಲ್ಲಿನ ದೋಷಗಳನ್ನು ವಿವರಿಸಿದ್ದಾರೆ.

ಭಾರತದಲ್ಲಿ ವಿದ್ಯಾರ್ಥಿಯ ದೇಹ, ಮನಸ್ಸು, ವ್ಯಕ್ತಿತ್ವಗಳ ಮೇಲೆ ಇಂಗ್ಲಿಷ್ ಶಿಕ್ಷಣ ಕ್ರಮದಿಂದ ಘಾತವಾಗುತ್ತಿದೆ. ಪ್ರತಿಯೊಂದು ಮಗುವು ಅದ್ಭುತವಾದ ಕಲ್ಪನಾಶಕ್ತಿಯನ್ನು, ಭಾವಸಂಪತ್ತನ್ನು ಹೊಂದಿರುತ್ತದೆ. ಅಲ್ಲದೇ, ಕುತೂಹಲಕಾರಕ ವಿಷಯ ನಿರೂಪಣೆಗಳನ್ನು ಕಿವಿಗೊಟ್ಟು ಕೇಳುತ್ತದೆ. ಈ ಗುಣಗಳ ಬಲವರ್ಧನೆಗೆ ಪೂರಕವೆನಿಸುವ ಶಿಕ್ಷಣ ನೀಡಬೇಕಾಗಿದೆ. ಅದಕ್ಕಾಗಿ ಮಾತೃಭಾಷೆಯೇ ಶಿಕ್ಷಣದ ಮಾಧ್ಯಮವಾಗಬೇಕು ಎನ್ನುವುದು ಅರವಿಂದರ ಚಿಂತನೆ. ಭಾರತದಲ್ಲಿರುವ ಇಂಗ್ಲಿಷರಿಂದ ಸ್ಥಾಪಿತವಾದ ಶಿಕ್ಷಣ ಸಂಸ್ಥೆಗಳು ಹಾಗೂ ಅಲ್ಲಿ ದೊರೆಯುತ್ತಿರುವ ಶಿಕ್ಷಣದ ಲೋಪಗಳನ್ನು ಅರವಿಂದರು ವಿವರಿಸಿದ್ದಾರೆ.

ಭಾರತದ ಸುಪ್ರಸಿದ್ಧಿ ನಗರಗಳಲ್ಲಿ ಪರಕೀಯ ಸರಕಾರಗಳಿಂದ ಸ್ಥಾಪಿಸಲ್ಪಟ್ಟ ವಿಶ್ವವಿದ್ಯಾಲಯಗಳು ಪರಕೀಯ ಸಂಸ್ಕೃತಿಯ ನಾಗರಿಕತೆಗಳನ್ನು ಪ್ರಚಾರಿಸುವ ಕೇಂದ್ರಗಳಾಗಿದೆ. ಈ ವಿಶ್ವವಿದ್ಯಾಲಯಗಳ ಗುರಿ ಸಾಹಿತ್ಯಾತ್ಮಕವಾದುದು. ಈ ವಿಶ್ವವಿದ್ಯಾಲಯಗಳು ಒದಗಿಸಿದ ದೈಹಿಕ ಶಿಕ್ಷಣ ಕೀಳುಮಟ್ಟದ್ದಾಗಿತ್ತು. ನೈತಿಕ ಶಿಕ್ಷಣಕ್ಕೆ ಅವಕಾಶವಿರಲಿಲ್ಲ.[೨೪]

ಎಂದಿದ್ದಾರೆ. ಭಾರತೀಯ ಚಿಂತನೆಗಳನ್ನು ಸಂಸ್ಕೃತಿಯನ್ನು ಪಠ್ಯಕ್ರಮದಲ್ಲಿ ಸೇರಿಸಿದರೆ ಅದು ರಾಷ್ಟ್ರೀಯ ಶಿಕ್ಷಣವಾಗದು. ಬಂಗಾಳದ ರಾಷ್ಟ್ರೀಯ ಕಾಲೇಜುಗಳಲ್ಲಿ ಒದಗಿಸಿದ ಶಿಕ್ಷಣವು ಸುಧಾರಿಸಿದ ಯುರೋಪಿಯನ್ ಶಿಕ್ಷಣವೇ ಹೊರತು ದೇಶಿಯ ಶಿಕ್ಷಣವಾಗಿರಲಿಲ್ಲ. ಆದ್ದರಿಂದ ಪುರಾತನ ಭಾರತದ ಭವ್ಯ ಭಾವನೆಗಳನ್ನು, ಶಿಕ್ಷಣ ತತ್ವಗಳನ್ನು ಪ್ರಸ್ತುತದ ಶಿಕ್ಷಣ ಕ್ರಮದಲ್ಲಿ ಪರಿಣಾಮಕಾರಿಯಾಗಿ ಅಳವಡಿಸಬೇಕಿದೆ ಎಂದು ಅರವಿಂದರು ಬಯಸುತ್ತಾರೆ. ಶೈಕ್ಷಣಿಕವಾಗಿ ಪ್ರಗತಿ ಸಾಧಿಸಿರುವ ಜಗತ್ತಿನ ಹಲವು ರಾಷ್ಟ್ರಗಳಲ್ಲಿ ಅಲ್ಲಿನ ರಾಷ್ಟ್ರೀಯ ಶಿಕ್ಷಣವು ರೂಪುಗೊಂಡಿರುವುದು ಸಾಂಪ್ರದಾಯಿಕ ದೇಶಿಯ ಶಿಕ್ಷಣ ಕ್ರಮದ ಆಧಾರದಲ್ಲಿಯೇ. ಆದ್ದರಿಂದ ಭಾರತದಲ್ಲಿಯೂ ರಾಷ್ಟ್ರೀಯ ಶಿಕ್ಷಣವು ದೇಶಿಯ ಶಿಕ್ಷಣದ ತಳಹದಿಯ ಮೇಲೆಯೇ ನಿರ್ಮಾಣವಾಗಬೇಕು.

ಧರ್ಮದ ಕೆಲವು ಮೂಢಪದ್ಧತಿಗಳನ್ನು ಮಕ್ಕಳಿಗೆ ಬೋಧಿಸಿದರೆ ಅವರು ಧರ್ಮನಿಷ್ಠ ವ್ಯಕ್ತಿಗಳಾಗುವರೆಂದು ಕೆಲವರು ತಪ್ಪು ತಿಳುವಳಿಕೆ ಹೊಂದಿದ್ದಾರೆ. ಧರ್ಮವನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕೇ ವಿನಃ ಅದನ್ನು ಮತವೆಂದು ಅಧ್ಯಯನ ಮಾಡಬಾರದು ಎನ್ನುವ ಅರವಿಂದರ ಚಿಂತನೆಗಳು ಪ್ರಸ್ತುತದ ಹಲವು ತೊಡಕುಗಳಿಗೆ ಪರಿಹಾರದಂತೆ ಗೋಚರಿಸುತ್ತದೆ. ಪರಭಾಷೆಯ ಶಿಕ್ಷಣ ಕ್ರಮದ ಲೋಪಗಳನ್ನು ವಿವರಿಸುವ ಅರವಿಂದರು ಮಗುವಿಗೆ ಯಾವ ಬಗೆಯ ಶಿಕ್ಷಣ ನೀಡಬೇಕು ಎಂಬುದನ್ನು ಪ್ರಾಯೋಗಿಕವಾಗಿ ಮಂಡಿಸಿದ್ದಾರೆ. ಮಕ್ಕಳಿಗೆ ವಿದ್ಯೆಯನ್ನು ಒದಗಿಸುವ ಕಾರ್ಯದಲ್ಲಿ ನಿರತರಾದವರು ಒಂದು ಅಂಶವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಶಿಕ್ಷಕರು ದಿನನಿತ್ಯ ವ್ಯವಹರಿಸುವುದು ಸೂಕ್ಷ್ಮಾತಿಸೂಕ್ಷ್ಮಮತಿಯುಳ್ಳ ಮಕ್ಕಳೊಡನೆ. ಅಲ್ಲದೇ ಶಿಕ್ಷಕ ಶಿಲ್ಪಿಯಂತೆ ಕಾರ್ಯನಿರ್ವಹಿಸಬೇಕು ಎಂದಿದ್ದಾರೆ.

ಭಾರತದ ಇಂದಿನ ಶಿಕ್ಷಣ ಕ್ರಮವು ಮಕ್ಕಳ ಶರೀರ, ಮನಸ್ಸು ಮತ್ತು ಗುಣಶೀಲಗಳ ಮೇಲೆ ಅಪಾರವಾದ ದುಷ್ಪರಿಣಾಮಗಳನ್ನು ಉಂಟುಮಾಡುತ್ತದೆ. ಆದ್ದರಿಂದ ಆಧುನಿಕತೆಗೆ ಅನುಗುಣವಾಗಿ ಜ್ಞಾನಕ್ಕೆ ಬೇಕಾದ ಸಲಕರಣೆಗಳನ್ನು ಸಜ್ಜುಗೊಳಿಸಿ ಪರಿಣಾಮಕಾರಿಯಾದ ಶಿಕ್ಷಣವನ್ನು ನೀಡಬೇಕು. ಅಲ್ಲದೇ ಇಂದು ನೈತಿಕ ಶಿಕ್ಷಣವನ್ನು ನೀಡುವುದು ಪ್ರಾಮುಖ್ಯತೆಯನ್ನು ಪಡೆದಿಲ್ಲ. ಈ ಕಾರಣಗಳಿಂದಲೇ ವೇದಾಂತ, ವಿಜ್ಞಾನ, ಕಲೆ, ರಾಜಕೀಯ ಮೊದಲಾದ ಕ್ಷೇತ್ರಗಳಲ್ಲಿ ಉದ್ಭವಿಸುವ ಸೂಕ್ತ ಪರಿಹಾರ ಸೂಚಿಸಲು

ಸಾಧ್ಯವಾಗುತಿಲ್ಲ. ಅದಕ್ಕಾಗಿ ಮಾತೃಭಾಷಾ ಶಿಕ್ಷಣದ ಪ್ರಾಮುಖ್ಯತೆಯನ್ನು ತಿಳಿಸಿದ್ದಾರೆ. ವ್ಯಕ್ತಿಯೋರ್ವನು ಮಾತೃಭಾಷೆಯನ್ನು ಸಮರ್ಪಕವಾಗಿ ಅಭ್ಯಸಿಸಿದಾಗ ಮತ್ತೊಂದು ಭಾಷೆಯನ್ನು ಕಲಿಯುವುದು ಸುಲಭವಾಗುತ್ತದೆ. ಮಕ್ಕಳು ಮಾತೃಭಾಷೆಯ ಪೂರ್ಣ ಪ್ರಭುತ್ವ ಪಡೆಯುವ ತನಕ ಅನ್ಯಭಾಷೆಗಳನ್ನು ಬೋಧಿಸುವುದು ಸರಿಯಲ್ಲ ಎನ್ನುವ ಮೂಲಕ ದೇಶಭಾಷೆಗಳ ಶಿಕ್ಷಣದ ಮಹತ್ವವನ್ನು ತಿಳಿಸಿದ್ದಾರೆ.

ಆಧುನಿಕ ಕಾಲದ ಮಕ್ಕಳು ಮಾನಸಿಕವಾದ ಆಯಾಸಕ್ಕೆ ತುತ್ತಾಗುವುದರಿಂದ ಯಾವ ಬಗೆಯ ಪಠ್ಯವಿಷಯದ ಬಗೆಗೂ ಮನಸ್ಸು ಏಕಾಗ್ರತೆ ಹೊಂದಲಾರದು. ಹಾಗಾಗಿ ಅದಕ್ಕೆ ಕುತೂಹಲ ಉಂಟುಮಾಡುವಂತೆ ಪಠ್ಯಕ್ರಮಗಳನ್ನು ರೂಪಿಸಬೇಕು ಎಂದಿದ್ದಾರೆ. ಅರವಿಂದರ ಶಿಕ್ಷಣ ಚಿಂತನೆಗಳು ವ್ಯಾಪಕವಾದ ಅರ್ಥವ್ಯಾಪ್ತಿಯನ್ನು ಹೊಂದಿವೆ. 'ನೌಕರಿಗಾಗಿ ಶಿಕ್ಷಣ' ಎನ್ನುತ್ತಿರುವ ಈ ಕಾಲಮಾನದಲ್ಲಿ ಒಟ್ಟಾರೆ ಮಾನವನ ಶ್ರೇಯೋಭಿವೃದ್ಧಿಯನ್ನು ಅರವಿಂದರ ಶಿಕ್ಷಣ ಚಿಂತನೆಗಳು ಕೇಂದ್ರವಾಗಿರಿಸಿಕೊಂಡಿವೆ. ಭಾರತೀಯ ಪರಂಪರೆಯ ಹಿನ್ನೆಲೆಯಲ್ಲಿ ಈ ನೆಲದ ಶಿಕ್ಷಣ ಸ್ವಂತಿಕೆಯಿಂದ ಕೂಡಿರಬೇಕು. ಶಿಕ್ಷಣ ಬೌದ್ಧಿಕ ತಿಳುವಳಿಕೆಯನ್ನು ಹೆಚ್ಚು ಮಾಡಿದರೆ ಸಾಲದು ಅದರಿಂದ ವ್ಯಕ್ತಿತ್ವದ ವಿಕಸನವಾಗಬೇಕು. 'ಮಾನವ'ನನ್ನು ರೂಪಿಸುವಲ್ಲಿ ಶಿಕ್ಷಣದ ಪಾತ್ರ ಬಹುಮುಖ್ಯವಾದುದು ಎನ್ನುವುದನ್ನು ಇವರ ಚಿಂತನೆಗಳು ಪ್ರತಿಪಾದಿಸುತ್ತವೆ.

ಪರಭಾಷೆಯ ಶಿಕ್ಷಣ ಕೇವಲ ಉದ್ಯೋಗದ ತಯಾರಿಯನ್ನು ಕೇಂದ್ರವಾಗಿಸಿಕೊಂಡಿದೆ. ಇದರಿಂದ ಮಾನವನ ನೈತಿಕತೆ ಬೆಳೆಯುವುದಿಲ್ಲ. ಆದ್ದರಿಂದ ಅವರು ನೈತಿಕ ಶಿಕ್ಷಣ ನೀಡಬೇಕಾದ ಗುರುತರ ಜವಾಬ್ದಾರಿಯನ್ನು ಗುರುತಿಸುತ್ತಾರೆ. ಶಿಕ್ಷಣ ಅಕ್ಷರ ಕಲಿಕೆಗೆ ಸೀಮಿತಗೊಳ್ಳಬಾರದು. ಅದು ಒಮ್ಮೆ ಪಡೆದು ಸುಮ್ಮನಾಗುವಂತಹುದಲ್ಲ. ಕಲಿಕೆ ನಿರಂತರವಾದದ್ದು ಮನುಷ್ಯನ ಸಣ್ಣತನಗಳು ನೀಗಿ ಅವನಲ್ಲಿ ಉದಾತ್ತ ಚಿಂತನೆಗಳು ಮೈಗೂಡುವಂತೆ ಶಿಕ್ಷಣವನ್ನು ನೀಡಬೇಕೆಂದು ಆಶಿಸುತ್ತಾರೆ. ಈ ಚಿಂತನೆಗಳನ್ನು ಸರಿಯಾದ ಕ್ರಮದಲ್ಲಿ ಅರ್ಥೈಸಿಕೊಳ್ಳದೇ ಹಾಗೂ ಅನುಸರಿಸಲಾರದೇ ಪ್ರಸ್ತುತ ಅಸಂಖ್ಯ ವಿಶ್ವವಿದ್ಯಾಲಯಗಳ ಶಿಕ್ಷಣ ಪೇಲವವಾಗಿದೆ. ಪ್ರಮಾಣಪತ್ರಗಳನ್ನು ಪಡೆಯುವುದೇ ಗುರಿಯಾಗಿದ್ದು ಶಿಕ್ಷಣದಿಂದ ಒದಗಿ ಬರುವಂತಹ ಸಂಸ್ಕಾರ ಗೌಣಗೊಂಡಿದೆ.

ಅರವಿಂದರು ತಮ್ಮ ಕಾಲಕ್ಕಾಗಲೇ ಭಾರತದಲ್ಲಿ ನೆಲೆಯೂರಿದ್ದ ಇಂಗ್ಲಿಷ್ ಶಿಕ್ಷಣವನ್ನು ವಿರೋಧಿಸುತ್ತಾರೆ. ಅದಕ್ಕೆ ಪರ್ಯಾಯವಾಗಿ ಮಾತೃಭಾಷಾ ಶಿಕ್ಷಣ ಹಾಗೂ ಭಾರತೀಯ ಪರಂಪರಾಗತ ಮೌಲ್ಯಗಳನ್ನು ಕಲಿಸಿಕೊಡುವ ಶಿಕ್ಷಣ ನೀಡಬೇಕೆಂದು ಹೇಳುತ್ತಾರೆ. ಮಕ್ಕಳಿಗೆ ಒತ್ತಡವನ್ನು ಸೃಷ್ಟಿಸಿ ಕಲಿಸಬಾರದು ಎನ್ನುತ್ತಾರೆ. ಶಿಕ್ಷಕನಾದವನು ಕೇವಲ ಮಾರ್ಗದರ್ಶಕನಾಗಿ ಕರ್ತವ್ಯ ನಿರ್ವಹಿಸಬೇಕು. ಅಲ್ಲದೇ ಆತ ಶಿಲ್ಪಿಯಂತೆ ಉತ್ತಮ ವಿದ್ಯಾರ್ಥಿಗಳನ್ನು ರೂಪಿಸಲು ಶ್ರಮಿಸಬೇಕು ಎಂದಿದ್ದಾರೆ.

ಆಂಗ್ಲ ಶಿಕ್ಷಣದ ಪಠ್ಯಕ್ರಮ, ಬೋಧನೆ, ಪರೀಕ್ಷೆ ಎಲ್ಲವೂ ವಿದೇಶಿಯರದ್ದು. ನಮ್ಮ ಪರಿಸರದಲ್ಲಿ ಇಂಥ ಶಿಕ್ಷಣದಿಂದಾಗಿ ವಿದ್ಯಾರ್ಥಿಯ ದೇಹ, ಮನಸ್ಸು, ವೃತ್ತಿಗಳ ಮೇಲೆ ನೇತ್ಯಾತ್ಮಕ ಪರಿಣಾಮಗಳು ಉಂಟಾಗುತ್ತವೆ. ಇದು ನಮ್ಮತನವನ್ನು ಮರೆಸಿ, ವಿದೇಶಿತನವನ್ನು ಮೈಗೂಡಿಸುತ್ತದೆ ಎಂದು ವಸಾಹತುಶಾಹಿ ಶಿಕ್ಷಣದ ಲೋಪವನ್ನು ಬಿಂಬಿಸಿದ್ದಾರೆ. ಅರವಿಂದರು ವಿಚಾರಗಳನ್ನು ಹೇಳಿ ಸುಮ್ಮನಾದವರಲ್ಲ ತಮ್ಮ ಶೈಕ್ಷಣಿಕ ಚಿಂತನೆಗಳನ್ನು ಪ್ರಾಯೋಗಿಕವಾಗಿ ಜಾರಿಗೆ ತರುವ ಪ್ರಯತ್ನ ಮಾಡಿದವರು. ಅದಕ್ಕಾಗಿ ಪಾಂಡಿಚೇರಿಯಲ್ಲಿ ೧೯೪೩ರಲ್ಲಿ ಶ್ರೀ ಅರವಿಂದ ಅಂತರರಾಷ್ಟ್ರೀಯ ಶಿಕ್ಷಣ ಕೇಂದ್ರವನ್ನು ಸ್ಥಾಪಿಸಿದರು. ಅಲ್ಲಿ ಅಂತರರಾಷ್ಟ್ರೀಯವಾಗಿ ಎಲ್ಲ ವಿದ್ಯಾರ್ಥಿಗಳಿಗೂ ಅವರದ್ದೆ ಮಾತೃಭಾಷೆಯಲ್ಲಿ ಶಿಕ್ಷಣ ನೀಡುವ, ಬೋಧಿಸುವ ಪದ್ಧತಿಯನ್ನು ಜಾರಿಗೆ ತಂದರು. ಇದು ೧೯೫೧ ರಿಂದ 'ಶ್ರೀ ಅರವಿಂದ ಅಂತರರಾಷ್ಟ್ರೀಯ ವಿಶ್ವವಿದ್ಯಾನಿಲಯ'ವಾಗಿದೆ. ಅಲ್ಲಿ ಪಠ್ಯ, ಬೋಧನೆ, ಪರೀಕ್ಷೆ ಈ ಎಲ್ಲವೂ ಭಿನ್ನವಾಗಿದೆ. ಭಾರತೀಯರು ಇಂಗ್ಲಿಷ್ ಶಿಕ್ಷಣದಿಂದ ಉಂಟಾಗುತ್ತಿರುವ ಅಪಾಯಗಳಿಂದ ಹೊರಬಂದು ಸ್ವಂತಿಕೆ ಉಳಿಸಿಕೊಳ್ಳಬೇಕೆಂದು ಶ್ರೀ ಅರವಿಂದರು ಬಹುವಾಗಿ ಚಿಂತಿಸಿದ್ದಾರೆ.

**ರಾಮ ಮನೋಹರ ಲೋಹಿಯಾ (೧೯೧೦ – ೧೯೬೭)**

ಭಾರತದ ಸಮಾಜವಾದದ ಪ್ರಖರ ಚಿಂತಕ ರಾಮಮನೋಹರ ಲೋಹಿಯಾ ಅವರು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕಾಂಗ್ರೆಸ್ ಸರ್ಕಾರದ ಆಡಳಿತದ ಲೋಪಗಳನ್ನು ಎತ್ತಿ ಹಿಡಿದವರು. ಅಂತೆಯೇ ಬ್ರಿಟಿಷರು ದೇಶಬಿಟ್ಟು ಹೋದ ಅನಂತರವೂ ಈ ನೆಲದಲ್ಲಿ ಭದ್ರವಾಗಿ ಬೇರುಬಿಟ್ಟಿದ್ದ ಇಂಗ್ಲಿಷ್ ಭಾಷೆಯ ಪ್ರಭುತ್ವವನ್ನು ವಿರೋಧಿಸಿ 'ಇಂಗ್ಲಿಷ್ ತೊಲಗಿಸಿ' ಆಂದೋಲನವನ್ನು ಆರಂಭಿಸಿದರು.

ಭಾರತದಲ್ಲಿ ಎಲ್ಲಿಯವರೆಗೆ ಇಂಗ್ಲಿಷ್ ಬಾಳಿಕೊಂಡಿರುತ್ತದೆಯೋ ಅಲ್ಲಿಯವರೆಗೆ ಆಹಾರದ ಬೆಲೆ ಮತ್ತು ಹಸಿವಿನ ಸಮಸ್ಯೆಗಳು ಪರಿಹಾರ ಕಾಣಲಾರವು ಎಂದಿರುವ ಲೋಹಿಯಾ ಅವರು ಪರಭಾಷೆಯನ್ನು ಕಟುವಾಗಿ ವಿರೋಧಿಸಿದವರು. ಭಾರತದ ಮಕ್ಕಳಿಗೆ ವಿದೇಶಿ ಭಾಷೆಯೊಂದನ್ನು ಕಲಿಯುವ ಭಾರ ತೊಲಗಿದರೆ ಅವರ ಜ್ಞಾನವು ವ್ಯಾಪಕವಾಗುತ್ತದೆ ಮತ್ತು ಆಳವಾಗುತ್ತದೆ ಎನ್ನುವುದು ಅವರ ಚಿಂತನೆಯಾಗಿದೆ.

ತಮ್ಮ ಕಾಲದ ಶಿಕ್ಷಣ ವ್ಯವಸ್ಥೆಯನ್ನು ಗಮನಿಸುವ ಲೋಹಿಯಾ ಅವರು ಭಾರತೀಯ ವಿದ್ಯಾರ್ಥಿಯು ಇಂಗ್ಲಿಷ್ ಕೋಳ ಸರಪಳಿಗಳಲ್ಲಿ ಬಂಧಿಯಾಗಿದ್ದಾನೆ; ಆತನ ಮನಸ್ಸು ತುಕ್ಕು ಹಿಡಿದಿದೆ. ಹಾಗಾಗಿ ಅವನ ದೇಹ ಮತ್ತು ಮನಸ್ಸನ್ನು ಇಂಗ್ಲಿಷಿನ ಅಮಾನುಷ ಒತ್ತಡದಿಂದ ಪಾರು ಮಾಡಬೇಕು. ಏಕೆಂದರೆ ಭಾರತೀಯರ ಇಡೀ ಬದುಕು ಇಂಗ್ಲಿಷ್ ಕಲಿಯುವುದರಲ್ಲೇ ವ್ಯರ್ಥವಾಗುತ್ತಿದೆ. ಯಾವುದೇ ಒಂದು ರಾಷ್ಟ್ರೀಯ ಸಮಸ್ಯೆಯನ್ನು ಗಂಭೀರವಾಗಿ ಅರ್ಥಮಾಡಿಕೊಳ್ಳುವುದಾಗಲೀ, ಅದಕ್ಕೆ ಪರಿಹಾರ ಕಂಡುಕೊಳ್ಳುವುದಾಗಲೀ

ಸಾಧ್ಯವಾಗದ ಹಾಗೆ ವಿದೇಶಿ ಭಾಷೆಯು ನಮ್ಮ ಶಕ್ತಿಯನ್ನು ಕಳೆದು ಬಿಟ್ಟಿದೆ ಎನ್ನುವುದು ಲೋಹಿಯಾ ಅವರ ಗ್ರಹಿಕೆ.

ಲೋಹಿಯಾ ಅವರು ಹುಟ್ಟು ಹಾಕಿದ 'ಅಂಗ್ರೇಜಿ ಹಟಾವೋ' ಚಳವಳಿಯ ನಾಸಿಕ್ ಸಮಿತಿಯು ೧೯೫೫ರ ಅಕ್ಟೋಬರ್ ೧೭ ಮತ್ತು ೧೮ರಲ್ಲಿ ನಡೆಸಿದ ಪ್ರಥಮ ಅಖಿಲ ಭಾರತೀಯ ಸಮಾವೇಶದಲ್ಲಿ

> ಇಂಗ್ಲಿಷಿನ ಸಾರ್ವಜನಿಕ ಬಳಕೆಯು ಈ ಕೂಡಲೇ ನಿಲ್ಲತಕ್ಕದೆಂದು ನಾನು ಅಪೇಕ್ಷಿಸುತ್ತೇನೆ. ವಿಧಾನ ಮಂಡಲಗಳಲ್ಲಿ ಸರ್ಕಾರಿ ಕಚೇರಿಗಳಲ್ಲಿ, ನ್ಯಾಯಾಲಯಗಳಲ್ಲಿ, ದಿನಪತ್ರಿಕೆಗಳಲ್ಲಿ ಹಾಗೂ ತೂಗುಫಲಕಗಳಲ್ಲಿ ಇಂಗ್ಲಿಷನ್ನು ಬಳಸಕೂಡದು ಮತ್ತು ಇಂಗ್ಲಿಷಿನ ಕಡ್ಡಾಯ ಶಿಕ್ಷಣ ನಿಲ್ಲತಕ್ಕದ್ದು[೨೫] ಎನ್ನುವ ಪ್ರಮಾಣ ಪತ್ರಕ್ಕೆ ಸಹಿಮಾಡಬೇಕೆಂದು ಲೋಹಿಯಾ ಅವರು ಸೂಚಿಸಿದ್ದರು.

ಇಂಗ್ಲಿಷ್ ಭಾಷೆಯನ್ನು ಕುರಿತು ಇಷ್ಟು ಕಟುವಾಗಿ ಟೀಕಿಸಿರುವ ಲೋಹಿಯಾ ಅವರ ಚಿಂತನಾ ಕ್ರಮದ ಹಿಂದಿರುವ ತಾತ್ವಿಕತೆಯನ್ನು ಗುರುತಿಸಿಕೊಳ್ಳಬೇಕಾಗಿದೆ. ಅವರು, ಇಂಗ್ಲಿಷ್ ವಿದೇಶಿ ಭಾಷೆಯಾದ ಕಾರಣದಿಂದ ಹಾನಿಯುಂಟಾಗುತ್ತಿದೆ ಎನ್ನುವುದಿಲ್ಲ. ಅದಕ್ಕಿಂತ ಮುಖ್ಯವಾಗಿ ಭಾರತೀಯ ಸಂದರ್ಭದಲ್ಲಿ ಅದು ಪಾಳೇಗಾರಿಕೆಯ ಭಾಷೆಯಾಗಿದೆ. ಇದನ್ನು ಅಧಿಕಾರಕ್ಕಾಗಿ, ಆರ್ಥಿಕ ಸವಲತ್ತುಗಳಿಗಾಗಿ ಬಳಸಿಕೊಳ್ಳುವ ಪ್ರೌಢಿಮೆಯನ್ನು ಹೊಂದಿರುವವರು ಶೇ. ಒಂದರಷ್ಟು ಮಂದಿ ಮಾತ್ರ. ಈ ಅಲ್ಪಸಂಖ್ಯೆಯ ಚಿಕ್ಕಗುಂಪು ಉಳಿದ ಬಹುಸಂಖ್ಯಾತ ಜನರ ಮೇಲೆ ಯಜಮಾನಿಕೆಯನ್ನು ಹೇರಿ ಶೋಷಣೆ ಮಾಡುವುದಕ್ಕೆ ಇಂಗ್ಲಿಷ್ ಸಾಧನವಾಗಿದೆ. ಭಾರತದ ಸ್ವಂತಿಕೆಯ ಹೊಸ ಚಿಂತನೆಯು ಒಂದು ಸಾವಿರ ವರ್ಷಗಳ ಹಿಂದೆಯೇ ಅಳಿದು ಹೋಗಿದೆ. ಇಲ್ಲಿಯವರೆವಿಗೂ ಅದನ್ನು ಪುನರುಜ್ಜೀವನ ಗೊಳಿಸುವುದಕ್ಕೆ ಸಾಧ್ಯವಾಗಿಲ್ಲ. ಅದಕ್ಕೆ ಕಾರಣ ಇಂಗ್ಲಿಷಿನ ಉಡ ಹಿಡಿತ ಎಂದು ಎಚ್ಚರಿಕೆ ನೀಡಿದ್ದಾರೆ.

'ಇಂಗ್ಲಿಷ್' ಕಲಿಕೆಯಲ್ಲಿ ತೊಡಗುವವರು ಹೆಚ್ಚು ಮತ್ತು ಉಳಿದವರು ಕಡಿಮೆ ಎನ್ನುವ ವೈಷಮ್ಯವನ್ನು ಹುಟ್ಟಿಸುವುದಕ್ಕೆ ಮಾತ್ರ ಸಮರ್ಥವಾಗಿದೆ. ಅಲ್ಲದೇ ಸ್ವಲ್ಪ ಇಂಗ್ಲಿಷ್ ಕಲಿತವನು ತನ್ನ ಸಂಬಂಧಿಗಳನ್ನು, ಸಾಮಾನ್ಯ ಜನರನ್ನು ಇಂಗ್ಲಿಷ್ ತಿಳಿಯದ 'ಹಳ್ಳಿಜನ'ರೆಂದು ಕೀಳಾಗಿ ನೋಡುತ್ತಾನೆ. ಈ ಬಗೆಯ ಚಿಂತನಾಕ್ರಮದಿಂದಾಗಿ ಸಾಮಾಜಿಕ ಮತ್ತು ಕೌಟುಂಬಿಕ ಒಡಕುಗಳು ಉಂಟಾಗುವುದಕ್ಕೆ ಇಂಗ್ಲಿಷ್ ಕಾರಣವಾಗುತ್ತಿರುವ ಬಗೆಯನ್ನು ಲೋಹಿಯಾ ಅವರು ಬಹು ಹಿಂದೆಯೇ ಮನವರಿಕೆ ಮಾಡಿಕೊಡುವ ಪ್ರಯತ್ನ ನಡೆಸಿದ್ದಾರೆ. ಅಲ್ಲದೇ ಇಂಗ್ಲಿಷ್ ದೇಶದ ಸಾಂಸ್ಕೃತಿಕ ಕ್ಷೇತ್ರಗಳ ಮೇಲೆ ಬೀರುತ್ತಿರುವ ಪ್ರಭಾವ ಹಾಗೂ ಹಲವು ಬಗೆಯ ಅನಾಹುತಗಳಿಗೆ ಕಾರಣವಾಗುತ್ತಿರುವುದನ್ನು ಮನವರಿಕೆ ಮಾಡಿಕೊಡುವ ಪ್ರಯತ್ನ ನಡೆಸಿದ್ದಾರೆ.

ಶ್ರೀಮಂತ-ಬಡವ, ಮೇಲುಜಾತಿ-ಕೀಳುಜಾತಿ, ವಿದ್ಯಾವಂತ-ಅವಿದ್ಯಾವಂತ ಈ ಬಗೆಯ ತಾರತಮ್ಯಗಳ ನಡುವೆ ಇಂಗ್ಲಿಷ್ ಭಾಷೆಯು ಮತ್ತೂ ವ್ಯಾಪಕವಾದ ಕಂದಕವನ್ನು ತೆರೆದಿಟ್ಟಿದೆ. ಹಾಗೂ ಇದರಿಂದ ಭಾರತವು ಬಾರಿ ಅಸಮಾನತೆಯ ರಾಷ್ಟ್ರವಾಗಿದೆ[೨೬] ಎಂದಿದ್ದಾರೆ.

ಸ್ವಾತಂತ್ರ್ಯ ಪೂರ್ವದಿಂದಲೇ ಇಂಗ್ಲಿಷ್ ಶಿಕ್ಷಣದಿಂದ ಉಂಟಾದ ಕಂದಕಗಳು, ಅಸಮಾನತೆಗಳು ಮುಂದೆ ದೊಡ್ಡದಾಗುತ್ತಿರುವುದರ ಬಗ್ಗೆ ಜಾಗೃತಿ ಮೂಡಿಸುವ ಪ್ರಯತ್ನ ಮಾಡಿದ್ದಾರೆ. ಜನಭಾಷೆಗಳು ಮತ್ತು ಪ್ರಾದೇಶಿಕ ಭಾಷೆಗಳು ಅಭಿವೃದ್ಧಿಯಾಗದೆ ಮತ್ತಷ್ಟು ಮೂಲೆಗುಂಪಾಗಬಹುದೆಂದು ಆತಂಕ ವ್ಯಕ್ತಪಡಿಸಿದ್ದಾರೆ. ಅದಕ್ಕಾಗಿ ನಮ್ಮ ಬಡಪ್ರದೇಶಗಳು ತಂತಮ್ಮ ಭಾಷೆಗಳಿಗೆ ಬದ್ಧವಾಗಿ ಅವುಗಳಲ್ಲೇ ತಮ್ಮ ಅದೃಷ್ಟವನ್ನು ಬದಲಿಸಿಕೊಳ್ಳುವ ಅವಕಾಶಗಳು ದೊರೆಯಬೇಕು ಎಂದು ಆಶಿಸುತ್ತಾರೆ.

ಭಾರತದ ಜಾತಿ ಅಸಮಾನತೆ ಶಮನವಾಗದಿರಲೂ ಇಂಗ್ಲಿಷ್ ಕಾರಣವಾಗುತ್ತಿರುವುದು ಹಾಗೂ ಅದು ಯಜಮಾನ್ಯದ ಭಾಷೆಯಾಗಿ ರೂಪುಗೊಂಡು ಸಾಮಾಜಿಕ ವ್ಯವಸ್ಥೆಯನ್ನು ಮತ್ತಷ್ಟು ಏರುಪೇರುಗೊಳಿಸುತ್ತಿರುವುದನ್ನು ಅರಿಯಬೇಕು. ಶಾಲೆ ಕಾಲೇಜುಗಳಲ್ಲಿ ಇಂಗ್ಲಿಷ್ ವಿಷವನ್ನು ಬಿತ್ತುವಂತ ವಿಷಯವಾಗಿದೆ. ಇದರಿಂದ ಶಿಕ್ಷಣ ಕ್ಷೇತ್ರದಲ್ಲಿ ದೊಡ್ಡ ಅನಾಹುತವೇ ಸಂಭವಿಸಿದೆ. ಹಾಗೆಯೇ ದೇಶಕ್ಕೆ ಅಪಾರವಾದ ನಷ್ಟವಾಗಿದೆ. ಭಾರತದಲ್ಲಿ ಶೇಕಡ ಸುಮಾರು ಎಪ್ಪತ್ತರಿಂದ ಎಂಬತ್ತರಷ್ಟು ಮಕ್ಕಳು ಸಾಮಾನ್ಯ ಬುದ್ಧಿಮತ್ತೆಯನ್ನು ಉಳ್ಳವರು ಇವರು ಇಂಗ್ಲಿಷ್ ಭಾಷೆಯನ್ನು ಕಲಿಯುವ ಪ್ರಯಾಸದಲ್ಲಿಯೇ ಬಳಲಿಹೋಗುತ್ತಾರೆ. ಭೂಗೋಳ, ಚರಿತ್ರೆ, ವಿಜ್ಞಾನ ಮೊದಲಾದ ವಿಷಯಗಳಲ್ಲಿ ಸಾಮಾನ್ಯವಾದ ಜ್ಞಾನವನ್ನು ಗಳಿಸಿಕೊಳ್ಳಲಿಕ್ಕೂ ಕಷ್ಟಪಡುತ್ತಾರೆ. ಹಾಗಾಗಿ ಭಾರತೀಯ ಶಿಕ್ಷಣದ ಮೇಲೆ ಇಂಗ್ಲಿಷ್ ಭಾಷೆಯು ಪ್ರತಿಕೂಲ ಪರಿಣಾಮ ಬೀರುತ್ತಿದೆ ಎನ್ನುವುದನ್ನು ಲೋಹಿಯಾ ಅವರು ಪರಿಣಾಮಕಾರಿಯಾಗಿ ವಿವರಿಸಿದ್ದಾರೆ.

ಒಬ್ಬ ವಿದ್ಯಾರ್ಥಿಯ ಅಂತಿಮ ಗುರಿ ಜ್ಞಾನ ಸಂಪಾದನೆಯಾದರ ಆತ ವಿದೇಶಿ ಭಾಷೆಯ ಕಲಿಕೆಗೆ ಲಕ್ಷ್ಯ ಕೊಟ್ಟು ಸಮಯ ಮತ್ತು ಶಕ್ತಿಯನ್ನು ವ್ಯಯ ಮಾಡಿಕೊಳ್ಳಬಾರದು. ವಿಷಯದ ಗಾಢವಾದ ಜ್ಞಾನವನ್ನು ಗಳಿಸಿಕೊಳ್ಳುವುದಕ್ಕೆ ಸಮಯವನ್ನು ವ್ಯಯಿಸಬೇಕು. ಆದರೆ ಭಾರತದಲ್ಲಿ ಆತನ ಐದನೇ ವಯಸ್ಸಿಗೆ ಇಂಗ್ಲಿಷ್ ಕಲಿಯುವ ಹುಚ್ಚಿಗೆ ತಳ್ಳಲಾಗುತ್ತದೆ ಮತ್ತು ಅವನು ಜೀವನಪರ್ಯಂತ ಅದೇ ವಿಕಲತೆಯಲ್ಲಿ ತೆವಳುತ್ತಾನೆ. ವಿದೇಶಿ ಭಾಷೆ ಕಲಿಕೆಯ ಹೊರೆಯಿಂದ ಮಗು ವಿಷಯದ ಕಲಿಕೆಯಿಂದ ವಂಚಿತಗೊಳ್ಳುತ್ತದೆ. ಹಾಗಾಗಿ ಒಂದು ಭಾಷೆಯನ್ನು ಕಲಿಯುವುದು ಹಾಗೂ ಒಂದು ವಿಷಯದಲ್ಲಿ ಪರಿಣಿತಿ ಪಡೆಯುವುದು ಇವೆರಡರ ನಡುವಿನ ಭಿನ್ನತೆಯನ್ನು ಅರ್ಥಮಾಡಿಕೊಳ್ಳಬೇಕು ಎನ್ನುತ್ತಾರೆ.

ಭಾರತೀಯ ಪರಿಸರದಲ್ಲಿ ಇಂಗ್ಲಿಷ್ ಭಾಷೆಯಿಂದಾಗುತ್ತಿರುವ ಪರಿಣಾಮಗಳನ್ನು ಹೊಸ ನೋಟದಿಂದ ವಿಶ್ಲೇಷಣೆ ನಡೆಸಿದವರು ಲೋಹಿಯಾರವರು. ಇದುವರೆಗಿನ ಶಿಕ್ಷಣ ಚಿಂತಕರಿಗಿಂತ ಭಿನ್ನ ನೆಲೆಯಲ್ಲಿ ಹೊಸ ಬಗೆಯ ಚಿಂತನಾಕ್ರಮವನ್ನು ಲೋಹಿಯಾ ಹುಟ್ಟು ಹಾಕಿದ್ದಾರೆ. ಸ್ವಾತಂತ್ರ್ಯ ಭಾರತದ ಉನ್ನತಿಗೆ ಯಾವ ಬಗೆಯ ಶಿಕ್ಷಣ ನೆರವಾಗುತ್ತದೆ ಎನ್ನುವ ಚಿಂತನೆಗಳು ನಡೆಯುತ್ತಿದ್ದ ಕಾಲಕ್ಕೆ, ಸ್ವಾತಂತ್ರ್ಯ ಪೂರ್ವದಲ್ಲಿ ಜಾರಿಗೊಂಡ ಇಂಗ್ಲಿಷ್ ಶಿಕ್ಷಣದ ಬಳುವಳಿಯಾಗಿರುವ ಇಂಗ್ಲಿಷ್ ಭಾಷಾ ಮೋಹದಿಂದ ಭಾರತೀಯ ಪರಿಸರಕ್ಕಾದ ಹಾನಿಯ ಬಗ್ಗೆ ಲೋಹಿಯಾ ಮಾತನಾಡಿದ್ದಾರೆ.

ಸ್ವಾತಂತ್ರ್ಯ ಭಾರತಕ್ಕೆ ಹಲವು ಸಮಸ್ಯೆಗಳು ಎದುರಾದವು. ಇಲ್ಲಿನ ಜಾತಿಪದ್ಧತಿ, ಬಡವ ಶ್ರೀಮಂತ ಈ ಬಗೆಯ ವರ್ಗ ವ್ಯವಸ್ಥೆಗಳು ಮತ್ತಷ್ಟು ಬಲಿಷ್ಟಗೊಳ್ಳಲು 'ಇಂಗ್ಲಿಷ್' ಪರೋಕ್ಷವಾಗಿ ಕಾರಣವಾಗುತ್ತಿದೆ ಎನ್ನುವ ತೀಕ್ಷ್ಣ ಸಂಗತಿಗಳನ್ನು ಲೋಹಿಯಾ ಅವರು ಪ್ರಚುರಪಡಿಸಿದರು. ಅವರ ಎಚ್ಚರಿಕೆಯ ಮಾತುಗಳನ್ನು ಭಾರತೀಯ ವ್ಯವಸ್ಥೆ ಸರಿಯಾಗಿ ಅರ್ಥೈಸಿಕೊಳ್ಳಲಿಲ್ಲ. ಪ್ರಸ್ತುತ ಸಮಾಜದಲ್ಲಿ ಒಂದೇ ಕುಟುಂಬದಲ್ಲಿ ಶಿಕ್ಷಣದ ಹೆಸರಿನಲ್ಲಿ, ಇಂಗ್ಲಿಷ್ ಭಾಷೆಯನ್ನು ಕಲಿತವರು, ಕಲಿಯದವರು ಎನ್ನುವ ತಾರತಮ್ಯಗಳು ಉಂಟಾಗುತ್ತಿರುವುದನ್ನು ನಾವಿಂದು ಗಮನಿಸಬಹುದು.

'ಇಂಗ್ಲಿಷ್' ಭಾರತೀಯ ಸಮಾಜದಲ್ಲಿ ಯಜಮಾನಿಕೆಯ ಭಾಷೆಯಾಗಿದೆ. ಅದು ದಬ್ಬಾಳಿಕೆ ನಡೆಸುತ್ತದೆ. ಅದರಿಂದ ವ್ಯತಿರಿಕ್ತ ಪರಿಣಾಮಗಳು ಉಂಟಾಗುತ್ತವೆ ಎಂಬ ಲೋಹಿಯಾ ಅವರ ಮಾತುಗಳು ಅಂದಿಗಿಂತ ಇಂದು ಹೆಚ್ಚು ಪರಿಣಾಮಕಾರಿಯಾಗಿವೆ. ಪ್ರಸ್ತುತ ಭಾರತೀಯ ಶಿಕ್ಷಣ ವ್ಯವಸ್ಥೆಯಲ್ಲಿ ಮಾತೃಭಾಷಾ ಮಾಧ್ಯಮದ ಶಿಕ್ಷಣ ಮೂಲೆಗುಂಪಾಗುತ್ತಿದೆ. ಭಾರತೀಯ ಹಲವು ಪ್ರಾದೇಶಿಕ ಭಾಷೆಗಳು ಶಿಕ್ಷಣ ಮಾಧ್ಯಮವಾಗುವಲ್ಲಿ ಸೋಲುತ್ತಿವೆ. ಅಲ್ಲದೇ ಈ ಭಾಷೆಗಳು ಆಡಳಿತ ಹಾಗೂ ಮಾಧ್ಯಮಗಳ ಭಾಷೆಗಳಾಗಿಯೂ ಉಳಿಯುತ್ತಿಲ್ಲ. ಎಲ್ಲ ಕಡೆ ಇಂಗ್ಲಿಷ್ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳುತ್ತಿದೆ. ಲೋಹಿಯಾ ಅವರ ಚಿಂತನೆಗಳು ಹಿಂದೆಂದಿಗಿಂತಲೂ ಈಗ ಹೆಚ್ಚು ಪ್ರಸ್ತುತವೆನಿಸಿಕೊಳ್ಳುತ್ತವೆ. ಅವರ ಚಿಂತನಕ್ರಮವನ್ನು ಪುನರ್ ವಿಮರ್ಶಿಸಿ ಈ ಕಾಲಮಾನದ ಭಾಷಾ ಬಿಕ್ಕಟ್ಟುಗಳಿಗೆ ಪರಿಹಾರ ಕಂಡುಕೊಳ್ಳಬಹುದಾಗಿದೆ.

ಶಿಕ್ಷಣ ಮಾಧ್ಯಮದ ಭಾಷಾ ಸಮಸ್ಯೆ ಪ್ರಸ್ತುತದಲ್ಲೂ ಬಗೆಹರಿಯದೆ ಜಟಿಲವಾಗಿದೆ. ಇದು ಭಾರತದ ಯಾವುದೇ ಒಂದು ರಾಜ್ಯದ ಸಮಸ್ಯೆಯಾಗಿರದೆ, ದೇಶದ ಸಮಸ್ಯೆ ಆಗಿದೆ. ಈ ಬಗ್ಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸ್ಪಷ್ಟ ನಿಲುವಿಗೆ ಬಾರದೆ ಸಂದಿಗ್ಧ ಸ್ಥಿತಿಯಲ್ಲಿವೆ. ಇಂದು ಶಿಕ್ಷಣ ಪ್ರತಿಯೊಂದು ಮಗುವಿನ ಹಕ್ಕಾಗಿದೆ. ಇದು ಆ ಮಗುವಿನ ಬೌದ್ಧಿಕ ಮತ್ತು ಮಾನಸಿಕ ಸ್ಥಿತಿಯನ್ನು ಅವಲಂಬಿಸಿದೆ. ಆದರೆ, ಈ ಬಗೆಯ ಸಂಗತಿಗಳು ಗೌಣವಾಗಿ ಪೋಷಕರ ಸ್ವಯಂ ಪ್ರತಿಷ್ಠೆ ಹಾಗೂ ಸರ್ಕಾರಗಳ ಅವೈಜ್ಞಾನಿಕ

ನೀತಿಗಳಿಂದಾಗಿ ಶಿಕ್ಷಣದ ಮೂಲ ಆಶಯಗಳೇ ಬದಲಾಗುತ್ತಿವೆ. ವ್ಯಕ್ತಿಯ ಕೌಶಲ್ಯಗಳ ಅಭಿವ್ಯಕ್ತಿಗೆ ಮಾಧ್ಯಮವಾಗಬೇಕಾದ ಶಿಕ್ಷಣ ಕೇವಲ ಅಂಕಗಳಿಕೆ ಹಾಗೂ ನೌಕರಿ ಗಳಿಕೆಯ ಉದ್ದೇಶಗಳಿಗೆ ಮಾತ್ರ ಸೀಮಿತಗೊಂಡಿದೆ.

ಲಾರ್ಡ್ ಮೆಕಾಲೆ ರೂಪಿಸಿದ, ೧೮೩೫ರಲ್ಲಿ ಜಾರಿಗೆ ಬಂದ ವಸಾಹತು ಶಿಕ್ಷಣ ಭಾರತೀಯ ಶೈಕ್ಷಣಿಕ ರಂಗದ ಮೈಲಿಗಲ್ಲು. ಇದು ಮುಂದೆ ಭಾರತದ ಹಲವು ಏಳು - ಬೀಳುಗಳಿಗೆ ಕಾರಣವಾದದ್ದನ್ನು ಚರಿತ್ರೆ ಈಗಾಗಲೇ ನಿರೂಪಿಸಿದೆ. ರಾಜರಾಮ್ ಮೋಹನರಾಯ್ ಅವರಂತಹ ಮೊದಲ ಹಂತದ ನಾಯಕರಿಗೆ ಹೊಸ ಶಿಕ್ಷಣ ಚಿಂತನೆ ಭಾರತೀಯರಿಗೆ ಜ್ಞಾನದ ದಾರಿದೀಪದಂತೆ ಕಂಡಿತು. ಆದುದರಿಂದ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಜಾರಿಗೊಳ್ಳಬೇಕೆಂಬ ಒತ್ತಾಸೆ ಅವರದಾಗಿತ್ತು.

ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧಿ, ಶ್ರೀ ಅರವಿಂದರು, ರಾಮ ಮನೋಹರ ಲೋಹಿಯಾ ಈ ಚಿಂತಕರು ಭಿನ್ನ ಆಲೋಚನೆಯನ್ನು ಮಂಡಿಸಿದ್ದಾರೆ. ಆದರೆ ಅಂತಿಮವಾಗಿ ಇವರೆಲ್ಲರ ಚಿಂತನೆ ಬ್ರಿಟಿಷ್ ಶಿಕ್ಷಣ ನೀತಿಗೆ ವಿರುದ್ಧವಾದದು ಎಂಬುದನ್ನು ಪ್ರಸ್ತುತ ಅಧ್ಯಾಯದಿಂದ ಅರಿಯಲಾಗಿದೆ. ಸ್ವಾಮಿ ವಿವೇಕಾನಂದರು ಭಾರತಕ್ಕೆ 'ಪುರುಷ ಸಿಂಹರನ್ನು' ಸೃಷ್ಟಿ ಮಾಡುವ ಶಿಕ್ಷಣ ಬೇಕೆಂದು ಬಯಸಿದರು. ಅಂತಿಮವಾಗಿ ಅವರು ಲೌಕಿಕ ಶಿಕ್ಷಣಕ್ಕಿಂತ ವ್ಯಕ್ತಿತ್ವದ ವಿಕಾಸಗೊಳಿಸುವ ಶಿಕ್ಷಣದ ಮಹತ್ವವನ್ನು ವಿವರಿಸಿದರು. ವಸಾಹತು ಶಿಕ್ಷಣ ಈ ರೀತಿಯ ಶಿಕ್ಷಣವನ್ನು ನೀಡುವ ಸಾಮರ್ಥ್ಯವನ್ನು ಹೊಂದಿಲ್ಲ ಎಂದಿದ್ದಾರೆ.

ಮಹಾತ್ಮಗಾಂಧಿ 'ಮೂಲ ಶಿಕ್ಷಣ'ದ ಅಗತ್ಯವನ್ನು ಒತ್ತಿ ಹೇಳಿದರು. ಮಗುವಿನ ಕಲಿಕೆ ಕೇವಲ ಕಲಿಕೆಯಾಗಿರಬಾರದು. ಅದು ಗಳಿಕೆಯೂ ಆಗಿರಬೇಕೆಂದು ಆಶಿಸಿದರು. ಅದಕ್ಕಾಗಿ ಹೊಸ ಶಿಕ್ಷಣ ಕ್ರಮವನ್ನೆ ರೂಪಿಸಿದರು. ಅದರೊಂದಿಗೆ ಬ್ರಿಟಿಷ್ ಶಿಕ್ಷಣ ಕ್ರಮದ ಲೋಪಗಳನ್ನು ಹೇಳಿದ್ದಾರೆ.

ಶ್ರೀ ಅರವಿಂದರು ನೈತಿಕ ಶಿಕ್ಷಣದ ಅಗತ್ಯವನ್ನು ವಿವರಿಸಿದ್ದಾರೆ. ಅದಕ್ಕಾಗಿ ಅವರು ಶಿಕ್ಷಣ ಕೇಂದ್ರವನ್ನು ತೆರೆದಿದ್ದರು. ಭಾರತೀಯ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ಶಿಕ್ಷಣ ವ್ಯವಸ್ಥೆಯನ್ನು ರೂಪಿಸಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಮಗುವಿಗೆ ನೈತಿಕತೆಯನ್ನು ಬೆಳೆಸಿದರೆ ಮುಂದೇ ಆತ ಸಮಾಜದಲ್ಲಿ ಉತ್ತಮ ಪ್ರಜೆಯಾಗುತ್ತಾನೆ. ಆದುದರಿಂದ ಸಮಾಜದ ಉನ್ನತಿ ಸಾಧ್ಯವಾಗುತ್ತದೆ ಎಂದಿದ್ದಾರೆ.

ರವೀಂದ್ರನಾಥ ಠಾಕೂರರು ತಮ್ಮ ಸೃಜನಶೀಲ ಕೃತಿಗಳಲ್ಲಿ ಮತ್ತು ವೈಚಾರಿಕ ಬರಹಗಳಲ್ಲಿ ಇಂಗ್ಲಿಷ್ ಶಿಕ್ಷಣದ ವೈಫಲ್ಯಗಳನ್ನು ಕುರಿತ ಚಿಂತನೆಗಳನ್ನು ಮಂಡಿಸಿದ್ದಾರೆ. ಶಾಂತಿನಿಕೇತನದಂತಹ ವಿದ್ಯಾಲಯವನ್ನು ತೆರೆದು ಪ್ರಾಯೋಗಿಕವಾಗಿ ಭಾರತೀಯರಿಗೆ ಅಗತ್ಯವಿರುವ ಶಿಕ್ಷಣ ವ್ಯವಸ್ಥೆಯ ಪರಿಚಯಿಸುವ ಪ್ರಯತ್ನ ನಡೆಸಿದ್ದಾರೆ. ಮಗುವನ್ನು

ನಾಲ್ಕು ಗೋಡೆಗಳ ನಡುವೆ ಬಂಧಿಸಿ ಶಿಕ್ಷಣ ನೀಡುವ ಕ್ರಮವನ್ನು ರವೀಂದ್ರರು ನಿರಾಕರಿಸುತ್ತಾರೆ. ಮಗು ಸಹಜವಾಗಿ ವಿದ್ಯೆಯನ್ನು ಕಲಿಯಬೇಕೆಂದು ಬಯಸುತ್ತಾರೆ.

ರಾಮ ಮನೋಹರ ಲೋಹಿಯಾ ಅವರಂತು ಇಂಗ್ಲಿಷ್ ಭಾಷೆಯು ಭಾರತೀಯ ಭಾಷೆಗಳು ಹಾಗೂ ಭಾರತೀಯರ ಬದುಕಿನಲ್ಲಿ ಉಂಟು ಮಾಡುತ್ತಿರುವ ಪರಿಣಾಮಗಳನ್ನು ಕುರಿತು ಕಟುವಾದ ವಿಮರ್ಶೆ ನಡೆಸಿದ್ದಾರೆ. ಅದಕ್ಕಾಗಿ 'ಇಂಗ್ಲಿಷ್ ತೊಲಗಿಸಿ' ಚಳವಳಿಯನ್ನು ರೂಪಿಸಿದವರು.

ಈ ರೀತಿಯಲ್ಲಿ ಈ ಎಲ್ಲಾ ಚಿಂತಕರ ಆಲೋಚನಾ ಕ್ರಮಗಳಲ್ಲಿ ಭಿನ್ನತೆ ಇದೆ. ಇವರೆಲ್ಲ ತಮ್ಮ ಜ್ಞಾನ ಹಾಗೂ ಅನುಭವಗಳ ಹಿನ್ನೆಲೆಯಲ್ಲಿ ಭಾರತಕ್ಕೆ ಅಗತ್ಯವಾದ ಶಿಕ್ಷಣ ಕ್ರಮಗಳನ್ನು ತಿಳಿಸಿದ್ದಾರೆ. ಒಟ್ಟಾರೆಯಾಗಿ ರಾಜರಾಮ್ ಮೋಹನರಾಯ್ ಅವರ ತರುವಾಯದ ಈ ನಾಯಕರು ಇಂಗ್ಲಿಷ್ ಶಿಕ್ಷಣ ಪದ್ಧತಿಯ ಲೋಪಗಳನ್ನು ವಿವರಿಸಿದ್ದಾರೆ. ಈ ಚಿಂತಕರ ಚಿಂತನ ಕ್ರಮಗಳು ಕನ್ನಡ ಕಾದಂಬರಿಕಾರರನ್ನು ಪ್ರಭಾವಿಸಿರುವುದನ್ನು ಮುಂದಿನ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಆದುದರಿಂದ ವಸಾಹತು ಶಿಕ್ಷಣ ಕುರಿತಂತೆ ರಾಷ್ಟ್ರೀಯ ಚಿಂತಕರ ಧೋರಣೆ ಮತ್ತು ಅಭಿಪ್ರಾಯಗಳು ಪ್ರಸ್ತುತ ಅಧ್ಯಯನಕ್ಕೆ ಅಗತ್ಯ ಭೂಮಿಕೆಯನ್ನು ಒದಗಿಸಿದೆ.

## ಕೊನೆ ಟಿಪ್ಪಣಿಗಳು

೧. ವಿಜಯ್ ಪೂಣಚ್ಚ ತಂಬಂಡ (ಪ್ರಸಂ), ಭಾರತ ಉಪಖಂಡದ ಆಧುನಿಕ ಪೂರ್ವ ಚರಿತ್ರೆ, ಕನ್ನಡ ವಿ ವಿ, ೨೦೧೦, ಪುಟ ೪೬೬.

೨. ಆರ್.ಸಿ.ಮಜುಂದಾರ (ಮೂಲ) ಎ.ವಿ.ನರಸಿಂಹಮೂರ್ತಿ (ಸಂ), ಬ್ರಿಟಿಷ್ ಪಾರಮ್ಯ ಮತ್ತು ಭಾರತೀಯ ಪುನರುಜ್ಜೀವನ (೨) ಭಾಗ – ೧, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೫, ಪುಟ ೧೨೫.

೩. ಅದೇ, ಪುಟ ೫೯.

೪. ನೂತನ ಶಿಕ್ಷಣ ನೀತಿ ಒಂದು ಸವಾಲು, ಭಾರತೀಯ ವಿದ್ಯಾರ್ಥಿ ಫೆಡರೇಷನ್ (?) ಬೆಂಗಳೂರು, ಪುಟ ೬–೭.

೫. ಬಸವರಾಜು ಕ್ಯಾತನಹಳ್ಳಿ, ಪ್ರಾಥಮಿಕ ಶಿಕ್ಷಣ ಒಂದು ಚಿಂತನ, ತ್ರಿವೇಣಿ ಪಬ್ಲಿಕೇಷನ್ಸ್ ಮೈಸೂರು, ೧೯೯೮, ಪುಟ ೫.

೬. ಕಾಳೇಗೌಡ ನಾಗವಾರ (ಪ್ರಸಂ), ಭಾಷೆ ಮತ್ತು ಇತಿಹಾಸ (ಸಂ.೩), ರಾಮಮನೋಹರ ಲೋಹಿಯಾ ಬರಹಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೮, ಪುಟ ೮.

೭. ಪ್ರಬುದ್ಧ ಕರ್ಣಾಟಕ, ಸಂಪುಟ–೪೧ ಸಂಚಿಕೆ–೧, ವಸ್ತುಕೋಶ, ಪುಟ ೨೨೧.

೮. ಅದೇ, ಪುಟ ೨೨೨.

೯. ಅದೇ, ಪುಟ ೨೨೪.

೧೦. ಪ್ರಬುದ್ಧ ಕರ್ಣಾಟಕಮ ಸಂಪುಟ–೫೧ ಸಂಚಿಕೆ–೪ಮ ವಸ್ತುಕೋಶ, ಪುಟ ೧೭೯.

೧೧. ಮಜುಂದಾರ ಆರ್.ಸಿ. (ಮೂಲ) ಎ.ವಿ.ನರಸಿಂಹಮೂರ್ತಿ (ಸಂ), ಬ್ರಿಟಿಷ್ ಪಾರಮ್ಯ ಮತ್ತು ಭಾರತೀಯ ಪುನರುಜ್ಜೀವನ (೨) ಭಾಗ – ೧, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೫, ಪುಟ ೫೬

೧೨. ರವೀಂದ್ರನಾಥ ಠಾಕೂರ (ಮೂಲ) ಸ್ವಾಮಿ ಶಂಕರಾನಂದ ಸರಸ್ವತಿ (ಅನು), ನಿಬಂಧಮಾಲ –೧, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೬೬, ಪುಟ ೨೮೭.

೧೩. ರವೀಂದ್ರನಾಥ ಠಾಕೂರ (ಮೂಲ) ಎನ್ ಜಿ ಕುಲಕರ್ಣಿ (ಅನು), ಬಾಲ ಸಾಹಿತ್ಯ, ಸಾಹಿತ್ಯ ಅಕಾಡೆಮಿ, ನವದೆಹಲಿ, ಪುಟ ೨೭೫.

೧೪. ಮಿತ್ರಾ ಅ ರಾ, ಅಂದನೂರು ಶೋಭ, ಶಿಕ್ಷಣ ಚಿಂತನ, ಬೆಂಗಳೂರು ವಿ ವಿ. ೧೯೭೭ ಪುಟ ೩೭.

೧೫. ರವೀಂದ್ರನಾಥ ಠಾಕೂರ (ಮೂಲ) ಸ್ವಾಮಿ ಶಂಕರಾನಂದ ಸರಸ್ವತಿ (ಅನು), ನಿಬಂಧಮಾಲ –೧, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೬೬, ಪುಟ ೨೮೭.

೧೬. ಅದೇ, ಪುಟ ೫೪.

೧೭. ಮಿತ್ರಾ ಅ ರಾ, ಅಂದನೂರು ಶೋಭ, ಶಿಕ್ಷಣ ಚಿಂತನ, ಬೆಂಗಳೂರು ವಿ ವಿ., ೧೯೭೭ ಪುಟ ೫೦.

೧೮. ಅದೇ, ಪುಟ. ೫೪

೧೯. ಉಮೇಶ ಎಚ್ ಎಸ್, ಜೀವನ್ಮುಕ್ತದ ಬದುಕು – ಬೆಳಕು, ಸಂಹಿತ, ಮೈಸೂರು, ೨೦೧೨, ಪುಟ ೯೬

೨೦. ಮಿತ್ರಾ ಅ ರಾ, ಅಂದನೂರು ಶೋಭ, ಶಿಕ್ಷಣ ಚಿಂತನ, ಬೆಂಗಳೂರು ವಿ ವಿ., ೧೯೭೭ ಪುಟ. ೫೫.

೨೧. ಉಮೇಶ ಎಚ್ ಎಸ್, ಜೀವನ್ಮುಕ್ತದ ಬದುಕು – ಬೆಳಕು, ಸಂಹಿತ, ಮೈಸೂರು, ೨೦೧೨, ಪುಟ ೯೮.

೨೨. ಸದಾಶಿವಯ್ಯ ಕೆ ಎಸ್, ಶ್ರೀ ಅರವಿಂದರ ಶೈಕ್ಷಣಿಕ ಚಿಂತನೆಗಳು, ವಿಶ್ವನಾಥ ಪ್ರಕಾಶನ, ಮೈಸೂರು, ೧೯೭೮, ಪುಟ ೯೯.

೨೩. ಅದೇ, ಪುಟ ೧೨೫.

೨೪. ಅದೇ, ಪುಟ ೮೧.

೨೫. ಕಾಳೇಗೌಡ ನಾಗವಾರ (ಪ್ರಸಂ), ಭಾಷೆ ಮತ್ತು ಇತಿಹಾಸ (ಸಂ.೩), ರಾಮಮನೋಹರ ಲೋಹಿಯಾ ಬರಹಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ೧೯೯೮, ಪುಟ. ೫೧

೨೬. ಅದೇ, ಪುಟ ೯.

## ಅಧ್ಯಾಯ ೪ : ಆಧುನಿಕ ಕನ್ನಡದ ಆರಂಭದ ಮೂರು ಕಾದಂಬರಿಗಳು

ಅಧ್ಯಾಯ – ೪

## ಆಧುನಿಕ ಕನ್ನಡದ ಆರಂಭದ ಮೂರು ಕಾದಂಬರಿಗಳು

ವಸಾಹತುಶಾಹಿಯ ಆಧುನಿಕತೆಯಿಂದಾಗಿ ಮುದ್ರಣಯಂತ್ರ, ವೃತ್ತಪತ್ರಿಕೆಗಳು ಭಾರತವನ್ನು ಪ್ರವೇಶಿಸಿದವು. ಒಂದೆಡೆ ಶಾಲೆಗಳು ಆರಂಭಗೊಂಡರೆ, ಮತ್ತೊಂದೆಡೆ ಪತ್ರಿಕೆಗಳಿಂದ ಓದು ಪ್ರಸರಣಗೊಳ್ಳತೊಡಗಿತು. ಇದರಿಂದ ಹಾಗೂ ಪಾಶ್ಚಾತ್ಯ ಸಾಹಿತ್ಯ ಕೃತಿಗಳ ಪ್ರೇರಣೆಗಳಿಂದ ಭಾರತೀಯ ಬರಹಗಾರರು ಪರಂಪರಾಗತ ಕಾವ್ಯ ರಚನೆಗಿಂತ ಭಿನ್ನವಾದ ಬರವಣಿಗೆಯಲ್ಲಿ ತೊಡಗಿದರು. ಅದರಲ್ಲಿಯೂ ಪಾಶ್ಚಾತ್ಯರ 'ನಾವೆಲ್'ನಿಂದ ಪ್ರಭಾವಿತಗೊಂಡವರು ಅದೇ ಮಾದರಿಗಳನ್ನು ದೇಶಿಯ ಭಾಷೆಗಳಲ್ಲಿ ರಚಿಸಿದರು. ನಾವೆಲ್ 'ಕಾದಂಬರಿ'ಯ ಹೆಸರು ಪಡೆದು ಜನಪ್ರಿಯವಾಯಿತು.

ಚ. ವಾಸುದೇವಯ್ಯ, ಆರ್. ರಘುನಾಥರಾಯ, ಶ್ರೀ ವೆಂಕಟಕೃಷ್ಣಯ್ಯನವರು ಹೊಸ ದೃಷ್ಟಿಯಲ್ಲಿ ಸಾಹಿತ್ಯ ರಚನೆಯಲ್ಲಿ ತೊಡಗಿದರು. ಆರ್. ಅಣ್ಣಾಜಿರಾಯ ಇಂಗ್ಲಿಷಿನ ಹಲವು ಕಥನ ಹಾಗೂ ಕಾದಂಬರಿಗಳ ಅನುವಾದದಲ್ಲಿ ತೊಡಗಿದರು. ಬಿ. ವೆಂಕಟಾಚಾರ್ಯರು ಬಂಗಾಳಿ ಸಾಹಿತ್ಯದ ಹಲವು ಕೃತಿಗಳನ್ನು ಕನ್ನಡಿಗರಿಗೆ ಪರಿಚಯಿಸಿದರು. ಬಿ. ವೆಂಕಟಾಚಾರ್ಯರ ೨೫ ಕೃತಿಗಳು ದೊರೆತಿದ್ದು ಅವುಗಳಲ್ಲಿ ಅರವತ್ತು ಕೃತಿಗಳು ಕಾದಂಬರಿ ಹಾಗೂ ಕಥನಗಳಾಗಿದ್ದವು.

> ಇಂತು ಒಂದರ ಮೇಲೊಂದು ಪ್ರಕಟವಾಗುತ್ತ ನಡೆದ ಈ ಕಾದಂಬರಿಗಳಲ್ಲಿ ಕನ್ನಡಿಗರು ನವೀನ ಪ್ರಪಂಚವನ್ನೇ ಕಂಡರು. ಆತುರದಿಂದ ಬರಮಾಡಿಕೊಂಡರು. ಬೇರೆ ಬೇರೆ ಪಠ್ಯಪುಸ್ತಕ ಸಮಿತಿಗಳವರು ಅವನ್ನು ಆಯ್ದುಕೊಂಡರು.[೧]

ಹೀಗೆ ಬಿ. ವೆಂಕಟಾಚಾರ್ಯ ಹಾಗೂ ಆ ಕಾಲದ ಅನುವಾದಕರು ಕನ್ನಡ ಸಾಹಿತ್ಯದಲ್ಲಿ ಕಾದಂಬರಿ ಸಾಹಿತ್ಯ ಪ್ರಕಾರವನ್ನು ನೆಲೆಗೊಳಿಸಲು ಶ್ರಮಿಸಿದ್ದಾರೆ. ಹೀಗೆ ಕಾದಂಬರಿ ಪ್ರಕಾರವು ಸ್ಪಷ್ಟರೂಪ ಪಡೆದುಕೊಂಡಿತು.

> ಹೊಸ ವಿದ್ಯಾವಂತ ವರ್ಗದ ಆಕಾಂಕ್ಷೆಗಳು ಉದಾರವಾದೀ ತಾತ್ವಿಕ ಧೋರಣೆಯಲ್ಲಿ ಧರ್ಮದಲ್ಲಿ, ಆರ್ಥಿಕತೆಯಲ್ಲಿ ಹೊಸ ಓದುವ ವರ್ಗ ಮತ್ತು ಪ್ರಕಟಣಾ ಕ್ಷೇತ್ರಗಳಲ್ಲಿ, ಸ್ತ್ರೀಯ ಸ್ಥಾನಮಾನಗಳನ್ನು ಕುರಿತ ನಿಲುವಿನಲ್ಲಿ, ಇತಿಹಾಸದ ಗ್ರಹಿಕೆಯ ಕ್ರಮದಲ್ಲಿ ವ್ಯಕ್ತವಾದಂತೆ ಕಾದಂಬರಿಯು ತನ್ನ ಆಕೃತಿಯನ್ನು ಕಂಡುಕೊಳ್ಳುವಲ್ಲಿ ಕೂಡ ವ್ಯಕ್ತವಾಗಿದೆ. 'ನಾವೆಲ್'ನ ಸಂವಾದಿಯಾಗಿ 'ಕಾದಂಬರಿ' ಎನ್ನುವ ಹೆಸರನ್ನು ಬಳಸಿಕೊಂಡುದೂ ಈ ಮೈತ್ರಿಯನ್ನು ಮಾರ್ಮಿಕವಾಗಿ ಸೂಚಿಸುವಂತಿದೆ.[೨]

ಕಾದಂಬರಿ ರಚನೆಯಲ್ಲಿ ತೊಡಗಿದ ಆರಂಭದ ಲೇಖಕರ ಮುಂದೆ ಸವಾಲುಗಳು ಎದುರಾದವು. 'ಕಾದಂಬರಿ'ಯನ್ನು ಮನೋರಂಜನೆಯ ಮಾಧ್ಯಮವಾಗಿ ಬಳಸಬೇಕೇ ಅಥವಾ ವಾಸ್ತವವಾದಿ ಚಿಂತನೆಗಳನ್ನು ಹೇಳುವುದಕ್ಕೆ ಉಪಯೋಗಿಸಬೇಕೆ? ಎನ್ನುವ ಜಿಜ್ಞಾಸೆಗಳು ಉಂಟಾದವು. ಆದರ್ಶವಾದದ ಹಿನ್ನೆಲೆಯಲ್ಲಿ ಸಮಾಜದ ನೀತಿಯನ್ನು ಕಟ್ಟುವ ಕ್ರಿಯೆಗಳಾಗಿ ಭಾರತೀಯ ಸಾಂಪ್ರದಾಯಿಕ ಮೌಲ್ಯ ಚಿಂತನೆಗಳನ್ನು ಪ್ರಚುರಪಡಿಸುವ ಸಾಧನಗಳಾಗಿ ಕಾದಂಬರಿಗಳು ರಚಿತಗೊಂಡವು.

ಸಮಕಾಲೀನ ಸಮಾಜದ ಸಾಮಾಜಿಕ ಸಮಸ್ಯೆಗಳಾದ ವಿಧವಾ ವಿವಾಹ, ಬಾಲ್ಯ ವಿವಾಹ, ಸ್ತ್ರೀ ಶಿಕ್ಷಣ, ಸದ್ಧರ್ಮ ಮೊದಲಾದ ವಿಷಯಗಳು ಕಾದಂಬರಿಗಳಲ್ಲಿ ಸ್ಥಾನ ಪಡೆದವು. ಆಗ ತಾನೇ ಜಾರಿಗೊಂಡಿದ್ದ 'ಇಂಗ್ಲಿಷ್ ಶಿಕ್ಷಣ'ದ ಸ್ವೀಕಾರ ಮತ್ತು ನಿರಾಕರಣೆಯನ್ನು ಕಾದಂಬರಿಗಳು ವಸ್ತುವನ್ನಾಗಿ ಸ್ವೀಕರಿಸಿದವು.

ಹೀಗೆ ಪ್ರಸ್ತುತ ಅಧ್ಯಾಯದಲ್ಲಿ ಕಾದಂಬರಿಗಳ ರಚನೆಗೆ ವಸಾಹತು ಶಿಕ್ಷಣ ಪ್ರೇರಣೆಯಾದ ಸಂಗತಿಯನ್ನು ವಿಶ್ಲೇಷಿಸಲಾಗಿದೆ. ಆರಂಭದ ಕನ್ನಡ ಕಾದಂಬರಿಕಾರರು ಮಂಡಿಸಿರುವ ಕಾದಂಬರಿಗಳ ರಚನೆಯ ಉದ್ದೇಶಗಳನ್ನು ವಿಶ್ಲೇಷಿಸಲಾಗಿದೆ. 'ಇಂದಿರಾಬಾಯಿ', 'ಇಂದಿರಾ', 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಗಳಲ್ಲಿನ ಪಾತ್ರಗಳ ವಿಶ್ಲೇಷಣೆಯಿಂದ ವಸಾಹತು ಶಿಕ್ಷಣ ಕುರಿತ ಕಾದಂಬರಿಕಾರರ ನಿಲುವುಗಳನ್ನು ನಿರ್ವಚಿಸುವ ಪ್ರಯತ್ನ ಮಾಡಲಾಗಿದೆ.

### ೪.೧ ವಸಾಹತು ಶಿಕ್ಷಣ : ಕಾದಂಬರಿಗಳ ರಚನೆ

ಒಂದು ನೆಲದ ಸಂಸ್ಕೃತಿಯು ಹೊರಗಿನ ಅತಿಕ್ರಮಣಕ್ಕೆ ಒಳಗಾದಾಗ ಅದು ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳಲು ಹೋರಾಡುತ್ತದೆ. ಈ ಹೋರಾಟದಲ್ಲಿ ಹೊರಗಿನ ಪ್ರಭಾವಕ್ಕೆ ಒಳಗಾಗಿ ಅತಿಕ್ರಮಿಸಿದ ಸಂಸ್ಕೃತಿಯ ಕೆಲವೊಂದು ಸಂಗತಿಗಳನ್ನು ತನ್ನೊಂದಿಗೆ ಸೇರಿಸಿಕೊಳ್ಳುತ್ತದೆ. ಒಂದು ಕಾಲದ ಭಾರತೀಯ ಪರಿಸರದಲ್ಲಿಯೂ ಇದೇ ನಡೆಯಿತು. ಭಾರತದಲ್ಲಿ ಜಾರಿಗೆ ಬಂದ ಇಂಗ್ಲಿಷ್ ಶಿಕ್ಷಣದ ಫಲವಾಗಿ ಸ್ಥಳೀಯರ ಜ್ಞಾನದ ಪರಿಧಿ ವಿಸ್ತರಿಸಿತು. ಪಾಶ್ಚಾತ್ಯ ಜ್ಞಾನ, ವಿಜ್ಞಾನ, ಸಾಹಿತ್ಯ ಈ ಮೊದಲಾದ ವಿಷಯಗಳಲ್ಲಿ ಭಾರತೀಯ ಮನಸ್ಸು ಆಸಕ್ತಿ ಹೊಂದಿತು. ಅದರೊಟ್ಟಿಗೆ ಪರಂಪರಾಗತವಾಗಿ ಬಂದಿರುವ ತನ್ನ ಧರ್ಮ, ಸಾಂಪ್ರದಾಯಿಕ ಮೌಲ್ಯಗಳನ್ನು ಪರಾಮರ್ಶಿಸುವ ಮತ್ತು ಪುನರ್ ನವೀಕರಿಸುವ ಕಾರ್ಯಗಳು ನಡೆದವು.

ರಾಜಾರಾಮ್ ಮೋಹನರಾಯ್, ದಯಾನಂದ ಸರಸ್ವತಿ ಅವರಂತಹ ಸಾಮಾಜಿಕ ಸುಧಾರಕರು ಭಾರತೀಯ ಹಿಂದೂ ಸಮಾಜದ ಸುಧಾರಣೆಗೆ ತೊಡಗಿದರು. ಇವರು ಆರಂಭಿಸಿದ ಸತಿ ಪದ್ಧತಿಯ ವಿರೋಧ, ವಿಧವಾ ವಿವಾಹ, ಸ್ತ್ರೀ ಶಿಕ್ಷಣ ಮೊದಲಾದ ಸುಧಾರಣ ಚಳವಳಿಗಳು ಸಂಪ್ರದಾಯವಾದಿಗಳ ವಿರೋಧಕ್ಕೆ ಕಾರಣವಾದವು. ಅಲ್ಲದೇ ಭಾರತೀಯ ಪ್ರಜ್ಞಾವಂತ ಯುವ ಜನತೆಯನ್ನು ಸೆಳೆದವು.

> ಸ್ವಾರ್ಥ ಪ್ರೇರಿತವಾದ ಬ್ರಿಟಿಷ್ ಶಿಕ್ಷಣ ಕ್ರಮ ಇಲ್ಲಿನ ಸಂಪ್ರಾದಾಯಿಕ ಶಿಕ್ಷಣ ಪದ್ಧತಿಯ ಮೇಲೆ ಬಲವಾದ ಪ್ರಭಾವ ಬೀರಿತು. ಆ ತನಕ ಶಿಕ್ಷಣ ಕ್ರಮದಲ್ಲಿದ್ದ 'ಬಾಯಿ ಪಾಠ'ದ ನಮೂನೆ ಹೋದುದೇ ವಸಾಹತುವಿನ ಪರಿಣಾಮ. ಈ ಬಾಯಿಪಾಠದ ಪರಂಪರೆಯ ಬದಲಿಗೆ ತುಂಬಿಕೊಂಡದ್ದು 'ಓದು'. ಈ ಘನಪಾಠಿಗಳ ಬದಲಿಗೆ ಬಂದ ಓದುಗರು ಇಂಗ್ಲಿಷನ್ನು, ಕನ್ನಡವನ್ನು ಓದಲು ಕಲಿತರು.[೩]

ಹೀಗೆ ಓದುವ ವರ್ಗ ರೂಪುಗೊಂಡಿದ್ದು ಭಾರತೀಯ ಭಾಷೆಗಳಲ್ಲಿ ಕಾದಂಬರಿಗಳು ರಚಿತಗೊಳ್ಳಲು ಪ್ರೇರಕ ಸಂಗತಿಗಳಲ್ಲಿ ಒಂದು ಅಂಶ. ಇದರೊಂದಿಗೆ ಆ ಕಾಲದಲ್ಲಿ ಪ್ರಕಟಗೊಳ್ಳುತಿದ್ದ ಪತ್ರಿಕೆಗಳು ಕಾದಂಬರಿಗಳ ರಚನೆಗೆ ಸಹಾಯಕವಾಗಿದ್ದವು.

ಹತ್ತೊಂಬತ್ತನೇ ಶತಮಾನದ ಆರಂಭ ಕಾಲಕ್ಕೆ ಭಾರತೀಯ ಭಾಷೆಗಳಲ್ಲಿ ಹೊಸ ಬಗೆಯ ಸಾಹಿತ್ಯ ಸೃಜನೆಗೊಂಡಿತು. ಅದರಲ್ಲೂ 'ಇಂಗ್ಲಿಷ್ ಶಿಕ್ಷಣದಿಂದ ಆಧುನಿಕತೆ, ಅದರಿಂದ ಸಮಾಜದ ಉನ್ನತಿ' ಎನ್ನುವ ಸಿದ್ಧಾಂತಕ್ಕೆ ಒಳಗಾಗಿ ಕಾದಂಬರಿಗಳು ರಚನೆಗೊಂಡವು. ಎರಡು ನೂರು ವರ್ಷಗಳ ಕಾಲ ಆಳ್ವಿಕೆ ನಡೆಸಿದ ಬ್ರಿಟಿಷ್ ವಸಾಹತುಶಾಹಿಗೆ ಜಗತ್ತಿನ ಇತರ ವಸಾಹತು ನೆಲೆಗಳಿಗಿಂತ ಭಾರತದ ಪರಿಸರದಲ್ಲಿ ಭಿನ್ನವಾದ ಪ್ರತಿರೋಧ ಎದುರಾಯಿತು. ಈಗಾಗಲೆ ಸಾವಿರಾರು ವರ್ಷಗಳಿಂದ ರೂಪುಗೊಂಡಿದ್ದ ಭಾರತೀಯ ಸಂಸ್ಕೃತಿಯೊಂದಿಗಿನ ಸಂಘರ್ಷ ಅದಕ್ಕೆ ಅನಿವಾರ್ಯವಾಗಿತ್ತು. ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ ಭಾರತೀಯ ಭಾಷೆಗಳಲ್ಲಿ ಕಾದಂಬರಿಗಳು ರಚನೆಗೊಂಡವು. [ಮರಾಠಿಯಲ್ಲಿ 'ಯಮುನಾ ಪರ್ಯಟನ' (೧೮೫೭), ಬಂಗಾಳಿಯಲ್ಲಿ 'ಅಲಾಲೇರ ಘರೇರದುಲಾಲ' (೧೮೫೮), 'ದುರ್ಗೇಶ ನಂದಿನಿ' (೧೮೬೫), ಅಸ್ಸಾಮಿ ಭಾಷೆಯಲ್ಲಿ 'ಭಾನುಮತಿ' (೧೮೯೦), ತಮಿಳಿನಲ್ಲಿ 'ಕಮಲಾಂಬಾಳ್ ಚರಿತಂ' (೧೮೯೩), ಮಲಯಾಳಂ ಭಾಷೆಯಲ್ಲಿ ಇಂದುಲೇಖ (೧೮೮೯) ಕಾದಂಬರಿಗಳು ಮುಖ್ಯವಾದವು.]

ಹತ್ತೊಂಬತ್ತನೇ ಶತಮಾನದ ಮಧ್ಯಕಾಲಕ್ಕೆ ಸಾಹಿತ್ಯ ರಚನೆಯಲ್ಲಿ ತೊಡಗಿದವರ ಎದುರಿಗೆ ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ತುಳಿತಕ್ಕೆ ಒಳಗಾದ ಜನವರ್ಗವಿತ್ತು. ಬಹುತೇಕ ಬರಹಗಾರರಿಗೆ ಭಾರತೀಯ ಪರಿಸರದಲ್ಲಿ ಬ್ರಿಟಿಷ್ ಆಧುನಿಕತೆ ಹಾಗೂ ಅದರ ಶಿಕ್ಷಣ ಕ್ರಮ ಸುಧಾರಣವಾದವಾಗಿ ಗೋಚರವಾಯಿತು. 'ಒಂದು ಪರಿಸರದ ಅಥವಾ ಸಮುದಾಯದ ವ್ಯಕ್ತಿ ತನ್ನ ಪರಿಸರದಿಂದ ದೂರಸರಿದು ನಗರಗಳಲ್ಲಿ ಶಿಕ್ಷಣ ಪಡೆಯುತ್ತಾನೆ. ಆತ ಮತ್ತೆ ತನ್ನ ಪರಿಸರಕ್ಕೆ ವಾಪಸ್ಸು ಬಂದು ತನ್ನ ಸಮುದಾಯವನ್ನು ಸುಧಾರಣೆಗೆ ತರುವ ಪ್ರಯತ್ನ ನಡೆಸುತ್ತಾನೆ'. ಈ ಬಗೆಯ ಕಥಾಹಂದರವನ್ನು ಹೊಂದಿದ ಹಲವು ಕಾದಂಬರಿಗಳು ರಚಿತವಾದವು.

> ಕನ್ನಡದ ಮೊದಲ ಕಾದಂಬರಿಗಳ ಸಿದ್ಧಾಂತವನ್ನು ಮಂಡಿಸಲು ವಸಾಹತುಶಾಹಿ ಆಡಳಿತ, ಅದಕ್ಕೆ ಎದುರಾಗಿ ರೂಪುಗೊಳ್ಳುತಿದ್ದ ರಾಷ್ಟ್ರ

ಕಲ್ಪನೆ, ವಸಾಹತು ಆಧುನಿಕತೆಯು ಭಾರತದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ ಬಗೆ ತೆರೆಯುತಿದ್ದ, ಉದೀಯಮಾನ ಇಂಗ್ಲೀಷ್ ವಿದ್ಯಾವಂತ ವರ್ಗ, ಅದರ ಸಾಂಸ್ಕೃತಿಕ ಕಾಳಜಿಗಳು ಮುಂತಾದವುಗಳ ವಿವರಣೆ ಅಗತ್ಯ[೭]

ಸಿಪಾಯಿ ದಂಗೆಯ (೧೮೫೭) ತರುವಾಯ ಭಾರತದ ಬಹುಭಾಗ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು. ಕರ್ನಾಟಕದ ಹಲವು ಪ್ರದೇಶಗಳು ಬಾಂಬೆ ಹಾಗೂ ಮದ್ರಾಸ್ ಪ್ರೆಸಿಡೆನ್ಸಿಗಳ ಆಳ್ವಿಕೆಯಲ್ಲಿದ್ದವು. ಹಳೆ ಮೈಸೂರು ಪ್ರಾಂತ್ಯದಲ್ಲಿ ಮೈಸೂರು ಒಡೆಯರು ಬ್ರಿಟಿಷ್ ಪ್ರಭುತ್ವದ ಒತ್ತಾಸೆಯಲ್ಲಿ ಆಳ್ವಿಕೆ ಮಾಡುತಿದ್ದರು. ಹೀಗೆ ಬ್ರಿಟಿಷರ ಆಳ್ವಿಕೆಯ ಜತೆ ಜತೆಗೆ ಹಿಂದೂ ಸಮಾಜ ಸುಧಾರಣೆಯ ಪ್ರಯತ್ನಗಳು ಆರಂಭಗೊಂಡವು. ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಭಾರತೀಯ ಭಾಷೆಗಳ ಸಾಹಿತ್ಯದ ರಚನೆಯಲ್ಲಿ ನೂತನ ಬದಲಾವಣೆಗಳಾದವು.

ಭಾರತೀಯ ಸಾಂಪ್ರದಾಯಿಕ ಶಿಕ್ಷಣದ ಮೇಲೆ ಇಂಗ್ಲೀಷ್ ಶಿಕ್ಷಣ ಕ್ರಮ ಬಹುದೊಡ್ಡ ಪರಿಣಾಮ ಬೀರಿತು. ಕಾಲಾನಂತರದಲ್ಲಿ ಅದು ಭಾರತೀಯ ಶಿಕ್ಷಣ ಪದ್ಧತಿ ಅವಸಾನದ ಸ್ಥಿತಿ ತಲುಪಲು ಕಾರಣವಾಯಿತು.

### ೪.೨ ಕನ್ನಡದ ಆರಂಭದ ಕಾದಂಬರಿಗಳು

ಈಗಾಗಲೇ ನಿರೂಪಿತವಾಗಿರುವಂತೆ ಕನ್ನಡ ಸಾಹಿತ್ಯ ಇಂಗ್ಲಿಷ್, ಬಂಗಾಳ ಹಾಗೂ ಇತರ ಭಾರತೀಯ ಭಾಷೆಗಳ ಸಾಹಿತ್ಯದಿಂದ ಪ್ರಭಾವಗೊಂಡಿದೆ. ಯೂರೋಪಿನ ವಾಸ್ತವವಾದದ ಪರಿಕಲ್ಪನೆಯ ಮಾದರಿಗಳನ್ನು ಅನುಸರಿಸಿದ ಭಾರತೀಯ ಕಾದಂಬರಿಯ ಪ್ರಕಾರ ಅದರ ನೆರಳಲ್ಲೇ ರೂಪುಗೊಂಡಿತು. ದೇಶಾದ್ಯಂತ ರಾಷ್ಟ್ರೀಯತೆಯ ಪರಿಕಲ್ಪನೆ ರೂಪುಗೊಳ್ಳುತ್ತಿದ್ದು, ಅದು 'ಭಾರತೀಯರ'ನ್ನು ಸೃಷ್ಟಿಮಾಡುವಲ್ಲಿ ಶ್ರಮಿಸುತ್ತಿತ್ತು. ವಸಾಹತುಶಾಹಿಯ ಎದುರು ಭಾರತೀಯತೆ ತನ್ನ ಅಸ್ಮಿತೆಗಾಗಿ ಹೋರಾಡುವುದು ಅನಿವಾರ್ಯವಾಗಿದ್ದು, ಅದರೊಂದಿಗೆ ಪಾಶ್ಚಾತ್ಯ ಚಿಂತನೆಯ ಅರೆಕಲ್ಲಿನಿಂದ ಭಾರತೀಯ ಅಥವಾ ಸನಾತನ ಧರ್ಮವೆನಿಸಿದ್ದ ಹಿಂದೂ ಧರ್ಮವನ್ನು ಚೂಪುಗೊಳಿಸುವ ಪ್ರಯತ್ನಗಳು ನಡೆದವು. ಇದರ ಫಲವಾಗಿ ಸತಿಪದ್ಧತಿ ನಿಷೇಧ, ಬಾಲ್ಯವಿವಾಹ ವಿರೋಧ, ವಿಧವಾ ವಿವಾಹ ಪ್ರೋತ್ಸಾಹ ಮೊದಲಾದ ಆಧುನಿಕ ಚಿಂತನ ಕ್ರಮಗಳು ಸಾಹಿತ್ಯದ ವಸ್ತುವಾದವು. ಅವುಗಳೊಂದಿಗೆ ಬ್ರಿಟಿಷರ ಸಾಮ್ರಾಜ್ಯಶಾಹಿ ಧೋರಣೆ, ದಬ್ಬಾಳಿಕೆ, ಜಮೀನ್ದಾರಿ ಪದ್ಧತಿ, ಇಂಗ್ಲಿಷರು ರೂಪಿಸಿದ ಶಿಕ್ಷಣ ಪದ್ಧತಿಯ ಪರ ವಿರೋಧಿ ನೆಲೆಗಳು ಕಾದಂಬರಿಯ ವಸ್ತುಗಳಾದವು. ಆಧುನಿಕತೆಯ ಪ್ರಭಾವದ ಹಿನ್ನೆಲೆಯಲ್ಲಿ ಸಾಹಿತ್ಯ ರಚನೆ ಬಹುಮುಖ್ಯವಾಗಿ ಪರಿಣಮಿಸಿತು.

ಈ ಬಗೆಯ ಚಿಂತನ ಕ್ರಮ ಭಾರತೀಯ ಪ್ರಾಂತೀಯ ಭಾಷೆಗಳನ್ನು ಪ್ರಭಾವಿಸಿತು. ವಸಾಹತುವಾದದ ಅನುಭವ ಭಾರತೀಯರಿಗೆ ಆತ್ಮಪರೀಕ್ಷೆಯ

ಅವಕಾಶಗಳನ್ನು ಒದಗಿಸಿತು ಮತ್ತು ಪ್ರಗತಿಗೆ ಕಾರಣವಾಯಿತು. ಈ ಅಂಶವನ್ನು ಹಲವಾರು ಭಾರತೀಯ ಚಿಂತಕರು ಒಪ್ಪಿಕೊಂಡರು. ಆದರೆ ಇದರ ಜೊತೆಗೇ ಅನ್ಯ ಸಂಸ್ಕೃತಿಯ ಅವಿವರ್ಷ ಸ್ವೀಕೃತಿಯಿಂದಾಗಿ ಸ್ವಸಂಸ್ಕೃತಿಯ ನಾಶದ ಭಯವು ಭಾರತೀಯರನ್ನು ಆವರಿಸಿಕೊಂಡಿತು ಎನ್ನುವುದನ್ನು ಮರೆಯಲಾಗದು.[೫]

ಸತ್ಯತೆ ಹೃದಯ ನಿರ್ಮಲತೆ ಇವೆರಡು ಸಾಧನೆಗಳೇ ನಮಗೆ ಇಹಪರದಲ್ಲಿಯೂ ಸಾರ್ಥಕಗಳಾಗಿವೆ. ಇವುಗಳನ್ನು ಬಿಟ್ಟು ಸರ್ವ ಪ್ರಯತ್ನಗಳು ನಿರರ್ಥಕವೇ. ಇದನ್ನು ಸಾದೃಶ್ಯಗೊಳಿಸುವುದೇ ಈ ಪುಸ್ತಕದ ಉದ್ದೇಶವು.[೬]

ಆಧುನಿಕ ಶಿಕ್ಷಣದಿಂದ ವಿವೇಕಹೀನರಾದ ಪೋರರದೊಂದು ಅಸಾಧ್ಯವಾದ ದಂಡೇ ಸಮಗ್ರ ದೇಶವನ್ನು ಆಕ್ರಮಿಸಿಕೊಂಡಿರುವುದು. ಈ ಮಾತುಗಳನ್ನು ನಾವು ಒಪ್ಪಿಕೊಳ್ಳದಿರುವುದ್ಹೇಗೆ, ಅಲ್ಪ ಜ್ಞಾನಹೊಂದಿ ಸ್ವಧರ್ಮ ಸ್ವಕುಲಾಚಾರಗಳನ್ನು ಕಿತ್ತು ಹಾಕಲೆತ್ನಿಸಿ, ತಮ್ಮ ಪೂರ್ವಜರನ್ನು ಅಪಹಾಸ್ಯ ಮಾಡಿ ಉತ್‌ಶೃಂಕುಲರಾಗಿ ತಿರುಗುವ ಪೋರರನ್ನು ಬೀದಿ ಬೀದಿಗೆ ಕಾಣುತ್ತೇವೆ. ಆದರೆ ಇದಕ್ಕಾಗಿ ನಮ್ಮ ಸ್ತ್ರೀಯರು ಕೂಡ ತಲೆತೆಗೆದು ಮನಸ್ಸಿಗೆ ಬಂದಂತೆ ಮೆರೆಯಬೇಕೆನು? ನಮ್ಮ ಕುಲಧರ್ಮಗಳು ನಮ್ಮ ಸ್ತ್ರೀಯರಿಂದಲೇ ಯಥಾಸ್ಥಿತವಾಗಿವೆ ಆದ್ದರಿಂದ ಸ್ತ್ರೀ ಶಿಕ್ಷಣದ ಕ್ರಮದಲ್ಲಿಟ್ಟ ದೋಷಗಳನ್ನು ತೆಗೆದುಹಾಕಿ ಅದನ್ನು ಉಚ್ಚಸ್ಥಿತಿಗೆ ತರುವ ಮಹತ್ಕಾರ್ಯದಲ್ಲಿ ಎಷ್ಟೋ ವಿಚಾರಶಾಲಿಗಳಾದ ದೇಶ ಸೇವಕರು ನಿರತರಾಗಿದ್ದಾರೆ. ಹಾಗೂ ಅವರ ಮಹತ್ಕಾರ್ಯಕ್ಕೆ ಯಶಸ್ಸು ತಕ್ಕ ಮಟ್ಟಿಗೆ ಬರುತ್ತಾ ನಡೆದಿದೆ.[೭]

ಇದರಲ್ಲಿ ಕಪಿಂಜಲನ ಯೋಗದಿಂದ ಸತ್ಯಮಾನವು, ಸುಮತಿಯ ವರ್ತನದಿಂದ ಸನ್ಮಿತ್ರನ ಮಹತ್ವವು, ಜೀವನ ಕುಲ ಪದ್ಮನಯನೆಯರ ಸ್ಥಿತಿಯಿಂದ ಸುಶಿಕ್ಷಿತರಾದ ಕುಲೀನ ಸ್ತ್ರೀಯರ ನಿರ್ಮಲಾಂತಃಕರಣವೂ, ದುಷ್ಟಬುದ್ಧಿಯ ಕುಮಾನ್ಯದಿಂದ ದುರ್ಜನರ ಕುಟಿಲತ್ವವು ಕಮಲಾಕ್ಷ ಪದ್ಮನಯನೆಯರಿಗೊದಗಿದ ಪ್ರಸಂಗಗಳಿಂದ ಅಪ್ರೌಢವಯಸ್ಕರ ಸ್ವತಂತ್ರಾಚರಣೆಯ ದುಷ್ಪರಿಣಾಮವು ಮೇಘನಾದ ಸಿಂಹನಾದರ ನಡಾವಳಿಯಿಂದ ತಾಮಸ ಪ್ರಕೃತಿಯಿಂದಾಗುವ ಹಾನಿಗಳು ವ್ಯಕ್ತವಾಗುತ್ತವೆ.[೮]

ಕನ್ನಡದ ಆರಂಭದ ಕಾದಂಬರಿಕಾರರ ಈ ಮಾತುಗಳನ್ನು ಗಮನಿಸಿದರೆ ಅವರು ತಮ್ಮ ಸಮಕಾಲೀನ ಬದುಕಿನ ಒಳಿತಿಗಾಗಿ ಹಂಬಲಿಸಿದವರು ಎಂಬುದು ಅರಿವಿಗೆ ಬರುತ್ತದೆ. ಸಮಾಜದಲ್ಲಿ ಸದ್ಧರ್ಮವೇ ಗೆಲ್ಲಬೇಕು ಎನ್ನುವ ಪ್ರಬಲವಾದ ಆಶಯ ಅವರದು. ಸಮಾಜ ಸುಧಾರಕರು ಹಿಂದೂ ಧರ್ಮದ ಪುನರುಜ್ಜೀವನಕ್ಕೆ ತೊಡಗುತ್ತಾರೆ.

ಅಂತೆಯೇ ಬರಹಗಾರರು ತಮ್ಮ ಕೃತಿಗಳಲ್ಲಿ ಈ ತೆರನಾದ ಪ್ರಯತ್ನಗಳನ್ನು ನಡೆಸಿದ ಸಂಗತಿಗಳು ಅವರ ಆಶಯಗಳಿಂದ ಗೋಚರವಾಗುತ್ತವೆ.

ಗುಲ್ವಾಡಿ ವೆಂಕಟರಾಯರು 'ತನ್ನ ಕಣ್ಣೆದುರಿನ ಸಮಾಜದಲ್ಲಿನ ಕ್ಷೋಭೆಯನ್ನು ತೊಡೆದು ಹಾಕುವ ಪ್ರಯತ್ನ' ಕಾದಂಬರಿಯ ರಚನೆ ಎನ್ನುತ್ತಾರೆ. ಹಾಗಾಗಿಯೇ ಸನಾತನ ಧರ್ಮವನ್ನು ಪಾಶ್ಚಾತ್ಯ ಮೌಲ್ಯಗಳ ಮುಖಾಂತರವೇ ಶುದ್ಧೀಕರಿಸುವ ಪ್ರಯತ್ನದಲ್ಲಿ ಅವರು ತೊಡಗುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಅದುವರೆಗೆ ರಚನೆಯಾಗಿದ್ದ ನೀತಿಕಥೆಗಳು ಬೋಧನೆಯನ್ನು ಪ್ರಧಾನ ಆಶಯವನ್ನಾಗಿಸಿಕೊಂಡಿದ್ದವು. ಕಾದಂಬರಿಯ ಜಗತ್ತು ಆಶಯಗಳ ಜತೆಗೆ ವಾಸ್ತವತೆಯ ಸಂಗತಿಗಳನ್ನು ನಿರೂಪಿಸುವ ಮುಖೇನ ಸಾಮಾಜಿಕ ಸ್ವಾಸ್ಥ್ಯವನ್ನು ಹೆಚ್ಚಿಸುವ ಕೆಲಸದಲ್ಲಿ ತೊಡಗಿದವು.

ಈ ರೀತಿಯಲ್ಲಿ ರಾಷ್ಟ್ರೀಯತೆಯ ಆಶಯಗಳು, ಪಶ್ಚಿಮದ ಸುಧಾರಣಾ ತತ್ವಗಳು, ವಸಾಹತುಶಾಹಿಯ ಪ್ರಭಾವ, ಅದರ ಮೂಲಕ ಉಂಟಾದ ಶಿಕ್ಷಣ, ಸ್ತ್ರೀ ಸುಧಾರಣಾ ಪ್ರಯತ್ನಗಳು – ಈ ಮೊದಲಾದ ಸಂಗತಿಗಳು ಕನ್ನಡದ ಆರಂಭ ಕಾಲದ ಕಾದಂಬರಿಗಳನ್ನು ಪ್ರೇರೇಪಿಸಿವೆ. ಹಿಂದೂ ಧರ್ಮದ ಪುನರುಜ್ಜೀವನದ ಭಾಗವಾಗಿ ಕಾದಂಬರಿ ಸಾಹಿತ್ಯ ಪ್ರಕಾರ ರಚನೆಯಾಗಿರುವುದನ್ನು ಇದುವರೆಗಿನ ಹಲವು ಅಧ್ಯಯನಗಳು ನಿರೂಪಿಸಿವೆ. ಕನ್ನಡದ ಆರಂಭದ ಕಾದಂಬರಿಗಳೆಂದು ಗುರುತಿಸಿಕೊಂಡಿರುವ 'ಇಂದಿರಾಬಾಯಿ', 'ಇಂದಿರಾ', 'ಮಾಡಿದುಣ್ಣೋ ಮಹಾರಾಯ' ಕಾದಂಬರಿಗಳ ಬಗ್ಗೆ ಈಗಾಗಲೇ ಹಲವು ಅಧ್ಯಯನಗಳು ನಡೆದಿವೆ. ಪ್ರಸ್ತುತ ಅಧ್ಯಯನದಲ್ಲಿ ಈ ಕಾದಂಬರಿಗಳು ವಸಾಹತು ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆಗಳನ್ನು ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

**೪.೩ ಇಂದಿರಾಬಾಯಿ**

೧೮೯೯ರಲ್ಲಿ ಪ್ರಕಟಗೊಂಡಿರುವ 'ಇಂದಿರಾಬಾಯಿ' ಕಾದಂಬರಿಯನ್ನು, ಕನ್ನಡದ ಆರಂಭದ ಸಾಮಾಜಿಕ ಕಾದಂಬರಿಯೆಂದು ಗುರುತಿಸಲಾಗಿದೆ. 'ಸತ್ಯತೆ, ಹೃದಯ ನಿರ್ಮಲತೆ ಇವರೆಡು ಸಾಧನೆಗಳೇ ನಮಗೆ ಇಹಪರದಲ್ಲಿಯೂ ಸಾರ್ಥಕಗಳಾಗಿವೆ. ಇವುಗಳನ್ನು ಬಿಟ್ಟು ಸರ್ವ ಪ್ರಯತ್ನಗಳೂ ನಿರರ್ಥಕವೇ. ಇದನ್ನು ಸಾದೃಶ್ಯಗೊಳಿಸುವುದೇ ಈ ಪುಸ್ತಕದ ಉದ್ದೇಶವು' ಎಂದು ಹೇಳಿಕೊಳ್ಳುವ ಗುಲ್ವಾಡಿ ವೆಂಕಟರಾಯರು ಕಾದಂಬರಿಗೆ 'ಸದ್ಧರ್ಮ ವಿಜಯ' ಎನ್ನುವ ಉಪಶೀರ್ಷಿಕೆಯನ್ನು ನೀಡಿದ್ದಾರೆ.

ಚಿಕ್ಕವಯಸ್ಸಿಗೆ ವಿಧವೆಯಾಗುವ ಇಂದಿರಾಬಾಯಿಯು ಸಮಾಜ ಸುಧಾರಕ ಅಮೃತರಾಯ ಹಾಗೂ ಆತನ ಹೆಂಡತಿ ಜಲಜಾಕ್ಷಿಯ ಸಹಕಾರದಿಂದ ಶಿಕ್ಷಿತಳಾಗುತ್ತಾಳೆ ಹಾಗೂ ಆಧುನಿಕ ಶಿಕ್ಷಣ ಪಡೆದು ಕಮಲಾಪುರಕ್ಕೆ ಅಸಿಸ್ಟೆಂಟ್ ಕಮಿಷನರ್ ಆಗುವ ಭಾಸ್ಕರ್‌ರಾಯನನ್ನು ಮದುವೆಯಾಗುತ್ತಾಳೆ. ವಿಧವಾ ವಿವಾಹದಂತಹ ಸಾಮಾಜಿಕ

ಸಮಸ್ಯೆಯನ್ನು ಚರ್ಚಿಸುವ ಈ ಕಥನವು ಆಧುನಿಕ ಶಿಕ್ಷಣ ಪದ್ಧತಿಯ ಬಗ್ಗೆ ಪರ ಹಾಗೂ ವಿರುದ್ಧವಾದ ನಿಲುವುಗಳನ್ನು ಪ್ರಕಟಿಸುತ್ತಲೇ ಶಿಕ್ಷಣದ ಸಾರ್ಥಕತೆಯನ್ನು ನಿರೂಪಿಸುತ್ತದೆ.

ಇಂದಿರಾಬಾಯಿಯ ತಂದೆ ಭೀಮರಾಯ ಹಾಗೂ ತಾಯಿ ಅಂಬಾಬಾಯಿಯ ಕುತಂತ್ರದಿಂದ ಸುಂದರರಾಯ ಸಾಯುತ್ತಾನೆ. ಈತನ ಮಗ ಭಾಸ್ಕರರಾಯನು ಅಮೃತರಾಯನ ಆಶ್ರಯವನ್ನು ಪಡೆದು ಓದಿನಲ್ಲಿ ಆಸಕ್ತಿ ಬೆಳೆಸಿಕೊಳ್ಳುತ್ತಾನೆ. ಉನ್ನತ ವ್ಯಾಸಂಗ ಮಾಡಿ ಸಿವಿಲ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುತ್ತಾನೆ. ಕಮಲಾಪುರಕ್ಕೆ ಮೊದಲ ಸ್ಥಳೀಯ ಅಸಿಸ್ಟೆಂಟ್ ಕಮಿಷನರ್ ಆಗಿ ನೇಮಕಗೊಳ್ಳತ್ತಾನೆ. ಹೀಗೆ ಸಾಮಾನ್ಯನೊಬ್ಬ ಓದಿನಿಂದಾಗಿ ಸಮಾಜದ ಅತ್ಯುನ್ನತ ಹುದ್ದೆಗೇರುವ ಮೂಲಕ ಸಾಮಾಜಿಕ ಮನ್ನಣೆಗೆ ಪಾತ್ರನಾಗುತ್ತಾನೆ.

ಚಿಕ್ಕವಯಸ್ಸಿಗೆ ವಿಧವೆಯಾದ ಇಂದಿರಾಬಾಯಿಗೆ ಆಕೆಯ ತಂದೆ ಮತ್ತು ತಾಯಿ ಧರ್ಮ ಹಾಗೂ ಸಂಪ್ರದಾಯವನ್ನು ಮುಂದು ಮಾಡಿ ಮಾನಸಿಕವಾಗಿ ತೊಂದರೆ ಕೊಡುತ್ತಾರೆ. ತನ್ನ ತಂದೆ ತಾಯಿಯರ ಈ ವರ್ತನೆಯಿಂದ ಬೇಸತ್ತ ಇಂದಿರಾಬಾಯಿಯು ಸಮಾಜ ಸುಧಾರಕ ಅಮೃತರಾಯನ ಆಶ್ರಯ ಪಡೆಯುತ್ತಾಳೆ. ಅಮೃತರಾಯನ ನೆರವಿನಿಂದ ಸತಾರ ನಗರದಲ್ಲಿರುವ ಪಂಡಿತೆ ಆನಂದಬಾಯಿಯು ನಡೆಸುತ್ತಿದ್ದ ಸರಸ್ವತಿ ಮಂದಿರಕ್ಕೆ ಸೇರುತ್ತಾಳೆ. ಅಲ್ಲಿ ಇಂಗ್ಲಿಷ್, ಸಂಸ್ಕೃತ ಭಾಷೆಗಳನ್ನು, ಗಣಿತಶಾಸ್ತ್ರ, ಚರಿತ್ರೆ, ಸ್ತ್ರೀಧರ್ಮನೀತಿ ಮೊದಲಾದ ವಿಷಯಗಳನ್ನು ಕಲಿಸುತ್ತಾರೆ. ಅಲ್ಲಿ ಕಲಿತ ಇಂದಿರಾಬಾಯಿಯು ಶಿಕ್ಷಿತಳಾಗುತ್ತಾಳೆ.

'ಸದ್ಧರ್ಮ ವಿಜಯ'ವನ್ನೇ ಕೇಂದ್ರವಾಗಿಸಿಕೊಂಡಿರುವ 'ಇಂದಿರಾಬಾಯಿ' ಕಾದಂಬರಿಯಲ್ಲಿ ಇಂಗ್ಲಿಷ್ ಶಿಕ್ಷಣ ಪದ್ಧತಿಯ ಬಗ್ಗೆ ಪರ ಮತ್ತು ವಿರುದ್ಧವಾದ ಚಿಂತನೆಗಳ ಜಿಜ್ಞಾಸೆ ನಡೆಯುತ್ತದೆ. ಸಮಕಾಲೀನ ಭಾರತೀಯ ಸಮಾಜ ಪರಕೀಯ ಸಂಸ್ಕೃತಿಯ ಅತಿಕ್ರಮಣವನ್ನು ಪರಿಭಾವಿಸಿದ ಬಗೆ ಹಾಗೂ ಅದಕ್ಕೆ ತೋರಿದ ಪ್ರತಿಕ್ರಿಯೆ ಈ ಕಾದಂಬರಿಯಲ್ಲಿ ನಿರೂಪಿತಗೊಂಡಿದೆ. ಬ್ರಿಟಿಷರು ಜಾರಿಗೊಳಿಸಿದ ಇಂಗ್ಲಿಷ್ ಶಿಕ್ಷಣವು ಕಲಿಕೆಯ ಹೊಸ ಮಾದರಿ ಎನ್ನಿಸಿಕೊಳ್ಳದೆ ಭಾರತೀಯ ಧರ್ಮವನ್ನು, ಸಾಮಾಜಿಕ ವ್ಯವಸ್ಥೆಯನ್ನು ಅಪವಿತ್ರಗೊಳಿಸಲಿಕ್ಕಾಗಿ ಮಾಡಿದ ತಂತ್ರ ಎಂಬುದನ್ನು ಕಾದಂಬರಿಯ ಕೆಲವು ಪಾತ್ರಗಳು ಪ್ರತಿಪಾದಿಸುತ್ತವೆ.

ಈ ಕಾದಂಬರಿಯ ರಚನೆಯ ಕಾಲಕ್ಕೆ (೧೮೯೯) ದೇಶಾದ್ಯಂತ ರಾಷ್ಟ್ರೀಯತೆಯ ಪರಿಕಲ್ಪನೆ ಸ್ಪಷ್ಟರೂಪ ಪಡೆಯುತಿತ್ತು. ಹಾಗಾಗಿ ವಸಾಹತುಶಾಹಿ ಆಡಳಿತಕ್ಕೆ ವಿರೋಧ ಉಂಟಾದಂತೆಯೇ ಬ್ರಿಟಿಷರು ಜಾರಿಗೆ ತಂದ ಶಿಕ್ಷಣ ವ್ಯವಸ್ಥೆಯ ಬಗೆಗೂ ಪ್ರತಿರೋಧವಿತ್ತು. ಮತ್ತೊಂದೆಡೆ ಭಾರತೀಯ ಉನ್ನತ (ಆರ್ಥಿಕವಾಗಿ ಮತ್ತು ಜಾತಿ ವ್ಯವಸ್ಥೆಯಲ್ಲಿ) ವರ್ಗ ಇದಕ್ಕೆ ವಿರುದ್ಧವಾದ ನೆಲೆಯಲ್ಲಿ ಹೊಸ ಬಗೆಯ ಈ ಶಿಕ್ಷಣ

ಕ್ರಮವನ್ನು, ಸಾಮಾಜಿಕ ಬದಲಾವಣೆಗೆ ಪೂರಕವಾದುದು ಎಂಬ ನಿಲುವಿನಿಂದ ಸ್ವಾಗತಿಸಿತು. ಹೊಸ ಕಾಲೇಜುಗಳನ್ನು ಸ್ಥಾಪಿಸಬೇಕೆಂದು ಆಂಗ್ಲರಲ್ಲಿ ಮನವಿ ಮಾಡಿತ್ತು. ಇಂತಹ ವೈರುಧ್ಯ ಸಂಗತಿಗಳು ಕಾದಂಬರಿಯಲ್ಲಿ ಚರ್ಚೆಗೊಂಡಿವೆ.

ಸತಾರ ನಗರದ ಸರಸ್ವತಿ ಮಂದಿರದಲ್ಲಿ ಶಿಕ್ಷಣ ಪಡೆದ ಕೆಲವು ಹುಡುಗಿಯರು ಆನಂದಬಾಯಿಯ ಬೋಧನೆಗೆ ಒಳಗಾಗಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡರು ಎನ್ನುವ ಸುದ್ದಿಯನ್ನು ಕೇಳಿದಾಗ –

> ಇಂಗ್ರೇಜಿ ಕಲಿತವರು ಜಾತಿ ಕೆಡದೆ ಇರಲಾರರೆಂದು ನಮ್ಮಂಥವರು ಹೇಳಿದರೆ ಕೆಲವರೆಲ್ಲ ಕುಚೋದ್ಯ ಮಾಡುತ್ತಿದ್ದರಷ್ಟೇ ಈಗ ಹೇಗೆ ನಮ್ಮ ಮಾತು. ಪಾದ್ರಿಗಳ ಪುಸ್ತಕಗಳನ್ನು ಓದುವುದು, ಇಂಗ್ರೇಜಿ ಕಲಿಯುವುದು ಹೀಗೆಲ್ಲಾ ದುರ್ಬುದ್ಧಿ ಮಾಡಬೇಡವೆಂದು ಇಂದಿರೆಗೆ ನಾವು ಕಡ್ಡಿ ಮುರಿದು ಹೇಳಿದರೂ ಕೇಳದೆ ಸೆಣಸಾಡಿಕೊಂಡು ಮನೆ ಬಿಟ್ಟು ಹೋಗಿ, ಈಗ ಪರವೂರಲ್ಲಿ, ಜಾತಿಕೆಟ್ಟು ಪರರ ಕೈಯಲ್ಲಿ ಬಿದ್ದು ಸಾಯುವ ಕಾಲ ಬಂತಷ್ಟೆ

ಎನ್ನುವ ಪ್ರತಿಕ್ರಿಯೆ ಭೀಮರಾಯ ಮತ್ತು ಅಂಬಾಬಾಯಿಯವರದು. ಈ ರೀತಿಯ ಅಭಿಪ್ರಾಯಗಳು ಇಂಗ್ಲಿಷ್ ಶಿಕ್ಷಣವು ಜಾರಿಯಾದ ಕಾಲದಲ್ಲಿ ಧರ್ಮ ಸಂಘರ್ಷದ ವಿಷಯವಾಗಿತ್ತು ಎಂಬುದು ತಿಳಿಯುತ್ತದೆ. 'ಇಂಗ್ಲಿಷ್ ಕಲಿಕೆ'ಯಿಂದ ಜಾತಿ ಕೆಟ್ಟುಹೋಗುತ್ತದೆ ಮತ್ತು ಇದು ಭಾರತೀಯರ ಜಾತಿ ಕೆಡಿಸಲಿಕ್ಕಾಗಿ ಬ್ರಿಟಿಷರು ರೂಪಿಸಿರುವ ತಂತ್ರವಾಗಿಯೂ ಕಾಣಿಸುತ್ತದೆ ಎಂಬುದು ಜನರ ನಂಬಿಕೆಯಾಗಿತ್ತು. ಅದರೊಂದಿಗೆ ಆ ಕಾಲಕ್ಕೆ ಇಂಗ್ಲಿಷ್ ಶಿಕ್ಷಣವು ಒಂದು ವರ್ಗದ ಜನರಿಂದ ತಿರಸ್ಕಾರಕ್ಕೆ ಒಳಗಾಗಿತ್ತು.

'ಇಂದಿರಾಬಾಯಿ' ಕಾದಂಬರಿಯಲ್ಲಿ ನಿರೂಪತಗೊಂಡಿರುವ 'ಇಂಗ್ಲಿಷ್ ಶಿಕ್ಷಣದ' ಬಗೆಗಿನ ತಿರಸ್ಕಾರವು ಯಾವುದೇ ಬಗೆಯ ತಾತ್ವಿಕತೆಯನ್ನು ಹೊಂದಿಲ್ಲ. ಧರ್ಮದ ಹೆಸರಿನಲ್ಲಿ ನಡೆಸಿಕೊಂಡು ಬಂದಿರುವ ಮೌಢ್ಯಗಳು, ಸಂಪ್ರದಾಯದ ಹೆಸರಿನಲ್ಲಿ ನಡೆಸುತ್ತಿರುವ ಅನಾಚಾರಗಳು ಬಯಲಾಗುವ ಆತಂಕದಿಂದ, ಧರ್ಮರಕ್ಷಕರು ಎಂದು ಕರೆಸಿಕೊಳ್ಳುವ ಸೋಗಲಾಡಿ ಜನರು ಇಂಗ್ಲಿಷ್ ಶಿಕ್ಷಣವನ್ನು ವಿರೋಧಿಸುತ್ತಾರೆ. ಕಾದಂಬರಿಯಲ್ಲಿ ಇಂಗ್ಲಿಷ್ ಭಾಷೆಯ ಬಗೆಗಿನ ತಿರಸ್ಕಾರ ಹಾಗೂ ಅದಕ್ಕೆ ಅವರು ನೀಡುವ ಕಾರಣಗಳನ್ನು ಕಮಲಾಪುರದ ಧಾರ್ಮಿಕ ಗುರುವಿನ ಮಾತುಗಳಲ್ಲಿ ಗುರುತಿಸಬಹುದು.

> ಕಮಲಾಪುರದ ಯೌವನಸ್ಥರೆಲ್ಲರೂ ಇಂಗ್ರೇಜಿ ಎಂಬ ಮ್ಲೇಂಛ ಭಾಷೆಯನ್ನು ಕಲಿತು ವರ್ಣಾಶ್ರಮ ಧರ್ಮ, ಕರ್ಮಗಳನ್ನು ಕೈಗೊಳ್ಳದೆ ಕುಲಭ್ರಷ್ಟರಾಗಿ ವಿಲಾಯಿತಿಗೆ ಹೋಗುವುದು ಮುಂತಾದ ಅಧರ್ಮ ಕಾರ್ಯಗಳಲ್ಲಿ ಪ್ರವೃತ್ತರಾಗಿ ವಿಧವಾ ವಿವಾಹ, ಯುವತಿ ವಿವಾಹ ಮುಂತಾದ ಘೋರ

ಕರ್ಮಗಳನ್ನು ಮಾಡಲು ತೊಡಗಿ ಗುರು, ದೇವರಲ್ಲಿ ಲೇಶಾಂಶವಾದರೂ ಭಯ ಭಕ್ತಿ ಇಲ್ಲದೆ ಗುರುಮಠಕ್ಕೆ ವರುಷಾಸನ, ವಂತಿಕೆ ವರಾಡಗಳನ್ನು ಕೊಡದೆ, ಅಪಹರಿಸಿ ತಿಂದು, ಕರೆದು ಕೇಳಿದರೆ ಇಂಗ್ರೇಜಿ ಶಬ್ದಗಳನ್ನು ಮಧ್ಯ ಮಧ್ಯದಲ್ಲಿ ಸೇರಿಸಿ ಅರ್ಥವಿಲ್ಲದ ಹೊಲಸು ಮಾತುಗಳನ್ನಾಡಿ ಗುರು ಸಂಸ್ಥಾನಕ್ಕೂ ಗಂಡಾಂತರ ತರುತ್ತಾರೆ. ಹಾಗಾಗಿ ಒಬ್ಬ ಧರ್ಮ ಮೇಲ್ವಿಚಾರಕನನ್ನು ನೇಮಿಸಬೇಕು[೧೦]

ಧಾರ್ಮಿಕ ಚಿಂತನೆಗಳು ಪ್ರಶ್ನಾತೀತವಾಗಿದ್ದ ಸಮಾಜದಲ್ಲಿ ಹೊಸ ಬಗೆಯ ಶಿಕ್ಷಣ ವ್ಯವಸ್ಥೆಯು ಪ್ರಶ್ನಿಸುವ ಮನೋಭಾವಕ್ಕೆ ಕಾರಣವಾಗುತ್ತದೆ. ಅನಾಚಾರಗಳಲ್ಲಿ ತೊಡಗಿಕೊಂಡಿದ್ದವರು ಇಂಗ್ಲಿಷ್ ಭಾಷೆಗೆ 'ಕುಲಭ್ರಷ್ಟಗೊಳಿಸುವ ಸಾಧನ' ಎನ್ನುವ ಆರೋಪ ಮಾಡುತ್ತಾರೆ. ಬದಲಾವಣೆಯನ್ನು ಬಯಸದ ಮಂದಿಯಲ್ಲಿ ವಸಾಹತು ಶಿಕ್ಷಣ ಹೊಸ ರೀತಿಯ ತಲ್ಲಣಗಳನ್ನು ಉಂಟುಮಾಡುತ್ತದೆ. ಹೀಗೆ ಹೊಸ ಶಿಕ್ಷಣ ಧಾರ್ಮಿಕ ಕ್ಷೇತ್ರವನ್ನು ಪಲ್ಲಟಗೊಳಿಸಿದ್ದನ್ನು ಗುಲ್ವಾಡಿ ವೆಂಕಟರಾಯರು ನಿರೂಪಿಸಿದ್ದಾರೆ.

ಕಾದಂಬರಿಯಲ್ಲಿನ ಜಲಜಾಕ್ಷಿ, ಅಮೃತರಾಯ, ಭಾಸ್ಕರರಾಯ ಮತ್ತು ಇಂದಿರಬಾಯಿ ಅವರು ಅಕ್ಷರ ಕಲಿಕೆಯಿಂದ ಸಂಸ್ಕಾರ, ಸನ್ನಡತೆ ಉಂಟಾಗುತ್ತದೆ ಎಂದುಕೊಂಡವರು.

ನನ್ನ ಬುದ್ಧಿಗೆ ತೋರುವುದೇನೆಂದರೆ, ವಿದ್ಯೆ ಕಲಿಯುವುದರಿಂದ ಯಾವುದೊಂದು ಕೇಡಿಲ್ಲ, ಮಾತ್ರವಲ್ಲ, ಎಲ್ಲ ಕೇಡುಗಳಿಂದಲೂ ತಪ್ಪಿಸಿಕೊಳ್ಳಬಹುದು[೧೧]

ಇಂದಿರಾಬಾಯಿಯ ನುಡಿಗಳಲ್ಲಿ ಕಾದಂಬರಿಕಾರರಿಗೆ ತಮ್ಮ ಕಾಲದಲ್ಲಿ ಶಿಕ್ಷಣದ ಬಗೆಗಿನ ಮೌಲ್ಯ ಮತ್ತು ಅದರ ಅಗತ್ಯದ ಅರಿವು ಎಷ್ಟರಮಟ್ಟಿಗಿತ್ತು ಎಂಬುದು ಮನದಟ್ಟಾಗುತ್ತದೆ. 'ಇಂದಿರಾಬಾಯಿ' ಕಾದಂಬರಿಯು ಸದ್ಧರ್ಮದ ಕತೆಯನ್ನು ಹೇಳಲಿಕ್ಕೆ ಪ್ರಯತ್ನಿಸುತ್ತದೆ. ಅದರೊಟ್ಟಿಗೆ ೧೯ನೇ ಶತಮಾನದ ಅಂತ್ಯ ಕಾಲಕ್ಕೆ ಭಾರತೀಯ ಸಮಾಜದಲ್ಲಿ ಇಂಗ್ಲಿಷ್ ಶಿಕ್ಷಣ ಉಂಟುಮಾಡಿದ ಸಂಚಲನ ಹಾಗೂ ಅದನ್ನು ಒಪ್ಪಿಕೊಂಡವರು ಹಾಗೂ ತಿರಸ್ಕರಿಸಿದವರ ವಾದ ಹಾಗೂ ನಂಬಿಕೆಗಳನ್ನು ನಿರೂಪಿಸುತ್ತದೆ.

ಶಿಕ್ಷಣದಿಂದಾಗಬಹುದಾದ ಬದಲಾವಣೆ ಮತ್ತು ಅದರಿಂದ ಒದಗಬಹುದಾದ ತೊಡಕುಗಳು ಇವೆರಡರ ಬಗ್ಗೆ ಗುಲ್ವಾಡಿ ವೆಂಕಟರಾಯರು ಸಮಚಿತ್ತದಿಂದ ತಮ್ಮ ಅಭಿಪ್ರಾಯಗಳನ್ನು ನಿರೂಪಿಸಿದ್ದಾರೆ. ಇಂದಿರಾಬಾಯಿಯ ಮರು ಮದುವೆ ವಿದ್ಯಾವಂತನಾದ ಭಾಸ್ಕರರಾಯನೊಂದಿಗೆ ನಡೆಯುತ್ತದೆ. ಇಂಥ ಸಂಗತಿಗಳಿಗೆ ಸಮಾಜದಿಂದ ಎದುರಾದ ಎಲ್ಲ ಬಗೆಯ ವಿರೋಧಗಳಿಗೂ ಆ ಎರಡು ಪಾತ್ರಗಳು ವಿದ್ಯೆ ಕಲಿತು ಪ್ರಬುದ್ಧರಾದುದೆ ಉತ್ತರವಾಗಿ ನಿರೂಪಿತಗೊಂಡಿದೆ.

ಇಂದಿರಾಬಾಯಿಯನ್ನು ದಕ್ಷಿಣ ಕನ್ನಡ ಜಿಲ್ಲೆಯ ಕಲೆಕ್ಟರನಾಗಿದ್ದ ಕೋಚ್‌ಮನ್ ಎಂಬ ಆಂಗ್ಲ ಇಂಗ್ಲಿಷಿಗೆ ೧೯೦೩ರಲ್ಲಿ ತರ್ಜುಮೆ ಮಾಡಿದ.

ಈ ಸಂಗತಿಯನ್ನು ಪ್ರಸ್ತಾಪಿಸುತ್ತ ಶಾಂತಿನಾಥ ದೇಸಾಯಿ 'ಅವರಿಗೆ ಈ ಕಾದಂಬರಿಯಲ್ಲಿಯ ಇಂಗ್ಲಿಷ್ ಶಿಕ್ಷಣದ ಹಾಗೂ ಪಾಶ್ಚಾತ್ಯೀಕರಣದ ಉಧೋ ಉಧೋ ಆದದ್ದು ಬಹಳ ಸೇರಿರಬೇಕು! ಬ್ರಿಟಿಷ್ ಸಾಮ್ರಾಜ್ಯಶಾಹಿಯ ಒಳ್ಳೆಯ ಪರಿಣಾಮಗಳಿಗೆ ಈ ಕಾದಂಬರಿ ಸಾಕ್ಷಿಯಾಗಿದೆ ಎಂದು ಹಿಗ್ಗಿ ಭಾಷಾಂತರಿಸಿರಬೇಕು' ಎಂದು ಷರಾ ಬರೆದಿದ್ದಾರೆ. ಆದರೆ ಶಿಕ್ಷಿತ ವರ್ಗವನ್ನು ಇಂದಿರಾಬಾಯಿ ವ್ಯಂಗ್ಯಕ್ಕೆ ಗುರಿಮಾಡಿದ ವಿಧಾನವನ್ನು ಅವರು ಗಮನಿಸಿಲ್ಲ[೧೨]

ಇಪ್ಪತ್ತನೇ ಶತಮಾನದ ಆರಂಭಕ್ಕೆ ಕ್ರಾಂತಿಕಾರಕ ಎನ್ನಬಹುದಾದ ಈ ಮೇಲಿನ ಹೇಳಿಕೆಯಲ್ಲಿ ಶಾಂತಿನಾಥ ದೇಸಾಯಿಯವರು ಅರ್ಥೈಸುವ ಹಾಗೆ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಭಾಗವಾದ ಇಂಗ್ಲಿಷ್ ಶಿಕ್ಷಣದ ಬಗೆಗಿನ ಒಲವು ಕಾದಂಬರಿಯಲ್ಲಿ ವ್ಯಕ್ತಗೊಂಡಿದೆ. ಅಂತೆಯೇ ಜಿ ಎಸ್ ಅಮೂರರು ಗುರುತಿಸಿರುವಂತೆ ಗುಲ್ವಾಡಿಯವರು ಆಧುನಿಕ ಶಿಕ್ಷಣವನ್ನು ವ್ಯಂಗಕ್ಕೂ ಗುರಿಮಾಡಿದ್ದಾರೆ.

**೪.೪ ಇಂದಿರಾ**

ಕೆರೂರು ವಾಸುದೇವಾಚಾರ್ಯರು ರಚಿಸಿರುವ 'ಇಂದಿರಾ' ಕಾದಂಬರಿಯು ೧೯೦೮ರಲ್ಲಿ ಪ್ರಕಟಗೊಂಡಿದೆ. ಕನ್ನಡದಲ್ಲಿ ಕಾದಂಬರಿ ಪ್ರಕಾರ ವಿಕಾಸಗೊಳ್ಳುತಿದ್ದ ಕಾಲದಲ್ಲಿ ರಚಿತಗೊಂಡು ವಸ್ತು ಮತ್ತು ಭಾಷೆಯ ದೃಷ್ಟಿಯಿಂದ ಗಮನ ಸೆಳೆದಿದೆ. ಈ ಕೃತಿಯಲ್ಲಿ ವಿಧವಾ ವಿವಾಹ, ಸ್ತ್ರೀ ಶಿಕ್ಷಣ ಮೊದಲಾದ ಸಂಗತಿಗಳನ್ನು ಕುರಿತು ಚರ್ಚಿಸಲಾಗಿದೆ.

ಈ ದೇಶದಲ್ಲಿ ಸ್ವಾತಂತ್ರ್ಯ ಸಂಗ್ರಾಮದೊಟ್ಟಿಗೆ ಹಿಂದೂ ಧರ್ಮ ಮತ್ತು ಸಮಾಜದ ಸುಧಾರಣೆಯ ಪ್ರಯತ್ನಗಳು ನಡೆದವು. ಹಲವಾರು ಮಂದಿ ಇಂತಹ ಸುಧಾರಣೆಯ ಕಾರ್ಯದಲ್ಲಿ ತೊಡಗಿಕೊಂಡರು. ಇವರುಗಳಿಂದ ಭಾರತೀಯ ಬರಹಗಾರರು ಪ್ರಭಾವಿತರಾಗಿದ್ದಾರೆ. ಕೆರೂರು ವಾಸುದೇವಾಚಾರ್ಯರು ಇದರಿಂದ ಹೊರತಾದವರಲ್ಲ. ಆ ಕಾಲದ ಸಮಾಜ ಸುಧಾರಣೆಯ ಹಲವು ಆಶಯಗಳು 'ಇಂದಿರಾ' ಕಾದಂಬರಿಯಲ್ಲಿ ನಿರೂಪಿತವಾಗಿವೆ.

ಶ್ರೀರಂಗಪಟ್ಟಣ ಮತ್ತು ಬೆಂಗಳೂರಿನ ಪರಿಸರಗಳಲ್ಲಿ ನಡೆಯುವ ಈ ಕಾದಂಬರಿಯ ಕಥೆಯು ಹಲವು ತಿರುವುಗಳನ್ನು ಪಡೆಯುತ್ತಾ ಕುತೂಹಲಕ್ಕೆ ಎಡೆಮಾಡಿಕೊಡುತ್ತದೆ. ಇಂದಿರೆ ಮತ್ತು ರಮಾಕಾಂತರ ಪ್ರೇಮ ಕಥನವನ್ನು ಕೇಂದ್ರವಾಗಿಸಿ ವಿಧವಾ ವಿವಾಹ, ಸ್ತ್ರೀ ಶಿಕ್ಷಣ ಮತ್ತು ಸ್ತ್ರೀ ಸ್ವಾತಂತ್ರ್ಯದಂತಹ ಪ್ರಗತಿಮುಖಿ ವಿಷಯಗಳ ಬಗ್ಗೆ ಗಮನ ಸೆಳೆಯುತ್ತದೆ. ಈ ಕಾದಂಬರಿಯ ಕಮಲಕಾಂತ ಮತ್ತು ಜಯರಾಯರು

ಮುಂಬೈಯಲ್ಲಿ ಓದುವಾಗ ವಾಸುದೇವರಾವ ಮೋಡಕ, ವಿಷ್ಣುಪಂತಭಿಡೆ, ಬಖಲೆ ಮೊದಲಾದ ಸಮಕಾಲೀನ ಸುಧಾರಣ ಚಳವಳಿಕಾರರಿಂದ ಪ್ರಭಾವಿತರಾಗಿ ವಿಧವಾ ವಿವಾಹ ಹಾಗೂ ಸ್ತ್ರೀ ಶಿಕ್ಷಣದ ಬಗ್ಗೆ ಒಲವನ್ನು ಹೊಂದಿರುತ್ತಾರೆ. ಕಮಲಕಾಂತನ ಮಗ ರಮಾಕಾಂತ ಈ ಕಾದಂಬರಿಯ ನಾಯಕನಾದರೆ, ಜಯರಾಯನ ಮಗಳು ಇಂದಿರಾ ಕಥಾನಾಯಕಿ. ಸಮಾಜಿಕ ಸುಧಾರಕರು ಪ್ರಭುತ್ವದ ನಿಯಂತ್ರಣದಲ್ಲಿದ್ದು ಪ್ರಭುತ್ವದ ನೀತಿಗಳಲ್ಲಿರುವ ಲೋಪದೋಷಗಳನ್ನು ತಿಳಿಸುವ, ವಿರೋಧಿಸುವ, ತಿದ್ದುವ ಸಂದಿಗ್ಧತೆ ಎದುರಾಗಿತ್ತು. ಭಾರತೀಯ ಬರಹಗಾರರು ಈ ದಿಕ್ಕಿನಲ್ಲಿ ವಸಾಹತು ಆಡಳಿತದ ವಿರುದ್ಧ ತಮ್ಮ ವಿರೋಧಗಳನ್ನು ದಾಖಲಿಸಿದ್ದಾರೆ. 'ಇಂದಿರಾ' ಕಾದಂಬರಿಯು ವಸಾಹತುಶಾಹಿಯ ಪ್ರಭಾವಗಳನ್ನು ಚರ್ಚಿಸಿದೆ.

ಕಮಲಕಾಂತ ಮತ್ತು ಜಯರಾಯ ಇಬ್ಬರು ಇಷ್ಟಪಟ್ಟಿದ್ದ ದೇವಯಾನಿಯು ತನ್ನ ಹದಿನಾಲ್ಕನೇ ವಯಸ್ಸಿಗೆ ವಿಧವೆಯಾದಳು. ದೇವಯಾನಿಯ ತಂದೆ ಅವಳಿಗೆ ಉನ್ನತ ಶಿಕ್ಷಣ ಕೊಡಿಸಿದನು. ಸ್ತ್ರೀ ಶಿಕ್ಷಣದ ಹಿನ್ನಲೆಯಲ್ಲಿ ಇದು ಆ ಕಾಲಕ್ಕೆ ಮಹತ್ವದ ಸಂಗತಿ. ಕಮಲಾಕಾಂತ ಆಧುನಿಕ ಶಿಕ್ಷಣ ಪಡೆದು ಅಪಾರವಾದ ವಿದ್ವತ್ತು ಮತ್ತು ಮನ್ನಣೆಗಳನ್ನು ಪಡೆದುಕೊಂಡಿದ್ದನು. ಇವರ ಮಗನಾದ ರಮಾಕಾಂತನು ತಂದೆಯಂತೆಯೇ ತಾನು ಪಡೆದ ಶಿಕ್ಷಣದಿಂದಾಗಿ ಗೌರವವನ್ನು ಸಂಪಾದಿಸಿಕೊಂಡಿದ್ದನು.

ಪ್ರೇಮಕತೆಯೇ ಪ್ರಧಾನವಾಗಿರುವ ಈ ಕಾದಂಬರಿಯಲ್ಲಿನ ಹಲವು ಪಾತ್ರಗಳು ಆಧುನಿಕ ಶಿಕ್ಷಣ ಮತ್ತು ಸ್ತ್ರೀ ಶಿಕ್ಷಣ ಕುರಿತಂತೆ ಮಾತನಾಡಿವೆ. ಸ್ತ್ರೀ ಶಿಕ್ಷಣದ ಪರಿಣಾಮಗಳನ್ನು ಕುರಿತ ಜಿಜ್ಞಾಸೆಯು ವ್ಯಕ್ತಗೊಂಡಿದೆ. ಒಮ್ಮೆ ರಮಾಕಾಂತನೊಂದಿಗೆ ಮಾತನಾಡುತ್ತಾ, ಇಂದಿರೆಯು –

> ಆಧುನಿಕ ಶಿಕ್ಷಣದಿಂದ ಈಗಿನ ತರುಣರ ಮೇಲೆ ದುಷ್ಪರಿಣಾಮಗಳಾಗುತ್ತವೆಂಬ ಕೆಲವು ಗುಣಾವಗುಣ ನಿರೀಕ್ಷರ ಮತವಿರುವುದೆಂದು ಕೇಳುತ್ತೇನೆ. ಇಂತಹ ಶಿಕ್ಷಣ ಹೊಂದಿದ ತರುಣ ತರುಣಿಯರಲ್ಲಿ ಆದ್ಯಕವಿಗಳು ವರ್ಣಿಸಿದಂತೆ ನಿರ್ಮಲಂತಃಕರಣದವರು ಸಿಕ್ಕುವರೇನು?[೧೩]

ಎಂದು ಪ್ರಶ್ನಿಸುತ್ತಾಳೆ. ಈ ಮಾತುಗಳು ಆಧುನಿಕ ಶಿಕ್ಷಣ ಪಡೆದವರ ವ್ಯಕ್ತಿತ್ವಗಳು ಬದಲಾಗುತ್ತವೆ ಎನ್ನುವ ಅಭಿಪ್ರಾಯವನ್ನು ಸೂಚಿಸುತ್ತವೆ. ನವ ಶಿಕ್ಷಣದ ಬಗ್ಗೆ ಮೆಚ್ಚುಗೆಯನ್ನು ಸೂಚಿಸುತ್ತಲೇ ಈ ಬಗೆಯ ಅನುಮಾನಗಳು ಕಾದಂಬರಿಯ ಉದ್ದಕ್ಕೂ ವ್ಯಕ್ತಗೊಂಡಿವೆ. ಈ ಮಾತುಗಳು 'ಇಂದಿರಾಬಾಯಿ' ಕಾದಂಬರಿಯಂತೆಯೇ ಇಲ್ಲಿಯೂ ವಸಾಹತು ಶಿಕ್ಷಣವು ವ್ಯಕ್ತಿತ್ವ ನಾಶಪಡಿಸುವ ಒಂದು ಉಪಾಯದಂತೆ ನಿರೂಪಿತಗೊಂಡಿದೆ. ಈ ಸಂಗತಿಗಳನ್ನು ವಿಶ್ಲೇಷಿಸಿದಾಗ ಕಾದಂಬರಿಯ ರಚನೆಯ ಕಾಲದಲ್ಲಿನ ಸಮಾಜ

ವಸಾಹತು ಶಿಕ್ಷಣಕ್ಕೆ ತೋರಿಸಿರುವ ಪ್ರತಿಕ್ರಿಯೆಗಳು ಮನನವಾಗುತ್ತವೆ. ಮತ್ತೊಂದು ಸಂದರ್ಭದಲ್ಲಿ ರಮಾಕಾಂತನು ದೇವಯಾನಿಯ ಪ್ರಶ್ನೆಯೊಂದಕ್ಕೆ ಉತ್ತರಿಸುತ್ತ 'ಸ್ತ್ರೀ ಉಚ್ಚ ಶಿಕ್ಷಣ ಪಡೆಯುವುದು ಅವಶ್ಯ' ಎನ್ನುತ್ತಾನೆ. ಹೀಗೆ 'ಇಂದಿರಾ' ಕಾದಂಬರಿಯು ಆಧುನಿಕ ಶಿಕ್ಷಣದ ಸಾಧಕ -- ಬಾಧಕಗಳನ್ನು ಚರ್ಚಿಸುತ್ತಲೇ ಸ್ತ್ರೀ ಶಿಕ್ಷಣದ ಅಗತ್ಯತೆಯನ್ನು ವಿವರಿಸುತ್ತದೆ.

**೪.೫ ಮಾಡಿದ್ದುಣ್ಣೋ ಮಹಾರಾಯ**

ಆಧುನಿಕ ಕನ್ನಡ ಸಾಹಿತ್ಯಕ್ಕೆ ಹೊಸ ಮಾರ್ಗ ರೂಪಿಸಿದ ನಿರ್ಮಾತೃಗಳಲ್ಲಿ ಎಂ ಎಸ್ ಪುಟ್ಟಣ್ಣ (೧೮೫೮-೧೯೩೦)ನವರು ಒಬ್ಬರು. ಇವರು ಹತ್ತೊಂಬತ್ತನೇ ಶತಮಾನದ ಕೊನೆ ಹಾಗೂ ಇಪ್ಪತ್ತನೇ ಶತಮಾನದ ಆರಂಭದ ಕಾಲದಲ್ಲಿ ಸಹ ಉಪಾಧ್ಯಾಯರಾಗಿ, ಭಾಷಾಂತರಕಾರರಾಗಿ, ತಾಲ್ಲೂಕಿನ ಆಡಳಿತ ನಡೆಸುವ ಅಮಲ್ದಾರರಾಗಿ, ಪಠ್ಯ ಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ಶಿಕ್ಷಣ ಕ್ಷೇತ್ರದ ಹಲವು ವಿಭಾಗಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ.

ರೂಪಾಂತರ, ಸಂಪಾದನೆ, ಸಂಗ್ರಹ, ಜೀವನಚರಿತ್ರೆ, ಕಾದಂಬರಿಗಳು – ಹೀಗೆ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ರಚನೆ ಮಾಡಿರುವ ಎಂ.ಎಸ್ ಪುಟ್ಟಣ್ಣನವರು ಮೂರು ಕಾದಂಬರಿಗಳೂ ಸೇರಿದಂತೆ ಒಟ್ಟು ೨೬ ಕೃತಿಗಳನ್ನು ಹಾಗೂ ೫೦ಕ್ಕೂ ಹೆಚ್ಚು ಲೇಖನಗಳನ್ನು ರಚಿಸಿದ್ದಾರೆ. ಇವರ ಬಹುತೇಕ ಕೃತಿಗಳಲ್ಲಿ ಶಿಕ್ಷಣ, ವಿದ್ಯಾಭ್ಯಾಸ ಪದ್ಧತಿ, ಕಲಿಸುವವರ ವರ್ತನೆ, ಕಲಿಸುವ ಮಾರ್ಗ ಮುಂತಾದ ಸಂಗತಿಗಳನ್ನು ಕುರಿತು ಚಿಂತನೆ ನಡೆದಿದೆ. ಅವರ ನೀತಿ ಚಿಂತಾಮಣಿ, ಕನ್ನಡ ಒಂದನೆಯ ಪುಸ್ತಕವು, ಸುಮತಿ ಮದನಕುಮಾರರ ಚರಿತ್ರೆ, 'ಮಾಡಿದ್ದುಣ್ಣೋ ಮಹಾರಾಯ'ದಂತಹ ಕೃತಿಗಳಲ್ಲಿ ವಿದ್ಯಾಭ್ಯಾಸ ಪದ್ಧತಿಯ ಬಗೆಗಿನ ಚಿಂತನೆಗಳನ್ನು ನಾವು ಗುರುತಿಸಬಹುದಾಗಿದೆ.

ಎಚ್.ಎಸ್. ಸುಜಾತ ಅವರು ತಿಳಿಸುವಂತೆ ಪುಟ್ಟಣ್ಣನವರು ಚಾಮರಾಜನಗರದ ಅಮಲ್ದಾರರಾಗಿದ್ದಾಗ ಕೆಳವರ್ಗದ ಜನರು ಅಕ್ಷರ ಕಲಿಯುವುದು ಸುಲಭವಾಗಿರಲಿಲ್ಲ. ಇದಕ್ಕೆ ಆಗಿನ ಕಾಲದ ಜಾತಿಪದ್ಧತಿ, ಸಮಾಜದ ಶ್ರೇಣೀಕರಣ ವ್ಯವಸ್ಥೆಗಳು ಕಾರಣವಾಗಿದ್ದವು. ಅಂತಹ ಸಂದರ್ಭದಲ್ಲಿ ಸರ್ಕಾರದ ಧನ ಸಹಾಯಕ್ಕಾಗಿ ಕೈ ಚಾಚದೆ ಪ್ರತಿ ಬೀದಿಗಳಲ್ಲಿ, ಚಾವಡಿ ಕಟ್ಟೆ, ಮಂಟೇಸ್ವಾಮಿ ಗುಡಿ, ಮುಂತಾದೆಡೆ ಜನ ಸೇರುವಲ್ಲೆಲ್ಲಾ ಅಕ್ಷರಾಭ್ಯಾಸ ನಡೆಯುವಂತೆ ವಿದ್ಯಾಭ್ಯಾಸದ ಯೋಜನೆಗಳನ್ನು ತಯಾರಿಸಿದರು. ದುಡ್ಡಿನ ಅವಶ್ಯಕತೆ ಕಂಡು ಬಂದಾಗ, ತಾವೇ ತುಂಬುವಷ್ಟು ತುಂಬಿ ಆಯಾ ಬೀದಿಯ ಜನರಲ್ಲಿ ಚಂದಾ ಎತ್ತಿ ಅಕ್ಷರ ಕಲಿಕೆಗೆ ನೆರವಾಗುತ್ತಾರೆ. ಎಲ್ಲರಿಗೂ ಕನ್ನಡ ಭಾಷೆ ಓದಿ ಬರೆಯಲು ಬರಬೇಕು. ಮಾತು ಶುದ್ಧವಾಗಿರಬೇಕು. ಜನ ಸ್ವಚ್ಛವಾಗಿರಬೇಕು ಎಂದು ಆಶಿಸಿದ್ದರು. ಅಲ್ಲದೆ ಈ ಬಗ್ಗೆ ಜನರಲ್ಲಿ ತಿಳಿವಳಿಕೆಯನ್ನು

ಮೂಡಿಸಲು ಪ್ರಯತ್ನಿಸುತ್ತಿದ್ದರು. ಹೀಗೆ ನಾಡಿನ ಎಳೆಯರ ಬಗ್ಗೆ ಪುಟ್ಟಣ್ಣನವರಿಗಿದ್ದ ಪ್ರೀತಿ ಹಾಗೂ ಶಿಕ್ಷಣದ ಬಗೆಗಿನ ಆಸಕ್ತಿ ಈ ರೀತಿಯ ಕೃತಿಗಳ ರಚನೆಗೆ ಮೂಲ ಪ್ರೇರಣೆ ಎಂಬುದನ್ನು ಗುರುತಿಸಬಹುದು. ಪುಟ್ಟಣ್ಣನವರು ಉಪಾಧ್ಯಾಯರಾಗಿ ವೃತ್ತಿಜೀವನವನ್ನು ಆರಂಭಿಸಿದರು ಎಂಬುದು ಗಮನಾರ್ಹ ಸಂಗತಿ.

ಇಂಗ್ಲಿಷ್ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಹೊಸ ಬಗೆಯ ಸಂಚಲನ ಉಂಟಾದ ಸಂದರ್ಭದಲ್ಲಿ ಎಂ.ಎಸ್ ಪುಟ್ಟಣ್ಣನವರು ಸಾಹಿತ್ಯ ರಚನೆಯಲ್ಲಿ ತೊಡಗಿದರು. ಇವರ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯು ೧೯೧೫ರಲ್ಲಿ ಪ್ರಕಟಗೊಂಡಿದೆ. ನೀತಿ ಪ್ರತಿಪಾದನೆಯನ್ನು ಕೇಂದ್ರವಾಗಿಸಿಕೊಂಡಿರುವ ಈ ಕಾದಂಬರಿಯ ನಾಲ್ಕು ಮತ್ತು ಐದನೆಯ ಅಧ್ಯಾಯಗಳು ಕಲಿಸುವ ವಿಧಾನಗಳ ಬಗ್ಗೆ, ಸರಿ ತಪ್ಪುಗಳ ವಿಶ್ಲೇಷಣೆಗಳನ್ನು ಒಳಗೊಂಡಿವೆ.

ಈ ಕಾದಂಬರಿಯ ಪ್ರಧಾನ ಪಾತ್ರವಾದ ಸದಾಶಿವ ದೀಕ್ಷಿತರ ಮಗ ಮಹಾದೇವನಿಗೆ ವಿದ್ಯಾಭ್ಯಾಸ ನೀಡುವ ಸನ್ನಿವೇಶವಿದೆ. ಮಹಾದೇವನಿಗೆ ವಿದ್ಯಾ ಕಲಿಸುವ ಪಂತರ ನಾರಪ್ಪ ಎನ್ನುವ ಗುರು ಅತಿಯಾದ ಬೆತ್ತದ ಶಿಕ್ಷೆಯನ್ನು ನೀಡುತ್ತಿರುತ್ತಾನೆ. ಮಹಾದೇವನೊಬ್ಬನಿಗೆ ಅಲ್ಲದೇ ಅಲ್ಲಿ ಕಲಿಯುತ್ತಿದ್ದ ಎಲ್ಲ ಮಕ್ಕಳಿಗೂ ಅದೇ ಬಗೆಯ ದಂಡನೆಯಿರುತ್ತದೆ. ಆ ವರ್ತನೆ ಕಾದಂಬರಿಯಲ್ಲಿ ಈ ಕೆಳಗಿನಂತೆ ಚಿತ್ರಿತಗೊಂಡಿದೆ.

> ಹುಡುಗರು ಏನಾದರೂ ತಿಳಿಯದೆ ಹೋದಾಗ ಪಂತರನ್ನು ಕೇಳಿದರೆ ಅಂಥಾ ಹುಡುಗರನ್ನು ಚೆನ್ನಾಗಿ ಹೊಡೆಯುತ್ತಾರೆ. ಕೇಳಿದ್ದನ್ನು ಹೇಳಿಕೊಡುವುದೂ ಇಲ್ಲ. ಯಾರಾದರೂ ಹುಡುಗರು ಗಟ್ಟಿಯಾಗಿ ಕೂಗಿ ಗದ್ದಲ ಮಾಡಿದರೆ ತಮ್ಮ ಜಗಲಿ ಮೇಲಿನಿಂದ ಧುಮುಕಿ ಹತ್ತಿರ ಬಂದು ಯಾವ ಹುಡುಗ ಸಿಗುತ್ತಾನೋ ಅವನನ್ನೇ ಹಿಡಿದು ಹೊಡೆಯುತ್ತಾರೆ. ತಪ್ಪಿಲ್ಲದಿದ್ದರೂ ಹೊಡೆಯುತ್ತಾರೆ[೧೪]

ದಂಡಿಸಿದರೆ ಭಯದಿಂದ ಮಕ್ಕಳು ವಿದ್ಯ ಕಲಿಯುತ್ತಾರೆ ಎನ್ನುವುದು ನಾರಪ್ಪನ ವಾದ. ಆತ ಅದುವರೆವಿಗೂ ಅದೇ ಕ್ರಮವನ್ನು ಅನುಸರಿಸಿ ಮಕ್ಕಳಿಗೆ ವಿದ್ಯೆ ಕಲಿಸಿರುವುದಾಗಿ ಸಮರ್ಥಿಸುತ್ತಾನೆ. ಹಲವು ಬಗೆಯ ಶಾಸ್ತ್ರಗಳಲ್ಲಿ ಪಂಡಿತರೆನಿಸಿ, ಮಹಾರಾಜರಿಂದ ಮೆಚ್ಚುಗೆ ಪಡೆದಿದ್ದ ಸದಾಶಿವ ದೀಕ್ಷಿತರು ಮಕ್ಕಳಿಗೆ ಕಲಿಸುವ ಕ್ರಮದ ಬಗ್ಗೆ ನಾರಪ್ಪನಿಗೆ ತಿಳಿವಳಿಕೆ ಹೇಳುತ್ತಾರೆ.

ಬಾಲಕರ ಬುದ್ಧಿ ಜಾತಿಯನ್ನು ತಿಳಿದು ಅದಕ್ಕೆ ಅನುಸಾರವಾಗಿ ಪಾಠ ಹೇಳ ತಕ್ಕವರೇ ನಿಜವಾದ ಉಪಾಧ್ಯಾಯರು, ಹುಡುಗರಿಗೆ ಪಾಠ ಮಾಡುವುದು ಪರಕಾಯ ಪ್ರವೇಶ ಮಾಡುವುದೆಂದು ಹೇಳುವ ಪುಟ್ಟಣ್ಣನವರು ಉಪಾಧ್ಯಾಯರಲ್ಲಿ ಸಹನಾ ಗುಣವಿರಬೇಕೇಂದು ಪ್ರತಿಪಾದಿಸುತ್ತಾರೆ. ಎಳೆಯ ಮಕ್ಕಳಿಗೆ ವಿದ್ಯೆ ಕಲಿಸುವುದರ ಬಗೆಗಿನ

ಕ್ರಮದ ಸುಧಾರಣೆ ಕುರಿತು ೧೮೮೮ರಲ್ಲಿ ಪ್ರಕಟಗೊಂಡಿರುವ ನೀತಿ ಚಿಂತಾಮಣಿ ಕೃತಿಯ (೧೫೦ ನೀತಿ ಕಥೆಗಳ ಸಂಕಲನ) ಆಶಯವೇ ಈ ಕಾದಂಬರಿಯಲ್ಲಿ ವ್ಯಕ್ತಗೊಂಡಿದೆ. ನೀತಿ ಕಥೆಗಳ ಮೂಲಕ ಮಕ್ಕಳಿಗೆ ಶಿಕ್ಷಣ ನೀಡಿ ಅವರನ್ನು ಶೀಲವಂತರನ್ನಾಗಿಸಬಹುದು ಎನ್ನುವುದು ಪುಟ್ಟಣ್ಣನವರ ಪ್ರಬಲವಾದ ನಂಬಿಕೆ.

ಕನ್ನಡದ ಆರಂಭದ ಕಾದಂಬರಿಗಳು ಈ ರೀತಿಯ ಪಲ್ಲಟಗಳನ್ನು ದಾಖಲಿಸಿವೆ. ಇವುಗಳ ಅಧ್ಯಯನದಿಂದ ಆ ಕಾಲದ ಸಾಂಸ್ಕೃತಿಕ ಸಂಘರ್ಷಗಳನ್ನು ಅರಿಯಬಹುದಾಗಿದೆ. ಭೌಗೋಳಿಕವಾಗಿ ಭಾರತದ ಬಹುಭಾಗವನ್ನು ಆಕ್ರಮಿಸಿಕೊಂಡ ಬ್ರಿಟಿಷರು ಸಾಂಸ್ಕೃತಿಕವಾಗಿ ಅಧಿಪತ್ಯ ಸಾಧಿಸಬೇಕಾದ ಅನಿವಾರ್ಯತೆ ಎದುರಾಗುತ್ತದೆ. ಅದಕ್ಕಾಗಿ ಆರೋಗ್ಯ ಮತ್ತು ಶಿಕ್ಷಣದಂತಹ ಸೇವೆಗಳ ಮೂಲಕ ತಮ್ಮ ಕಾರ್ಯಸಾಧನೆಗೆ ಮುಂದಾಗುತ್ತಾರೆ. ವರ್ಗ ಮತ್ತು ವರ್ಣ ವ್ಯವಸ್ಥೆ ಸರಪಣಿಯಲ್ಲಿ ಬೆಸೆದುಕೊಂಡಿದ್ದ ಭಾರತೀಯ ಸಾಮಾಜಿಕ ವ್ಯವಸ್ಥೆ ಹಲವು ಅಸಮಾನತೆಗಳಿಂದ ಕೂಡಿತ್ತು. ಇಂತಹ ವ್ಯವಸ್ಥೆ ಪರಕೀಯರಿಗೆ ಪೂರಕವಾಗಿತ್ತು.

'ಇಂದಿರಾಬಾಯಿ', 'ಇಂದಿರಾ', 'ಮಾಡಿದ್ದುಣ್ಣೋ ಮಹಾರಾಯ' – ಈ ಮೂರು ಕಾದಂಬರಿಗಳು ೧೯ನೇ ಶತಮಾನದ ಕೊನೆ ಹಾಗೂ ೨೦ನೇ ಶತಮಾನದ ಆರಂಭದಲ್ಲಿ ರಚಿತಗೊಂಡಿರುವಂತವು. ಈ ಕೃತಿಗಳು ಕನ್ನಡದಲ್ಲಿ ಕಾದಂಬರಿ ಪ್ರಕಾರವು ಪ್ರವರ್ಧಮಾನಕ್ಕೆ ಬರುತಿದ್ದ ಕಾಲದಲ್ಲಿ ಪ್ರಕಟಗೊಂಡಿವೆ. ವಸ್ತು ಮತ್ತು ಭಾಷೆಯ ದೃಷ್ಟಿಯಿಂದ ಭಿನ್ನತೆಯನ್ನು ಹೊಂದಿರುವ ಈ ಕಾದಂಬರಿಗಳು ತನ್ನ ಕಾಲದ ಸಮಕಾಲೀನ ಸಂಗತಿಗಳನ್ನು ಚರ್ಚೆಗೆ ಒಳಗು ಮಾಡಿವೆ. ಬ್ರಿಟಿಷರು ಜಾರಿಗೊಳಿಸಿದ ಶಿಕ್ಷಣ ನೀತಿಯು ಭಾರತೀಯ ಸಮಾಜದಲ್ಲಿ ಹಲವು ಬಗೆಯ ಸ್ಥಿತ್ಯಂತರಗಳಿಗೆ ಕಾರಣವಾಯಿತು. ಇದು ಕೆಲವರಿಗೆ ಕ್ರಾಂತಿಕಾರಿಕ ವಿಚಾರ ಎನಿಸಿದರೆ, ಬಹುಸಂಖ್ಯಾತರಿಗೆ ಪರಂಪರಾಗತವಾಗಿ ಬಂದಿರುವ ಸಂಪ್ರಾದಾಯ ಮತ್ತು ಧಾರ್ಮಿಕ ನಂಬಿಕೆಗಳನ್ನು ಅಪಮೌಲ್ಯಗೊಳಿಸುವುದಕ್ಕಾಗಿ ಬ್ರಿಟಿಷರು ರೂಪಿಸಿರುವ ತಂತ್ರದಂತೆ ಗೋಚರವಾಯಿತು.

ಸಂದರ್ಭದಲ್ಲಿ ಆರಂಭಗೊಂಡ ಶಾಲಾ ಪದ್ಧತಿ ಜಾತಿ ವ್ಯವಸ್ಥೆಯಲ್ಲಿ ಕೆಳಸ್ತರದಲ್ಲಿದ್ದ ಜನರಿಗೆ ವರದಾನವಾಯಿತು. ಇಂತಹ ದಿಢೀರ್ ಬದಲಾವಣೆಗೆ ಹೊಂದಿಕೊಳ್ಳಲಾರದ ಮೇಲ್ವರ್ಗದವರಿಗೆ ಇದೆಲ್ಲ ಧರ್ಮ ಸಂಘರ್ಷದ ವಿಷಯವಾಗಿ ಕಾಣಿಸಿತು. ಈ ಮೇಲೆ ಅಧ್ಯಯನಕ್ಕೆ ಒಳಪಡಿಸಿರುವ ಕಾದಂಬರಿಗಳಲ್ಲಿಯೂ ಈ ಬಗೆಯ ಚರ್ಚೆ ನಡೆದಿದೆ.

ಅದಕ್ಕಿಂತ ಮಿಗಿಲಾಗಿ ಸ್ತ್ರೀ ಶಿಕ್ಷಣದ ಅವಶ್ಯಕತೆಯನ್ನು ಕುರಿತು ಈ ಕಾದಂಬರಿಗಳು ಚರ್ಚಿಸುತ್ತವೆ. ಸಾಂಪ್ರದಾಯಿಕ ಸಮಾಜದಲ್ಲಿ ಸುಧಾರಣಾವಾದಿ ಚಿಂತನೆಗಳನ್ನು ಮೂಡಿಸುವ ನಿಟ್ಟಿನಲ್ಲಿ ಆರಂಭದ ಈ ಕೃತಿಗಳು ಗಮನಾರ್ಹ ಎನಿಸುತ್ತವೆ. ಒಂದೆಡೆ ದೇಶೀಯ ಶಿಕ್ಷಣ ಪದ್ಧತಿಗಳ ಬಗೆಗಿನ ಒಲವನ್ನು ಉಳಿಸಿಕೊಂಡಿರುವ ಈ ಎಲ್ಲ

ಬರಹಗಾರರು ವಸಾಹತು ಶಿಕ್ಷಣವನ್ನು ಸ್ವಾಗತಿಸುತ್ತಲೇ ಅದರಲ್ಲಿನ ಅಸಂಬದ್ಧತೆಗಳನ್ನು ಕುರಿತು ಪ್ರಶ್ನಿಸುತ್ತಾರೆ.

**'ಇಂದಿರಾಬಾಯಿ', 'ಇಂದಿರಾ', 'ಮಾಡಿದುಣ್ಣೋ ಮಹಾರಾಯ' – ಕಾದಂಬರಿಗಳು ಇಂಗ್ಲಿಷ್ ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆಗಳ ನಿರ್ವಚನೆ**

ಸದ್ಧರ್ಮದ ವಿಜಯದ ನಿರೂಪಣೆಗಾಗಿ ಕಾದಂಬರಿ ರಚಿಸುವ ಗುಲ್ವಾಡಿ ವೆಂಕಟರಾಯರನ್ನು ಪಾಶ್ಚಾತ್ಯ ಚಿಂತನಕ್ರಮ ಬಹುವಾಗಿ ಪ್ರಭಾವಿಸಿ ಸಾಂಪ್ರದಾಯಿಕ ಮನಸ್ಸು ಹೊಸತನಕ್ಕೆ ತೆರೆದುಕೊಳ್ಳುವಲ್ಲಿ ಉಂಟಾಗುವ ಜಿಜ್ಞಾಸೆಯನ್ನು ಅವರು ತಮ್ಮ ಕೃತಿಯಲ್ಲಿ ತಂದಿದ್ದಾರೆ. ಸದ್ಧರ್ಮದ ವಿಜಯಕ್ಕಾಗಿ ಅಂತಿಮವಾಗಿ ಅವರು ಆಶ್ರಯಿಸುವುದು ವಸಾಹತುಶಾಹಿಯಿಂದ ರೂಪುಗೊಂಡ ಶಿಕ್ಷಣ ನೀತಿಯನ್ನು. ಕಥಾನಾಯಕಿ ಇಂದಿರಾಬಾಯಿಯ ತಂದೆ ಭೀಮರಾಯ ಹಾಗೂ ತಾಯಿ ಅಂಬಾಬಾಯಿಯು ಸಮಾಜದ ಅಧರ್ಮದ ಸಂಕೇತಗಳಾಗಿ ನಿರೂಪಿತಗೊಂಡಿದ್ದಾರೆ. ಈ ಪಾತ್ರಗಳು ಇಂಗ್ಲಿಷ್ ಶಿಕ್ಷಣ ಕ್ರಮವನ್ನು ವಿರೋಧಿಸುತ್ತವೆ. ಅವು ಪುಸ್ತಕಗಳು ಜಾತಿ ಕೆಡಿಸಲಿಕ್ಕೆ ರೂಪಿಸಿರುವ ತಂತ್ರಗಾರಿಕೆ ಎನ್ನುವ ನಿಲುವಿಗೆ ಬರುತ್ತವೆ. ಪಾದ್ರಿಗಳ ಪುಸ್ತಕಗಳನ್ನು ಓದುವುದು, ಇಂಗ್ರೇಜಿ ಕಲಿಯುವುದು ದುರ್ಬುದ್ಧಿ ಎಂಬುದು ಆ ಪಾತ್ರಗಳ ನಿಲುವು. ಭೀಮರಾಯ ಹಾಗೂ ಅಂಬಾಬಾಯಿಯ ಪಾತ್ರಗಳ ಮೂಲಕ ಕಾದಂಬರಿಕಾರರು ತಮ್ಮ ಸಮಕಾಲೀನ ಸಮಾಜದಲ್ಲಿ ಹೊಸತನಕ್ಕೆ ಹೊಂದಿಕೊಳ್ಳಲಾರದ ಸಾಂಪ್ರದಾಯಿಕ ಮನಸ್ಸುಗಳನ್ನು ಬಿಂಬಿಸಿದ್ದಾರೆ.

'ಕಮಲಾಪುರ ಧಾರ್ಮಿಕ ಗುರು' ಇಂತದೇ ಮತ್ತೊಂದು ಪಾತ್ರ, ಇವರ ಅಭಿಪ್ರಾಯದಂತೆ ಇಂಗ್ಲಿಷ್ ಕಲಿಯುವುದು, ವಿದೇಶಕ್ಕೆ ಹೋಗುವುದು ಕುಲಭ್ರಷ್ಟರು ಮಾಡುವಂತಹ ಕೆಲಸ. ವಿಧವಾ ವಿವಾಹ, ಯುವತಿ ವಿವಾಹ ಮುಂತಾದ ಕಾರ್ಯಗಳಲ್ಲಿ ತೊಡಗುವುದು ಘೋರಕರ್ಮವೆನಿಸಿದಂತೆ. ಮಾತಿನ ಮಧ್ಯೆ ಇಂಗ್ಲಿಷ್ ಪದಗಳನ್ನು ಸೇರಿಸಿ ಮಾತನಾಡುವುದು ಸಂಸ್ಥಾನಕ್ಕೆ ಗಂಡಾಂತರ ತಂದಂತೆ. ಆ ಕಾಲದಲ್ಲಿ ರೂಪುಗೊಂಡಿದ್ದ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಯ ಕಾರ್ಯಗಳು ಎದುರಿಸಿದ ಸಂಕಷ್ಟಗಳನ್ನು ಈ ಸನ್ನಿವೇಶದ ಅವಲೋಕನದಿಂದ ಅರಿಯಬಹುದು.

ಕಾದಂಬರಿಯಲ್ಲಿ ಚಿತ್ರಿತಗೊಂಡಿರುವ ಜಲಜಾಕ್ಷಿ ಮತ್ತು ಅಮೃತರಾಯ ಸುಶಿಕ್ಷಿತ ಪಾತ್ರಗಳು. ಶಿಕ್ಷಣದಿಂದ ಒದಗಬಹುದಾದ ಸಂಸ್ಕಾರದ ನಿರೂಪಕರಂತೆ ಇವರನ್ನು ಚಿತ್ರಿಸಲಾಗಿದೆ. ಸಮಾಜ ಸುಧಾರಕನಾದ ಅಮೃತರಾಯ ಸಂಕಷ್ಟಕ್ಕೆ ಒಳಗಾದ 'ಇಂದಿರಾಬಾಯಿಗೆ' ಆಶ್ರಯ ನೀಡುತ್ತಾನೆ. ಆಕೆಗೆ ಆಧುನಿಕ ಶಿಕ್ಷಣ ಕೊಡಿಸುವ ಏರ್ಪಾಡು ಮಾಡುತ್ತಾನೆ. ಭಾಸ್ಕರರಾಯನನ್ನು ಸಲುಹಿ ಆತನನ್ನು ವಿದ್ಯಾವಂತನಾಗಿ ಮಾಡಿ ಆತ ಉನ್ನತ ಹುದ್ದೆ ಹೊಂದಲು ಕಾರಣನಾಗುತ್ತಾನೆ. 'ನನ್ನ ಬುದ್ಧಿಗೆ ತೋರುವುದೇನೆಂದರೆ, ವಿದ್ಯೆ ಕಲಿಯುವುದರಿಂದ ಯಾವುದೊಂದು ಕೇಡಿಲ್ಲ, ಮಾತ್ರವಲ್ಲ,

ಎಲ್ಲ ಕೇಡುಗಳಿಂದಲು ತಪ್ಪಿಸಿಕೊಳ್ಳಬಹುದು' ಎನ್ನುವ ಇಂದಿರಾಬಾಯಿಯ ಮಾತುಗಳು ಕಾದಂಬರಿಕಾರರ ಆಶಯಗಳನ್ನು ವ್ಯಕ್ತಪಡಿಸಿದೆ. ಕಾದಂಬರಿಯು ಹೊಸ ಬಗೆಯ ಶಿಕ್ಷಣ ಕ್ರಮದ ಪರ ಮತ್ತು ವಿರೋಧದ ಜಿಜ್ಞಾಸೆಯಲ್ಲಿಯೇ ಸಾಗುತ್ತದೆ. ಸದ್ಧರ್ಮದ ವಿಜಯವೇ ಕಾದಂಬರಿಯ ಮುಖ್ಯ ವಸ್ತು. ಆದರೆ ಅದರ ನಿರೂಪಣೆಯಲ್ಲಿ ನವೀನ ಶಿಕ್ಷಣಕ್ರಮದ ಚಿಂತನೆಗಳು ನಡೆದಿವೆ.

ಬ್ರಿಟಿಷರು ಜಾರಿಗೆ ತಂದ ಶಿಕ್ಷಣ ಕ್ರಮ ಪರಂಪರಾಗತವಾಗಿ ಬಂದಿರುವ ಸನಾತನ ಮೌಲ್ಯಗಳನ್ನು ಹಾಳುಗೆಡವಲು ಎನ್ನುವ ಅಭಿಪ್ರಾಯವನ್ನು ಕೆಲವು ಪಾತ್ರಗಳು ವ್ಯಕ್ತಪಡಿಸಿವೆ. ಈ ಅಭಿಪ್ರಾಯಕ್ಕೆ ಎದುರಾಗಿ ಶಿಕ್ಷಣದಿಂದ ಸಾಮಾಜಿಕ ಮನ್ನಣೆಯನ್ನು ಗಳಿಸಿ ಉನ್ನತ ಪದವಿ ಪಡೆಯಬಹುದು ಎಂಬುದಾಗಿ ಭಾಸ್ಕರರಾಯನ ಪಾತ್ರದ ಮುಖಾಂತರ ನಿರೂಪಿಸಲಾಗಿದೆ. ಅನ್ಯಾಯಯುತ ಸಮಾಜದಲ್ಲಿ ಒಳ್ಳೆಯದು ಉಳಿಯಬೇಕು ಎಂದು ಆಶಿಸುವ ಕಾದಂಬರಿಕಾರರು ಅಂತಿಮವಾಗಿ ಭೀಮರಾಯ ಮತ್ತು ಅಂಬಾಬಾಯಿಯರ ಶರಣಾಗತಿಯನ್ನು ಸೃಷ್ಟಿಸಿದ್ದಾರೆ. ಆ ಮೂಲಕ ಆಧುನಿಕ ಶಿಕ್ಷಣಕ್ಕೆ ಬೆಲೆ ಬಂದಂತಾಗಿದೆ.

> ಅವ್ವಾ ಇಂಗ್ಲಿಷ್ ಭಾಷೆ, ಗಣಿತಶಾಸ್ತ್ರ, ಲೋಕಚರಿತ್ರ ಇವೇ ಮುಂತಾದ ವಿಷಯಗಳನ್ನು ಹೆಂಗಸರು ಕಲಿಯಬಾರದಂತೆ ಹೌದೇ, ಎಂದು ಇಂದಿರಾಬಾಯಿ ಪ್ರಶ್ನೆ ಮಾಡಲು ಜಲಜಾಕ್ಷಿ ಕಿರುನಗೆಯೊಡನೆ 'ಅದ್ಯಾರವ್ವ ನಿನಗೆ ಹೇಳಿದ್ದು? ಕೆಲವರು ಹಾಗೆ ಹೇಳುವುದನ್ನು ನಾನೂ ಕೇಳಿದ್ದೇನೆ. ಆದರೆ ನನಗೆ ಆ ಮಾತಿನ ಮೇಲೆ ವಿಶ್ವಾಸ ಕಡಿಮೆ' ಎಂದು ಉತ್ತರ ಕೊಡಲು ಇಂದಿರಾಬಾಯಿಯು ಪುನಃ 'ಅವೆಲ್ಲವನ್ನು ಕಲಿತವರು ಜಾತಿಗೆಟ್ಟು ದುರ್ನಡತೆಯಲ್ಲಿ ಪ್ರವರ್ತಿಸುತ್ತಾರಂತೆ. ವಿದ್ಯೆ ಕಲಿಯುವುದರಿಂದ ಒಬ್ಬಳ ನಡತೆ ತಿದ್ದುಪಡಿಯಾದೀತಲ್ಲದೆ ಕೆಟ್ಟು ಹೋದಿತೆಂದು ನನ್ನ ಬುದ್ಧಿಗೆ ಕಾಣುವುದಿಲ್ಲ ನಿನ್ನ ಅಭಿಪ್ರಾಯವೇನು?[೧೫]

ಕಾದಂಬರಿಯಲ್ಲಿ ಜಲಜಾಕ್ಷಿ ಮತ್ತು ಇಂದಿರಾಬಾಯಿ ನಡುವಿನ ಈ ಸಂಭಾಷಣೆ ಆ ಕಾಲದಲ್ಲಿ ಸ್ತ್ರೀ ಶಿಕ್ಷಣ ಕುರಿತಂತೆ ಇದ್ದ ಅಭಿಪ್ರಾಯಗಳನ್ನು ಸ್ಪಷ್ಟಪಡಿಸುತ್ತದೆ. ಶಿಕ್ಷಿತರಾಗುವುದು ಅದರಲ್ಲೂ ಸ್ತ್ರೀಯರು ಶಿಕ್ಷಿತರಾಗುವುದು ಅಪರಾಧದಂತೆ ನಿರೂಪಿತಗೊಂಡಿದೆ. ಅಲ್ಲದೇ ಜಾತಿಗೆಟ್ಟು ದುರ್ನಡತೆಯನ್ನು ಹೊಂದುತ್ತಾರೆಂದು ನಿರಾಧಾರವಾದ ಆರೋಪವನ್ನು ಹೊರಿಸುವುದನ್ನು ಕಾದಂಬರಿಯಲ್ಲಿ ನಿರೂಪಿಸಲಾಗಿದೆ. 'ಏನೂ ಕಲಿಯದಿದ್ದ ನಿರಕ್ಷರಕುಕ್ಷಿಗಳೇ ಹೆಚ್ಚಾಗಿ ದುರ್ನಡತೆಯಲ್ಲಿ ಪ್ರವರ್ತಿಸುವುದೆಂದು ನನ್ನ ಪತಿ ನನ್ನ ಕೂಡೆ ಪ್ರಸ್ತಾಪ ಮಾಡುವಾಗ ಅನೇಕ ಸಾರಿ ಹೇಳಿದ್ದರು' ಎನ್ನುವ ಜಲಜಾಕ್ಷಿಯ ಮಾತುಗಳ ಮೂಲಕ ಕಾದಂಬರಿಕಾರರು ಸ್ತ್ರೀ ಶಿಕ್ಷಣದ ಪರವಾದ ಚಿಂತನೆಯನ್ನು ಮಂಡಿಸಿದ್ದಾರೆ.

ಭೀಮರಾಯನು ಏರ್ಪಡಿಸಿದ ಭೋಜನಕೂಟದಲ್ಲಿ ಭಾಗವಹಿಸಿದವರ ವಿವರ ನೀಡುವ ಕಾದಂಬರಿಕಾರರು ಅಲ್ಲಿ ಕೂಡಿದ ಜನರಲ್ಲಿ ಕೆಲವರು ಕುಲಕಂಟಕರಾದ

ಎಫ್.ಎ, ಬಿ.ಎ.ಗಳು ಇದ್ದರು ಎನ್ನುವ ಮಾತು ಆಧುನಿಕ ಶಿಕ್ಷಣ ಪಡೆದರೂ ಸಂಸ್ಕಾರವಂತರಾಗದವರ ಬಗೆಗಿನ ಅಭಿಪ್ರಾಯವನ್ನು ತಿಳಿಸುತ್ತದೆ. ಹೀಗೆ ಒದಗಿದ ಆಧುನಿಕತೆಯನ್ನು ಪರಾಮರ್ಶೆಗೆ ಒಳಪಡಿಸಿ ಸರಿಯಾದುದನ್ನು ಗುರುತಿಸುವ ಪ್ರಯತ್ನವನ್ನು ಕಾದಂಬರಿಕಾರರು ಮಾಡಿದ್ದಾರೆ.

ಕೆರೂರು ವಾಸುದೇವಾಚಾರ್ಯರು ತಮ್ಮ ಕಾಲದ ಸಾಮಾಜಿಕ ಸುಧಾರಕರಿಂದ ಪ್ರಭಾವಿತಗೊಂಡಿದ್ದಾರೆ. ಈ ಸಂಗತಿಗೆ ಅವರ ಕಾದಂಬರಿಯಲ್ಲಿಯೇ ಆಧಾರ ದೊರಕುತ್ತದೆ. ಕಾದಂಬರಿಯ ಪಾತ್ರಗಳಾದ ಕಮಲಕಾಂತ ಮತ್ತು ಜಯರಾಯರು ಓದುವ ಸಂದರ್ಭದಲ್ಲಿ ಸಮಕಾಲೀನ ಸಮಾಜ ಸುಧಾರಕರಾದ ವಾಸುದೇವರಾವ್ ಮೋಡಕೆ, ವಿಷ್ಣು ಪಂತ ಭಿಡೆ, ಬಖಲೆ ಮೊದಲಾದವರಿಂದ ಪ್ರಭಾವಿತರಾಗಿರುವ ಸಂಗತಿಯನ್ನು ನಿರೂಪಿಸಲಾಗಿದೆ

> ಅದೇ ಕಾಲದಲ್ಲಿ ಬಳ್ಳಾಪುರ ಸುಬ್ಬರಾಯನೆಂಬ ಆಸ್ತಿಯುಳ್ಳ ಗೃಹಸ್ಥನ ಮಗಳಾದ ದೇವಯಾನಿಯು ಹದಿನಾಲ್ಕು ವರ್ಷದವಳಾಗಿದ್ದಾಗಲೇ ವಿಧವೆಯಾದಳು. ಇವಳು ತೀಕ್ಷ್ಣವಾದ ಬುದ್ಧಿಯವಳಿದ್ದು ದೇಶಭಾಷೆಯ ಶಾಲೆಗಳಲ್ಲಿ ದೊರಕುವಷ್ಟು ವಿದ್ಯೆ ಗಳಿಸಿದ್ದಳು. ವಿಧವೆಯಾದ ನಂತರ ಸುಬ್ಬರಾಯನು ಇವಳಿಗೆ ಉಚ್ಚ ಪ್ರತಿಯ ಶಿಕ್ಷಣ ಕೊಟ್ಟು, ಚಿತ್ರಕಲೆ, ಕಶೀದೆ ಮುಂತಾದ ಉಪಯುಕ್ತವಾದ ಶಿಕ್ಷಣವನ್ನಾದರೂ ಕೊಡಿಸಿದ್ದನು. ಸುಬ್ಬರಾಯನಾದರೂ ಸುಧಾರಕ ಪಂಥದವನಾದ್ದರಿಂದ ದೇವಯಾನಿಯ ಪುನರ್ವಿವಾಹ ಮಾಡಬೇಕೆಂಬ ವಿಚಾರದಲ್ಲಿದ್ದನು[೧೬]

ಇಂದಿರೆ ಮತ್ತು ರಮಾಕಾಂತರ ಪ್ರೇಮವನ್ನೇ ಕಥೆಯ ಕೇಂದ್ರವಾಗಿಸಿಕೊಂಡಿರುವ 'ಇಂದಿರಾ' ಕಾದಂಬರಿ ಸ್ತ್ರೀ ಶಿಕ್ಷಣದ ಪರವಾದ ಚಿಂತನೆಯನ್ನು ಬಹುವಾಗಿ ಪ್ರತಿಪಾದಿಸಿದೆ. 'ಆಧುನಿಕ ಶಿಕ್ಷಣದಿಂದ ಈಗಿನ ತರುಣರ ಮೇಲೆ ದುಷ್ಪರಿಣಾಮಗಳಾಗುತ್ತವೆಂಬ ಕೆಲವು ಗುಣಾವಗುಣ ನಿರೀಕ್ಷರ ಮತವಿರುವುದೆಂದು ಕೇಳುತ್ತೇನೆ. ಇಂತಹ ಶಿಕ್ಷಣ ಹೊಂದಿದ ತರುಣ ತರುಣಿಯರಲ್ಲಿ ಆದ್ಯಕವಿಗಳು ವರ್ಣಿಸಿದಂತೆ ನಿರ್ಮಲಾಂತಃಕರಣದವರು ಸಿಕ್ಕುವರೇನು' ಇನ್ನುವ ಇಂದಿರೆಯ ಮಾತುಗಳ ಮೂಲಕ ಕೆರೂರರು ಆ ಕಾಲದಲ್ಲಿ ಆಧುನಿಕ ಶಿಕ್ಷಣದ ಬಗ್ಗೆ ಇದ್ದ ಅಭಿಪ್ರಾಯವನ್ನು ಮಂಡಿಸುತ್ತಾರೆ. ಶಿಕ್ಷಣ ಮನುಷ್ಯನು ಎಲ್ಲ ಬಗೆಯ ದೌರ್ಬಲ್ಯಗಳನ್ನು ಮೀರುವ ಸಾಧನ ಎಂಬುದು ಈ ಕಾಲದ ನಂಬಿಕೆ. ಆದರೆ ನೂರು ವರ್ಷಗಳ ಹಿಂದೆ ನವ ಶಿಕ್ಷಣ ಪಡೆಯುವುದು ಧರ್ಮಬಾಹಿರದ ಕಾರ್ಯವಾಗಿತ್ತು. ವಿದ್ಯೆ ಕಲಿಯುವುದರಿಂದ ಒಳಿತಿಗಿಂತ ಕೆಡುಕು ಹೆಚ್ಚಾಗುತ್ತಿತ್ತು ಹಾಗೂ ಯುವಕ, ಯುವತಿಯರು ದುರ್ಗಣಗಳನ್ನು ಬೆಳೆಸಿಕೊಳ್ಳುತ್ತಿದ್ದರು ಎನ್ನುವ ನಿಲುವು ಆ ಕಾಲದಲ್ಲಿ ಪ್ರಚಲಿತವಿದ್ದುದನ್ನು ಕಾದಂಬರಿಕಾರರ ಈ ಮಾತುಗಳು ಸ್ಪಷ್ಟಪಡಿಸುತ್ತವೆ.

ರಮಾಕಾಂತರೇ ಪುನರ್ವಿವಾಹ ಪ್ರಬುದ್ಧ ಕನ್ಯಾವಿವಾಹ ಸ್ತ್ರೀ ಶಿಕ್ಷಣ ಮುಂತಾದ ವಿಷಯಗಳ ಬಗ್ಗೆ ನಿಮ್ಮ ಅಭಿಪ್ರಾಯಗಳೇನಿರುವವು? ಸ್ತ್ರೀಯರ ಸ್ವಾತಂತ್ರ್ಯಕ್ಕೆ ನೀವು ಅನುಕೂಲವಿರುವಿರೇನು?[೧೭]

ಎನ್ನುವ ರಾಧಾಬಾಯಿಯ ಪ್ರಶ್ನೆಗೆ ರಮಾಕಾಂತನು 'ಸ್ತ್ರೀಯರು ಉಚ್ಚ ಪ್ರತಿಯ ಶಿಕ್ಷಣ ಹೊಂದುವುದು ಇವುಗಳ ಬಗ್ಗೆ ನಾನು ಓದಿರುವೆನು ಆದರೆ ನನ್ನ ಮತವು ಈ ಕಾಲಕ್ಕೆ ಹೀಗೆ ಇರುವುದೆಂದು ಹೇಳಲಾರೆನು. ಸ್ತ್ರೀಯರು ಉಚ್ಚ ಪ್ರತಿಯ ಶಿಕ್ಷಣ ಹೊಂದುವುದು ಅವಶ್ಯ; ಅವರ ಸ್ವಾತಂತ್ರ್ಯಾತಿಶಯವು ಮಾತ್ರ ನನಗೆ ಸಹಿಸದು' ಎಂದು ಉತ್ತರಿಸುತ್ತಾನೆ. ರಮಾಕಾಂತನ ಈ ಮಾತುಗಳು ಕೆರೂರು ವಾಸುದೇವಾಚಾರ್ಯರು ಕಾದಂಬರಿಯ ಆರಂಭಕ್ಕೂ ಮುನ್ನ ಹೇಳುವ ಪ್ರಾಥಮಿಕ ನಿರೂಪಣವು ಎನ್ನುವ ಭಾಗದಲ್ಲಿನ ಮಾತುಗಳಿಗೆ ಪೂರಕವಾಗಿದೆ. ಸ್ತ್ರೀ ಶಿಕ್ಷಣ ಕ್ರಮದಲ್ಲಿದ್ದ ದೋಷಗಳನ್ನು ತೆಗೆದುಹಾಕಿ ಅದನ್ನು ಉಚ್ಚ ಸ್ಥಿತಿಗೆ ತರುವ ಮಹತ್ಕಾರ್ಯದಲ್ಲಿ ಎಷ್ಟೋ ಜನ ವಿಚಾರಶಾಲಿಗಳಾದ ದೇಶ ಸೇವಕರು ನಿರತರಾಗಿದ್ದಾರೆ ಹಾಗೂ ಅವರ ಮಹತ್ಕಾರ್ಯಕ್ಕೆ ತಕ್ಕಮಟ್ಟಿಗೆ ಯಶಸ್ಸು ಬರುತ್ತದೆ ಎನ್ನುವ ಮಾತುಗಳಿಗೆ ಪೂರಕವಾಗಿದೆ.

ಈ ಕಾದಂಬರಿಯ ಕಥಾನಾಯಕಿಯಾದ ಇಂದಿರೆಯನ್ನು ಆಕೆಯ ತಾಯಿ ತನ್ನ ಮಗಳಿಗೆ ದುರ್ಗಣಗಳು ತಟ್ಟದಂತೆ ಜಾಗ್ರತೆಯಿಂದ ಬೆಳೆಸಿದಳು. ಆಕೆಯನ್ನು ದೇಶಭಾಷೆಯ ಶಾಲೆಗೆ ಹಾಕಿ ದೇಶಭಾಷೆಯ ವಿದ್ಯಾಭ್ಯಾಸ ಒದಗಿಸಿದರು. ಆಕೆಯನ್ನು ಮೈಸೂರಿನ ಮಹಿಳಾ ಪಾಠಶಾಲೆಗೆ ಕಳುಹಿಸಬೇಕೆನ್ನುವ ವಿಚಾರವು ಆಕೆಯ ತಾಯಿಯದೆ. ಈ ಸಂಗತಿಯು ಸ್ತ್ರೀ ಶಿಕ್ಷಣದ ಪ್ರಾಮುಖ್ಯತೆಯನ್ನು ಅರ್ಥ ಮಾಡಿಕೊಂಡ ಬಗೆಯನ್ನು ತಿಳಿಸುತ್ತದೆ. ತಾಯಿಯ ಸಾವಿನ ಅನಂತರ ಇಂದಿರೆಯ ನೈತಿಕ ಮತ್ತು ಮಾನಸಿಕ ಶಿಕ್ಷಣದ ಹೊಣೆ ದೇವಯಾನಿಯದಾಯಿತು.

> ಆಧುನಿಕ ಶಿಕ್ಷಣದ ದುಷ್ಪರಿಣಾಮಗಳಿಂದ ಸನಾತನ ಸಮಾಜದ ಮೌಲ್ಯಗಳನ್ನು ಸಂರಕ್ಷಿಸುವುದು ಆಚಾರ್ಯರ ಕಾಳಜಿಯಾಗಿತ್ತು. ಕಾದಂಬರಿಯ ನಾಯಕಿ ಇಂದಿರೆ ಆಚಾರ್ಯರು ಬೆಳೆಸಿಕೊಂಡು ಬಂದಿದ್ದ ಸ್ತ್ರೀತ್ವದ ಆದರ್ಶದ ಪ್ರತೀಕವಾಗಿದ್ದಳೆ. ಮೈಸೂರು ಮಹಿಳಾ ಪಾಠಶಾಲೆಯಲ್ಲಿ ಮೂರು ವರ್ಷ ಕಳೆದು ದೇವಯಾನಿಯಲ್ಲಿ ಕಲಾಭ್ಯಾಸ ಮಾಡಿದ ಇಂದಿರೆ ಸುಶಿಕ್ಷಿತಳು. ಆದರೆ ಅವಳ ಸಾಮಾಜಿಕ ಧೋರಣೆಗಳಲ್ಲಾಗಲೀ, ಧಾರ್ಮಿಕ ನಂಬಿಕೆಗಳಲ್ಲಾಗಲೀ ಆಧುನಿಕತೆಯಿಲ್ಲ[೧೮]

ಹೀಗೆ ಸ್ತ್ರೀ ಶಿಕ್ಷಣದ ಅಗತ್ಯವನ್ನು ಕಾದಂಬರಿಕಾರರು ಒತ್ತಿ ಹೇಳಿದ್ದಾರೆ. ಮತ್ತೊಂದೆಡೆ ಆಧುನಿಕ ಶಿಕ್ಷಣದ ಪರಿಣಾಮವಾಗಿ ಉಂಟಾಗುತ್ತಿರುವ ಕ್ಲೇಶಗಳನ್ನು ನಮ್ಮ ಮುಂದಿಡುತ್ತಾರೆ. ಇದಕ್ಕೆ ಉದಾಹರಣೆ ಮದ್ದೂರಿನ ನಟೇಶ ಎನ್ನುವ ಪಾತ್ರ

ಬೆಂಗಳೂರಿನ ಬಳೇಪೇಟೆಯಲ್ಲಿ ಭೋಜನಗೃಹವೊಂದನ್ನು ಇಟ್ಟಿದ ಮದ್ದೂರ ಸಾವಿತ್ರಮ್ಮನೆಂಬ ವಿಧವೆಯ ಮಗನೇ ಮದ್ದೂರ ನಟೇಶ. ಈತ ಮಿಡಲ್ಕ್ಲಾಸ್‌ವರೆವಿಗೆ ಓದಿ ಶಾಲೆ ಬಿಟ್ಟಿದ್ದನು. ತನ್ನ ಬುದ್ಧಿವಂತ ಮಗನನ್ನು ಸರಿಯಾಗಿ ವ್ಯಾಸಂಗ ಮಾಡಿಸಲಿಲ್ಲವೆಂದು ಶಾಲಾಧಿಕಾರಿಗಳ ಜತೆಯಲ್ಲಿ, ತೇರ್ಗಡೆ ಹೊಂದಲಿಲ್ಲವೆಂದು ಪರೀಕ್ಷಕರ ಜತೆಯಲ್ಲಿ ಕೋಪಿಸಿಕೊಂಡು ತನ್ನ ಉದ್ಯೋಗವನ್ನು ಬಿಟ್ಟು ಶ್ರೀರಂಗಪಟ್ಟಣಕ್ಕೆ ಬಂದು ನೆಲೆಸಿದ್ದಳು. ಶ್ರೀರಂಗಪಟ್ಟಣಕ್ಕೆ ಬರದ ನಟೇಶ ತನ್ನ ಸೋದರಮಾವ ಭಟ್ಟ ಶಾಮಯ್ಯನೊಂದಗಿದ್ದು ಯಾವುದಾದರೂ ಮನೆ ಕೆಲಸಕ್ಕೆ ಸೇರುವ ವಿಚಾರದಲ್ಲಿದ್ದನು. ಅಲ್ಲದೇ ಶ್ರೀಮಂತರ ಮಕ್ಕಳ ಜತೆಗೆ ಸೇರಿ ಹೊಸ ಹೊಸ ನಮೂನೆಯ ಉಡುಗೆ ತೊಡುಗೆ ಮಾಡಿಕೊಂಡು ಆಲಸಿಯಾಗಿದ್ದನು.

> ಪಾದ್ರಿಗಳು ಮುದ್ರಿಸಿದ ಸಸ್ತಾರ್ಥದೀಪಿಕೆ, ಪುನರ್ವಿವಾಹಮಂಡನ, ಲಿಂಗಪಂತರು ಬರೆದ ಆರ್ಯಮತ ಖಂಡನೆ, ಅಶ್ಲೀಲವಾದ ಕಾದಂಬರಿ ನಾಟಕಗಳು ಮುಂತಾದವುಗಳನ್ನೋದಿ ನಟೇಶನು ವೃಥಾಭಿಮಾನ ಹೊಂದಿದವನಾಗಿದ್ದನು[೧೯]

ಎನ್ನುವುದು ಕಾದಂಬರಿಕರರ ನಿಲುವು. ತಾಯಿ ನಟೇಶನನ್ನು ತನ್ನ ತಮ್ಮನಾದ ಶಾಮಯ್ಯನ ಉದ್ಯೋಗದಲ್ಲಿ ಸೇರಿಕೊ ಎಂದು ಹೇಳಿದಾಗ ನಟೇಶನು 'ಅಡುಗೆ' ಕೆಲಸವನ್ನು ಮೂದಲಿಸಿ ಆ ಹಾಳು ಕೆಲಸಕ್ಕೆ ಉದ್ಯೋಗವೆನ್ನಬಹುದೆ ಎಂದು ಛೇಡಿಸುತ್ತಾನೆ. ಇತ್ತಿತ್ತ ನಿನ್ನ ವಿದ್ಯಾವ್ಯಾಸಂಗವು ಬಹಳಾಯಿತೇನು? ಎಂದು ತಾಯಿಯು ಅಭಿಮಾನದಿಂದ ಕೇಳುತ್ತಾಳೆ. ಆಗ ನಟೇಶನು 'ಓಹೋ, ಎಷ್ಟೆಂದು ಹೇಳಲಿ ದಯಾನಂದ ಸರಸ್ವತಿ, ಈಶ್ವರ ಚಂದ್ರ, ಕೇಸವಚಂದ್ರಸೇನ್, ವೀರೇಶಲಿಂಗಂ ಪಂತುಲು ಮುಂತಾದವರ ನಿಬಂಧಗಳನ್ನೋದಿರುವೆನು. ಎಷ್ಟೋ ನಾಟಕ ಕಾದಂಬರಿಗಳನ್ನೋದಿರುವೆನು ಎನ್ನುತಾನೆ. ಮುಂದೆ ಬಾಲ್ಯ ಸ್ನೇಹಿತೆಯಾಗಿದ್ದ ಇಂದಿರೆಯು ಒಮ್ಮೆ ಎದುರಾಗಿ ನಟೇಶ ನೀನು ಸಣ್ಣವನಿದ್ದಾಗ ನಮ್ಮಲ್ಲಿಯ ಪುಸ್ತಕಗಳನ್ನೋಯ್ದು ಓದುತಿದ್ದು ಇನ್ನಾದರು ಓದುವ ಶ್ರಮವಿಟ್ಟುಕೊಂಡಿರುವನು ನೀನೇನಾದರು ನಿಬಂಧ ಮುಂತಾದವುಗಳನ್ನು ಬರೆದಿರುವೆಯೇನು ಎಂದು ಪ್ರಶ್ನಿಸುತ್ತಾಳೆ. ಇದಕ್ಕೆಲ್ಲಾ ನಟೇಶನಿಂದ ಮಾತ್ರ ನಿರುತ್ತರ.

ನಟೇಶನ ಪಾತ್ರ ನಿರೂಪಣೆಯಲ್ಲಿ ಕೆರೂರು ವಾಸುದೇವಚಾರ್ಯರು ಆಧುನಿಕ ಶಿಕ್ಷಣದಿಂದ ಒದಗಬಹುದಾದ ಪರಿಣಾಮಗಳ ಚಿತ್ರಣ ನೀಡುತ್ತಾರೆ. ರಮಾಕಾಂತ ಶಿಕ್ಷಿತನಾಗಿ ಸಮಾಜದಲ್ಲಿ ಗೌರವಿತನಾಗಿ ಸ್ಥಾನ ಪಡೆಯುತ್ತಾನೆ ಆದರೆ ಆತ ಎಲ್ಲೋ ಪರಂಪರಾಗತನಾದ ಮೌಲ್ಯಗಳನ್ನು ಪ್ರಶ್ನಿಸುವುದಿಲ್ಲ. ಈ ಸಂಗತಿಗಳನ್ನು ಗಮನಿಸಿದಾಗ ಭಾರತೀಯ ಸಮಾಜ ಸುಧಾರಕರ ಚಿಂತನೆಗಳು ಕಾದಂಬರಿಕಾರರನ್ನು ಪ್ರಭಾವಿಸಿರುವುದು ತಿಳಿಯುತ್ತದೆ. ಆಧುನಿಕ ಶಿಕ್ಷಣ ಕ್ರಮದ ಸ್ವೀಕಾರದ ಜತೆಗೆ ಅದರ ಬಗೆಗಿನ ಆತಂಕವು ಕಾದಂಬರಿಯಲ್ಲಿ ನಿರೂಪಿತಗೊಂಡಿದೆ, ಇಂದಿರೆ, ರಮಾಕಾಂತ, ದೇವಯಾನಿ ಈ

ಪಾತ್ರಗಳ ರಚನೆಯ ಹಿನ್ನಲೆಯಲ್ಲಿ ಕೆರೂರು ವಾಸುದೇವಾಚಾರ್ಯರ ಸುಧಾರಣಾ ವಾದವನ್ನು ಗಮನಿಸಬಹುದು.

ಭಾರತೀಯ ಕಥಾಪರಂಪರೆಯ ಹಾದಿಯಲ್ಲಿ ಸಾಗುವ ಎಂ.ಎಸ್.ಪುಟ್ಟಣ್ಣ ಅವರ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯ ಆದರ್ಶ ಮತ್ತು ವಾಸ್ತವತೆಯ ನಡುವೆ ಸಾಮ್ಯತೆಯನ್ನು ಸಾಧಿಸಿದೆ. ಪುಟ್ಟಣ್ಣನವರದು ಪುರಾಣದ ಹಿನ್ನಲೆಯಲ್ಲಿ ಸಮಕಾಲೀನ ಸಂಗತಿಗಳನ್ನು ವಿಶ್ಲೇಷಿಸುವ ಪ್ರಯತ್ನ, ಈ ಕಾದಂಬರಿಯ ಎರಡು ಅಧ್ಯಾಯಗಳಲ್ಲಿ (ನಾಲ್ಕು ಮತ್ತು ಐದು) ಕಲಿಸುವ ಕ್ರಮದ ಬಗೆಗಿನ ಚರ್ಚೆಯನ್ನು ಮಂಡಿಸಲಾಗಿದೆ. ಎಂ.ಎಸ್.ಪುಟ್ಟಣ್ಣನವರು ಸ್ವತಃ ಶಿಕ್ಷಕರಾಗಿದ್ದು, ಪುನರುಜ್ಜೀವನ ಕಾಲದಲ್ಲಿ ಘಟಿಸುತ್ತಿದ್ದ ಬದಲಾವಣೆಯನ್ನು ಹತ್ತಿರದಿಂದ ಗಮನಿಸುತ್ತಿದ್ದವರು. ಹಾಗಾಗಿ ಅವರು ಬದಲಾದ ಕ್ರಮದಲ್ಲಿ ಶಿಕ್ಷಣ ನಡೆಯಬೇಕೆಂದು ಬಯಸುತ್ತಾರೆ.

ಉಪಾಧ್ಯಾಯ ನಾರಪ್ಪ ಕಲಿಸುವ ಕ್ರಮದ ಬಗ್ಗೆ ಕಾದಂಬರಿಕಾರರಿಗೆ ಬೇಸರವಿದೆ. ಪುಟ್ಟಣ್ಣನವರು ತಮ್ಮೆಲ್ಲ ಆಲೋಚನೆಯನ್ನು ಸದಾಶಿವ ದೀಕ್ಷಿತರ ಪಾತ್ರದ ಮುಖಾಂತರ ವ್ಯಕ್ತಪಡಿಸಿದ್ದಾರೆ. ನಾರಪ್ಪ ಮಕ್ಕಳಿಗೆ ಕಲಿಸುವಾಗ ಅತಿಯಾದ ಬೆತ್ತದ ಶಿಕ್ಷೆಯನ್ನು ನೀಡುತ್ತಾನೆ. ಅಲ್ಲದೇ ಯಾವಾಗಲೂ ಆಲಸಿಯಾಗಿದ್ದು ಅಧ್ಯಾಪಕ ಹುದ್ದೆಗೆ ತಕ್ಕವನಾಗಿರುವದಿಲ್ಲ. ನಾರಪ್ಪ ಕಠಿಣ ಶಿಕ್ಷೆಯಿಂದ ಮಾತ್ರ ವಿದ್ಯಾರ್ಥಿಗಳನ್ನು ನಿಯಂತ್ರಣದಲ್ಲಿಡಲು ಸಾಧ್ಯ ಎಂದು ಬಲವಾಗಿ ನಂಬಿದವನು. ಸದಾಶಿವ ದೀಕ್ಷಿತರ ಮುಖಾಂತರ ಹೇಳಿಸುವ ಮಾತುಗಳಲ್ಲಿ ನಾವು ಪುಟ್ಟಣ್ಣನವರ ಶೈಕ್ಷಣಿಕ ಚಿಂತನೆಗಳನ್ನು ಅರ್ಥಮಾಡಿಕೊಳ್ಳಬಹುದು. ಮಕ್ಕಳಿಗೆ ಪರಕಾಯ ಪ್ರವೇಶ ಮಾಡಿಕೊಂಡು ಬೋಧನೆಯಲ್ಲಿ ತೊಡಗಬೇಕು ಎಂದಿದ್ದಾರೆ ಎಂ.ಎಸ್. ಪುಟ್ಟಣ್ಣನವರು. ಅಲ್ಲದೇ ಮನೋ ಚಿಂತನೆಯನ್ನು ಅರ್ಥಮಾಡಿಕೊಂಡು ಅವರಿಗೆ ಪಾಠ ಹೇಳುವವರು ನಿಜವಾದ ಉಪಾಧ್ಯಾಯರು ಎಂದಿದ್ದಾರೆ.

ಸದಾಶಿವ ದೀಕ್ಷಿತರ ಮಗ ಮಹಾದೇವ ತನ್ನ ಗುರುಗಳಾದ ನಾರಪ್ಪನವರ ನಡವಳಿಕೆಯ ಬಗ್ಗೆ ತನ್ನ ತಂದೆಗೆ ಹೇಳುತ್ತಾನೆ. ತನ್ನ ಉಪಧ್ಯಾಯರು ವಿದ್ಯಾರ್ಥಿಗಳ ಎದುರಿಗೆ ಚಾಪೆ ಮೇಲೆ ಕುಳಿತುಕೊಂಡು ತೂಕಡಿಸುತ್ತಾರೆ. ಆಗ ಹುಡುಗರೆಲ್ಲ ಪಿಸಪಿಸನೆ ಮಾತನಾಡುತ್ತಾರೆ. ಅಲ್ಲದೇ ಅವರಿಗೆ ಬೇಕಾದ ಕೆಲಸ ಮಾಡಿಕೊಡುವ ಸಿದ್ದ ಎನ್ನುವ ಹುಡುಗನಿಗೆ ಯಾವತ್ತೂ ಹೊಡೆಯುವುದಿಲ್ಲ. ಇದನ್ನೇ ಬಳಸಿಕೊಂಡು ಸಿದ್ದನು ಇತರ ವಿದ್ಯಾರ್ಥಿಗಳ ಮೇಲೆ ಚಾಡಿ ಹೇಳಿ ಹೊಡೆಸುತ್ತಾನೆ ಎಂದು ತನ್ನ ತಂದೆಯ ಜತೆ ಹೇಳುತ್ತಾನೆ. ಈ ಎಲ್ಲ ಸಂಗತಿಗಳು ಉಪಾಧ್ಯಾಯ ವೃತ್ತಿಯ ಮೌಲ್ಯವನ್ನು ಕುರಿತು ಚಿಂತಿಸುವಂತೆ ಮಾಡುತ್ತವೆ. ಕಲಿಸುವ ಕ್ರಮದ ಬಗ್ಗೆ ಸದಾಶಿವ ದೀಕ್ಷಿತರು ನಾರಪ್ಪನಿಗೆ ತಿಳಿ ಹೇಳುತ್ತಾರೆ.

ಹಾಗಲ್ಲ ಉಪಾಧ್ಯಾಯರೆ, ವಿದ್ಯಾಭ್ಯಾಸದ ವಿಚಾರವಾಗಿ ನಮಗೂ ನಿಮಗೂ
ಇರುವ ಭಿನ್ನಾಭಿಪ್ರಾಯ ಇಲ್ಲಿಯೇ. ಎಳೆಯ ಮಕ್ಕಳು ತೊದಲು

ಮಾತಾಡುತ್ತಾರೆ. ಎರಡು ಮೂರು ವರುಷ ವಯಸ್ಸು ಆದ ಹಾಗೆಲ್ಲಾ ಮಾತನ್ನು ಹೆಚ್ಚಾಗಿ ಆಡುತ್ತಾರೆ. ಆದರೆ ಅವರು ಅಕ್ಷರ ಜೋಡಿಸಬಲ್ಲರೇ? ಲೆಕ್ಕ ಮಾಡಬಲ್ಲರೆ? ಇಲ್ಲ. ಅದಕ್ಕೆ ಇನ್ನೂ ಕೆಲವು ವರ್ಷಗಳು ಆಗಬೇಕು. ದೇಹ ಬಲಿತ ಹಾಗೆಲ್ಲ ತಲೆಯ ಮೆದುಳು ಬಲಿಯುತ್ತ ಬರುತ್ತೆ. ಹಾಗೆಯೇ ಸಾಮಾನ್ಯ ಧರ್ಮಗಳನ್ನು ಬುದ್ಧಿಯಿಂದ ತಿಳಿದುಕೊಳ್ಳುತ್ತಾರೆ. ವಯಸ್ಸು ಹೆಚ್ಚಿದ ಹಾಗೆಲ್ಲ ಈ ತಿಳುವಳಿಕೆ ಹೆಚ್ಚಾಗುತ್ತ ಬರುತ್ತದೆ. ದೇಹದಾರ್ಢ್ಯ ಹೆಚ್ಚಾಗಿರುವ ದೊಡ್ಡವರು ಹೆಚ್ಚು ಹೊತ್ತು ಕೆಲಸ ಮಾಡುತ್ತಾರೆ. ಹುಡುಗರಿಂದ ಹೆಚ್ಚಾಗಿ ಕೆಲಸ ಮಾಡಿಸಿದರೆ ಅವರಿಗೆ ಆಯಾಸ ಹೆಚ್ಚಾಗುತ್ತೆ. ದೊಡ್ಡವರಿಗೆ ಜಾಗ್ರತೆಯ ಆಯಾಸವಾಗುವುದಿಲ್ಲ. ದೇಹಕ್ಕೆ ಹೇಗೆ ದೇಹಸಂಬಂಧವು ಬುದ್ಧಿಗೂ ಹಾಗೆಯೇ. ಇದು ಅನುಭವ ಸಿದ್ಧವಾದ ವಿಚಾರವಾಗಿದೆ. ಹೀಗೆ ಚಿಕ್ಕವರಿಗೆ ಬುದ್ಧಿಶಕ್ತಿ ಕಡಿಮೆಯಾಗಿಯೂ ದೊಡ್ಡವರಿಗೆ ಹೆಚ್ಚಾಗಿಯೂ ಇರುವುದು. ಬುದ್ಧಿಗೆ ಆಯಾಸ ಉಂಟು. ದೊಡ್ಡವರಿಗೆ ಹುಡುಗರು ಎಲ್ಲ ವಿಚಾರದಲ್ಲಿಯೂ ಸಮಾನರು ಎಂದು ತಾವು ತಿಳಿಯಕೂಡದು.[೨೦]

ಎಂದು ಹೇಳುವ ಸದಾಶಿವ ದೀಕ್ಷಿತರ ಮಾತುಗಳಲ್ಲಿ ಎಂ.ಎಸ್.ಪುಟ್ಟಣ್ಣನವರಿಗೆ ಎಳೆಯ ಮಕ್ಕಳಿಗೆ ಅಕ್ಷರ ಕಲಿಸುವುದರ ಬಗ್ಗೆ ಇದ್ದ ಚಿಂತನೆ ಮತ್ತು ಚಿಕಿತ್ಸಕ ಕ್ರಮಗಳು ನಮಗೆ ಮನವರಿಕೆಯಾಗುತ್ತವೆ. ಮಕ್ಕಳ ವಯೋಮಾನಕ್ಕೂ ಬೌದ್ಧಿಕ ವಯಸ್ಸಿಗೂ ವ್ಯತ್ಯಾಸಗಳಿರುತ್ತವೆ. ಅದನ್ನು ಗುರುತಿಸಿಕೊಂಡು ಅವರ ವಯೋಮಾನಕ್ಕೆ ತಕ್ಕಂತೆ ಬೋಧಿಸಬೇಕು ಎನ್ನುವುದು ಕಾದಂಬರಿಕಾರರ ಚಿಂತನೆಯಾಗಿದೆ. ಅಲ್ಲದೇ ಬಾಲಕರ ಬುದ್ಧಿಶಕ್ತಿಯನ್ನು ಅವರ ಅರಿಯುವ ಸಾಮರ್ಥ್ಯವನ್ನು ತಿಳಿದು ಅದಕ್ಕೆ ಅನುಸಾರವಾಗಿ ಪಾಠ ಹೇಳತಕ್ಕವರೆ ನಿಜವಾದ ಉಪಾಧ್ಯಾಯರು. ಹುಡುಗರಿಗೆ ಪಾಠ ಮಾಡುವುದು ಪರಕಾಯ ಪ್ರವೇಶ ಮಾಡುವುದು ಎರಡೂ ಒಂದೆ ಎಂದು ಹೇಳುವ ಪುಟ್ಟಣ್ಣನವರು ಉಪಾಧ್ಯಾಯ ವೃತ್ತಿಯ ಬಗ್ಗೆ ಬಹುವಾಗಿ ಚಿಂತಿಸುವವರು ಒಬ್ಬ ಮನೋವಿಜ್ಞಾನಿಯ ರೀತಿಯಲ್ಲಿ ಮಕ್ಕಳ ಮನಸ್ಸಿನ ಬಗ್ಗೆ ಆಲೋಚನೆ ಮಾಡಿದವರು. ಅಲ್ಲದೇ ಬೋಧಕನಲ್ಲಿ ಸಹನಾಗುಣವಿರಬೇಕು. ಅದೇನೆಂದರೆ ನಮಗೆ ತಿಳಿಯದ ಒಂದು ಸಂಗತಿಯನ್ನು ಬೇರೊಬ್ಬರು ನಮಗೆ ಹೇಳಿಕೊಡುವಾಗ ನಮ್ಮ ಸ್ಥಿತಿ ಹೇಗೆ ಇರುವುದು ಎಂಬ ಅಂಶವನ್ನು ಜ್ಞಾಪಕದಲ್ಲಿಡಬೇಕು. ಈ ರೀತಿಯ ಸಹನೆ ಶಿಕ್ಷಕನಲ್ಲಿರಬೇಕು. ಮಕ್ಕಳ ಮನಸ್ಸು ಕೋಮಲವಾದುದು. ಅವರಿಗೆ ದಂಡಿಸುವುದರಿಂದ ಅವರು ಕಲಿಕೆಯಿಂದ ವಿಮುಖರಾಗುತ್ತಾರೆ. ಆದ್ದರಿಂದ ಮಕ್ಕಳಿಗೆ ಮುದ ನೀಡುವ ನೀತಿ ಕಥೆಗಳ ಮೂಲಕ ಕಲಿಸಬೇಕು ಎನ್ನುವ ವಿಚಾರಗಳನ್ನು ಒಳಗೊಂಡಿದೆ ಆದರೆ ನಾರಪ್ಪ ಮಾತ್ರ ತನ್ನ ಸ್ವಭಾವಗಳನ್ನು ಬದಲಾಯಿಸಿಕೊಳ್ಳುವುದಿಲ್ಲ. ಆದಾಗ್ಯೂ ಕಲಿಸುವ ಬಗ್ಗೆ ಎಂ ಎಸ್ ಪುಟ್ಟಣ್ಣನವರ ಚಿಂತನೆಗಳು ಸದಾಶಿವ ದೀಕ್ಷಿತರ ಮಾತುಗಳಲ್ಲಿ ವ್ಯಕ್ತಗೊಂಡಿದೆ.

ಕನ್ನಡದ ಕಾದಂಬರಿಯು ರೂಪು ತಳೆಯುತ್ತಿದ್ದ ಕಾಲದಲ್ಲಿ ರಚಿತಗೊಂಡ ಈ ಮೂರು ಕಾದಂಬರಿಗಳು ವಸಾಹತು ಶಿಕ್ಷಣ ಕುರಿತು ಚರ್ಚೆಯನ್ನು ಮಂಡಿಸಿವೆ. ತಮ್ಮ ಸಮಕಾಲೀನ ಸಮಾಜದಲ್ಲಿ ಒಳಿತನ್ನು ಪ್ರೇರೇಪಿಸುವುದು ಈ ಕಾದಂಬರಿಕಾರರ ಆಶಯ. ಆದರ್ಶ ಮತ್ತು ವಾಸ್ತವದ ನೆಲೆಗಟ್ಟಿನಲ್ಲಿ ರಚಿತಗೊಂಡಿರುವ ಈ ಕೃತಿಗಳು ಕಪ್ಪು ಬಿಳುಪು ಮಾದರಿಯ ಪಾತ್ರಗಳನ್ನು ಸೃಷ್ಟಿಸಿಕೊಂಡು ತಮ್ಮ ಕಥನದ ಆಶಯಗಳು ಗೆಲ್ಲುವಂತೆ ನೋಡಿಕೊಂಡಿವೆ. ವಸಾಹತುಶಾಹಿ ಭಾರತೀಯರಲ್ಲಿ ಉಂಟು ಮಾಡಿದ ತಲ್ಲಣಗಳನ್ನು ನಾವು ಈ ಮೂರು ಕಾದಂಬರಿಗಳಲ್ಲೂ ಗುರುತಿಸಬಹುದು. ಸದ್ಧರ್ಮ ಗೆಲ್ಲಬೇಕು. ಆಧುನಿಕತೆಯಿಂದ ಕಲುಷಿತಗೊಂಡ ಪರಿಸರ ಬದಲಾಗಬೇಕು, ಪೌರಾಣಿಕ ಚಿಂತನೆಗಳ ಹಿನ್ನೆಲೆಯಲ್ಲಿ ಸಮಕಾಲೀನ ಬದುಕು ಸುಂದರಗೊಳ್ಳಬೇಕು ಈ ಬಗೆಯ ಆಶಯಗಳನ್ನು ಈ ಕಾದಂಬರಿಗಳು ವ್ಯಕ್ತಪಡಿಸಿವೆ. ತಮ್ಮ ಆಶಯಗಳ ಈಡೇರಿಕೆಗಾಗಿ ಸಾಗುವ ಈ ಕಥಾನಕಗಳು ಆಧುನಿಕ ಶಿಕ್ಷಣ ಕ್ರಮ ತಮ್ಮ ಸಮಕಾಲೀನ ಸಮಾಜದ ಮೇಲೆ ಉಂಟುಮಾಡಿದ ಪರಿಣಾಮ ಹಾಗೂ ಅದರಿಂದನ ಉಂಟಾದ ಒಳಿತು-ಕೆಡಕುಗಳನ್ನು ಚರ್ಚಿಸಿವೆ. ಕೆಲವೊಮ್ಮೆ ಆಂಶಿಕವಾಗಿ ಮತ್ತೆ ಕೆಲ ಸಂದರ್ಭದಲ್ಲಿ ಪ್ರಧಾನ ಬಿತ್ತಿಯಾಗಿ ವಸಾಹತು ಶಿಕ್ಷಣ ರೂಪಿಸಿದ ಚಿಂತನ ಕ್ರಮವನ್ನು ಚರ್ಚೆಗೆ ಒಳಗು ಮಾಡಿವೆ.

ಈ ಕೃತಿಗಳು ಮಂಡಿಸುವ ಸಮಾನ ಸಂಗತಿಗಳೆಂದರೆ ಆ ಕಾಲಮಾನದಲ್ಲಿ ನೂತನ ಶಿಕ್ಷಣ ಕ್ರಮದ ಬಗ್ಗೆ ಸಮಾಜಕ್ಕಿದ್ದ ತಲ್ಲಣ. ಒಂದೆಡೆ ಮಿಷನರಿಗಳು ಮತಾಂತರದ ಉದ್ದೇಶದಿಂದ ಸನಾತನ ಧರ್ಮದ ಲೋಪದೋಷಗಳನ್ನು ಎತ್ತಿ ತೋರಿಸುತ್ತಿದ್ದವು. ಅದೇ ಕಾಲದಲ್ಲಿ ರಾಷ್ಟ್ರೀಯ ಮಟ್ಟದಲ್ಲಿ ಹಿಂದೂ ಧರ್ಮದ ಮೌಲ್ಯಗಳನ್ನು ಪುನಃ ವೃದ್ಧಿಸುವ ಕಾರ್ಯಗಳು ಆರಂಭವಾಗಿದ್ದವು. ಆ ಕಾಲಮಾನದಲ್ಲಿ ರೂಪುಗೊಂಡು ವಸಾಹತು ಶಿಕ್ಷಣ ಜಾರಿಗೆ ಬಂದಿತು. ಇದು ಆರಂಭದ ಕಾಲಕ್ಕೆ ಸ್ಥಳೀಯ ಜಾತಿ, ಧರ್ಮ, ಸಂಸ್ಕೃತಿಯ ನಾಶಕ್ಕಾಗಿ ರೂಪಿಸಿದ ತಂತ್ರವಾಗಿ ಗೋಚರವಾಯಿತು. ಇದರ ಬಗ್ಗೆ ಗುಲ್ವಾಡಿ ವೆಂಕಟರಾಯರ ಭೀಮರಾವ್ ಮತ್ತು ಅಂಬಾಬಾಯಿ ಪಾತ್ರಗಳು ಮಾತನಾಡಿವೆ. ಕೆರೂರು ವಾಸುದೇವಚಾರ್ಯರು 'ಪ್ರಾಥಮಿಕ ನಿರೂಪಣೆ' ಎನ್ನುವ ತಮ್ಮ ಮಾತುಗಳಲ್ಲೆ ಈ ಬಗೆಯ ತಳಮಳವನ್ನು ವ್ಯಕ್ತಪಡಿಸಿದ್ದಾರೆ.

ಒಂದು ಹಂತಕ್ಕೆ ಪಾದ್ರಿಗಳು ಮುದ್ರಿಸಿದ ಪುಸ್ತಕಗಳನ್ನು ಓದುವುದು ಧರ್ಮ ವಿರೋಧದಂತೆ ಕಾಣಿಸುತ್ತಿತ್ತು. ಆಧುನಿಕ ಸಂಪ್ರದಾಯ ಶಿಕ್ಷಣ ಪಡೆದ ತರುಣ ತರುಣಿಯರ ವ್ಯಕ್ತಿತ್ವ ಬದಲಾಗಿ ಅವರು ಸಂಪ್ರದಾಯ ವಿರೋಧಿಗಳಾಗುತ್ತಾರೆ ಎನ್ನುವ ಚಿಂತನ ಕ್ರಮವೂ ರೂಢಿಯಲ್ಲಿತ್ತು. ಈ ಚಿಂತನೆಗಳನ್ನು ಕಾದಂಬರಿಗಳ ಕೆಲವು ಪಾತ್ರಗಳ ಮೂಲಕ ನಿರೂಪಿಸಲಾಗಿದೆ.

ಇಂಗ್ಲಿಷ್ ಶಿಕ್ಷಣವನ್ನು ಪಡೆದು ಪಾಶ್ಚಾತ್ಯರ ಸಂಪರ್ಕಕ್ಕೆ ಬಂದ ಪುಟ್ಟಣ್ಣ ಪ್ರಜ್ಞಾಪೂರ್ವಕವಾಗಿ 'ಪಾಶ್ಚಾತ್ಯ ಕೀಟಗಳು' ಮತ್ತು 'ಪ್ರಾಗ್ದೇಶೀಯ

ಕ್ರಿಮಿ'ಗಳಿಂದ ಹುಟ್ಟಿದ ಪರಕೀಯ ಸಂಸ್ಕೃತಿಯ ಸಮರ್ಥನೆಗೆ ಇತಿಹಾಸ ಹಾಗೂ ಕಲ್ಪನೆಗಳನ್ನು ಅವಲಂಬಿಸಿದರು. ಇದೇ ಸಾಂಸ್ಕೃತಿಕ ಸಂದರ್ಭದಲ್ಲಿಯೇ ಕಾದಂಬರಿ ರಚನೆಗೆ ಕೈ ಹಾಕಿದ ಗುಲ್ವಾಡಿ ವೆಂಕಟರಾಯರ ಮತ್ತು ಬೋಳಾರ ಬಾಬುರಾಯರ ಮನೋಧರ್ಮ, ಗಳಗನಾಥ ಹಾಗೂ ಪುಟ್ಟಣ್ಣನವರ ಮನೋಧರ್ಮಕ್ಕಿಂತ ಬೇರೆಯಾಗಿತ್ತು. ಇಂದಿರಾಬಾಯಿ (೧೮೯೯)ಯಲ್ಲಿ ಸದ್ಧರ್ಮ ವಿಜಯವನ್ನೇ ಗುಲ್ವಾಡಿಯವರು ತೋರಿಸಿದರೂ ಅವರ ಲಕ್ಷ್ಯ ಸಮಾಜದ ಅನಿಷ್ಟಗಳನ್ನು ವಿಡಂಬಿಸುವುದರ ಕಡೆಗಿತ್ತು. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಗುಲ್ವಾಡಿಯವರ ಮೇಲೆ ದಟ್ಟವಾಗಿ ಬಿದ್ದಿತ್ತಾದುದರಿಂದ ಅವರು ತಮ್ಮ ಸಮಕಾಲೀನ ಸಾಂಸ್ಕೃತಿಕ ಜೀವನವನ್ನು ಅದರ ಹೊರಗಿನಿಂದ ನೋಡಲು ಶಕ್ತರಾದರು.[೨೧]

ಈ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ಮತ್ತೊಂದು ಸಂಗತಿಯೆಂದರೆ ಅದು ಸ್ತ್ರೀ ಶಿಕ್ಷಣ. ಆಧುನಿಕ ಶಿಕ್ಷಣದ ಪರಿಣಾಮಗಳನ್ನು ಮಂಡಿಸುತ್ತಲೇ ಸ್ತ್ರೀ ಶಿಕ್ಷಣದ ಅಗತ್ಯವನ್ನು ಈ ಕಾದಂಬರಿಕಾರರು ಬಲವಾಗಿ ಪ್ರತಿಪಾದಿಸುತ್ತಾರೆ. 'ಇಂದಿರಾಬಾಯಿ' ಕಾದಂಬರಿಯ ಇಂದಿರಾಬಾಯಿಗೆ ಅಮೃತರಾಯ ಮತ್ತು ಜಲಜಾಕ್ಷಿ ಶಿಕ್ಷಣ ಕೊಡಿಸುತ್ತಾರೆ. ಸತಾರದ ಆನಂದಿಬಾಯಿ ಸ್ತ್ರೀ ಶಿಕ್ಷಣ ಪೂರಕವಾದ ವಿದ್ಯಾಶಾಲೆಯನ್ನೂ ತೆರೆದಿರುತ್ತಾರೆ. 'ಇಂದಿರಾ' ಕಾದಂಬರಿಯ ಇಂದಿರೆಯ ಶಿಕ್ಷಣಕ್ಕೆ ಆಕೆಯ ತಾಯಿಯೇ ಆಸಕ್ತಿ ವಹಿಸುತ್ತಾಳೆ. ತಾಯಿ ತೀರಿಕೊಂಡ ತರುವಾಯದಲ್ಲಿ ಆಕೆ ದೇವಯಾನಿಯ ಬಳಿ ನೈತಿಕ ಶಿಕ್ಷಣ ಪಡೆಯುತ್ತಾಳೆ. ಹೀಗೆ ಈ ಎರಡು ಕಾದಂಬರಿಗಳು ಸ್ತ್ರೀ ಶಿಕ್ಷಣದ ಅಗತ್ಯವನ್ನು ಒತ್ತಿ ಹೇಳಿವೆ.

ಆಧುನಿಕ ಶಿಕ್ಷಣ ಕ್ರಮದ ಬಗ್ಗೆ ಆರಂಭಕಾಲದಲ್ಲಿ ಗುಮಾನಿಯ ನೋಟವಿದ್ದುದನ್ನು ಗಮನಿಸಬಹುದು. ಅಂತೆಯೇ ಭಾರತೀಯ ಪರಿಸರದಲ್ಲಿ ಅದು ಉಂಟು ಮಾಡುವ ಬದಲಾವಣೆಗಳ ಬಗೆಗೂ ಆತಂಕವಿತ್ತು. ರಾಜಾರಾಮ್ ಮೋಹನರಾಯ್‌ರಂತಹ ಸುಧಾರಕರು ಇಂಗ್ಲಿಷ್ ಶಿಕ್ಷಣ ಭಾರತೀಯರ ಬಿಡುಗಡೆಗೆ ಇರುವ ಮಾರ್ಗವೆಂದು ಭಾವಿಸಿದರು. ಕಾಲಾನಂತರದಲ್ಲಿ ಅದರಲ್ಲಿನ ಲೋಪಗಳೂ ಕಾಣಿಸತೊಡಗಿದವು. ಗುಲ್ವಾಡಿ ವೆಂಕಟರಾಯರು ಕುಲಕಂಟಕರಾದ ಎಫ್.ಎ., ಬಿ.ಎಗಳು ಎನ್ನುತ್ತಾರೆ. ಬಿ.ಎ ಓದಿಕೊಂಡು ಬೀಡಾಡಿಗಳಾದ ಯುವ ಜನತೆಯ ಬಗೆಗಿನ ಲೇವಡಿಯು ವ್ಯಕ್ತಗೊಂಡಿದೆ.

ಕೆರೂರು ವಸುದೇವಾಚಾರ್ಯರು 'ಮದ್ದೂರಿನ ನಟೇಶ'ನ ಪಾತ್ರದ ಮೂಲಕ ಆಧುನಿಕ ವಿದ್ಯಾವಂತವರ್ಗ ಸರಿಯಾದ ದಾರಿಯಲ್ಲಿ ನಡೆಯುತ್ತಿಲ್ಲ ಎನ್ನುವುದನ್ನು ಸೂಚ್ಯವಾಗಿ ಮಂಡಿಸುತ್ತಾರೆ. ಇಷ್ಟೆಲ್ಲದರ ನಡುವೆಯೂ ಕಾದಂಬರಿಕಾರರಿಗೆ ವಸಾಹತು ಶಿಕ್ಷಣ ಹೊಸಬದುಕಿನ ಆಶಯದಂತೆ ಗೋಚರಿಸಿದೆ. ಆದರೆ ಅದು ನಮ್ಮ ಸಂಸ್ಕೃತಿಯನ್ನು ಅಪಮೌಲ್ಯೀಕರಿಸುವ ಬಗೆಯದು ಎನ್ನುವ ಆತಂಕವು ಅವರ ಆಂತರ್ಯದಲ್ಲಿದೆ.

'ಇಂದಿರಾಬಾಯಿ' 'ಇಂದಿರಾ' ಮತ್ತು 'ಮಾಡಿದ್ದುಣ್ಣೋ ಮಹಾರಾಯ' ಈ ಮೂರು ಕಾದಂಬರಿಗಳು ಸಾಂಪ್ರದಾಯಿಕ ನಿಷ್ಠೆಯ ನೆಲೆಯಲ್ಲಿ ರಚಿತಗೊಂಡಿವೆ. ಅದರೊಂದಿಗೆ ಪಾಶ್ಚಿಮಾತ್ಯ ಚಿಂತನೆಗಳ ಹಿನ್ನೆಲೆಯಲ್ಲಿ ದೇಶಿಯ ಆಲೋಚನೆಗಳನ್ನು ತಿದ್ದುವ ಪ್ರಯತ್ನಗಳನ್ನು ಈ ಕಾದಂಬರಿಗಳು ನಡೆಸಿವೆ. ಆದರ್ಶ ಮತ್ತು ವಾಸ್ತವವಾದಿ ಚಿಂತನೆಗಳನ್ನು ಸಮೀಕರಿಸುವ – ಪ್ರಯತ್ನಗಳನ್ನು ಈ ಕಾದಂಬರಿಗಳು ನಡೆಸಿವೆ. 'ಇಂದಿರಾಬಾಯಿ'ಯ ಕೇಂದ್ರ 'ವಿಧವಾ ವಿವಾಹ', ಈ ವಿವಾಹ ಪ್ರಕ್ರಿಯೆಯನ್ನು ನಡೆಸಲು ಬೇಕಾದ ಪೂರ್ವ ಸಿದ್ಧತೆಗಾಗಿ ಇಂಗ್ಲಿಷ್ ಶಿಕ್ಷಣ ಕ್ರಮವನ್ನು ಬೆಂಬಲಿಸಲಾಗಿದೆ. ಕಲಿತ ಭಾಸ್ಕರರಾಯ ಇಂದಿರಾಬಾಯಿಯನ್ನು ಮದುವೆಯಾಗುತ್ತಾನೆ. ಸಮಾಜ ಸುಧಾರಕ ಅಮೃತರಾಯ ತನ್ನ ಆಶ್ರಯಕ್ಕೆ ಬಂದ ಇಂದಿರಾಬಾಯಿಗೆ ಆಧುನಿಕ ಶಿಕ್ಷಣದ ವ್ಯವಸ್ಥೆ ಮಾಡುತ್ತಾನೆ. ಇಂದಿರಾಬಾಯಿಯ ತಂದೆ ಭೀಮರಾಯ, ತಾಯಿ ಅಂಬಾಬಾಯಿಯರ ಟೀಕೆಗಳ ನಡುವೆಯೂ ಇಂಗ್ಲಿಷ್ ಶಿಕ್ಷಣದ ಬಗೆಗೆ ಕಾದಂಬರಿಕಾರರ ಒಲವು ನಿರೂಪಿತಗೊಂಡಿದೆ.

'ಇಂದಿರೆ' ಕಾದಂಬರಿಯ ಆದರ್ಶದ ವೈಭವೀಕರಣದಲ್ಲಿ ತೊಡಗುತ್ತದೆ. ರಮ್ಯ ಕಥನದ ನಿರೂಪಣೆಯಲ್ಲಿಯೇ ಸ್ತ್ರೀ ಶಿಕ್ಷಣದ ಅಗತ್ಯವನ್ನು ವಿವರಿಸಲಾಗಿದೆ. ಪಾಶ್ಚಿಮಾತ್ಯ ವೈಚಾರಿಕತೆಯ ಹಿನ್ನೆಲೆಯಲ್ಲಿ ಕಾದಂಬರಿ ಪ್ರಗತಿಮುಖಿಯಾದ ಚಿಂತನೆಗಳನ್ನು ನಿರೂಪಿಸಿದೆ. ರಮಾಕಾಂತ ಉನ್ನತ ಶಿಕ್ಷಣ ಪಡೆದು ಸಮಾಜದ ಗೌರವಗಳನ್ನು ಸಂಪಾದಿಸುತ್ತಾನೆ.

'ಮಾಡಿದ್ದುಣ್ಣೋ ಮಹಾರಾಯ' ಹಲವು ಉಪಕತೆಗಳ ಗುಚ್ಛದಂತೆ ತೋರುತ್ತದೆ. ಆದರ್ಶ ಪಾತ್ರಗಳು ಗೆಲ್ಲುತ್ತವೆ. ಕೆಟ್ಟ ವ್ಯಕ್ತಿತ್ವದ ಪಾತ್ರಗಳಿಗೆ ಶಿಕ್ಷೆಯಾಗುತ್ತದೆ. ಉಪಾಧ್ಯಾಯ ಪಂತರ ನಾರಪ್ಪಯ್ಯ ಈ ರೀತಿಯ ಶಿಕ್ಷೆಗೆ ಒಳಗಾಗುವ ಪಾತ್ರವಾಗಿದೆ.

ಹೊಸ ಶಿಕ್ಷಣ ಚಿಂತನೆಗಳನ್ನು ಈ ಕಾದಂಬರಿಗಳು ಸ್ವಾಗತಿಸುತ್ತವೆ. ಆದರೆ ಅದು ಪರಂಪರಾಗತವಾಗಿ ಬಂದಿರುವ ದೇಶಿಯ ಧಾರ್ಮಿಕ ನಂಬಿಕೆಗಳನ್ನು ಅಪಮೌಲ್ಯಗೊಳಿಸಬಾರದೆಂದು ಬಯಸುತ್ತಾರೆ. ಹೊಸದನ್ನು ಸ್ವೀಕರಿಸುತ್ತಲೇ ಹಳೆಯದನ್ನು ಉಳಿಸಿಕೊಳ್ಳುವ ಹಾಗೂ ಅದನ್ನು ಸರಿಪಡಿಸಿಕೊಳ್ಳುವ ಆಶಯಗಳು ಈ ಕಾದಂಬರಿಗಳಲ್ಲಿ ವ್ಯಕ್ತಗೊಂಡಿದೆ. ಹಾಗಾಗಿಯೇ 'ಸದ್ಧರ್ಮದ ವಿಜಯ'ವೇ ಮುಖ್ಯವಾಗುವುದು.

> ಗುಲ್ವಾಡಿ ಬೋಳಾರರು ಪಾಶ್ಚಿಮಾತ್ಯ ವೈಚಾರಿಕ ನೆಲೆಯನ್ನು ಆದರಿಸುತ್ತಾರೆ; ಆಗ ದೇಶಿಯ ವಿಡಂಬನೆ, ಕಟುಟೀಕೆ – ಪ್ರಾಧಾನ್ಯವನ್ನು ಪಡೆದುಕೊಳ್ಳುತ್ತದೆ.
>
> ಕೆರೂರು – ಗಳಗನಾಥರು ಪ್ರಗತಿಗಾಗಿ ಗತಕಾಲವನ್ನು ಭಾವುಕವಾಗಿ ನೆಮ್ಮುತ್ತಾರೆ. ಆದರ್ಶದ ವೈಭವೀಕರಣವು ಈ ಕಾರಣದಿಂದ ಅವರ ಕೃತಿಗಳಲ್ಲಿ ಎದ್ದು ಕಾಣುತ್ತದೆ. ಸಂಪ್ರದಾಯವಾದಿಯಾಗಿರುವ ಪುಟ್ಟಣ್ಣನವರಿಗೆ ಪಾಶ್ಚಿಮಾತ್ಯ ವೈಚಾರಿಕತೆಯಲ್ಲಿ ನಂಬಿಕೆ ಇಲ್ಲ. ಆದರೆ ಆದರ್ಶ ಗತಜೀವನವನ್ನು

ಪುನರುಜ್ಜೀವಿಸುವುದು ಅಸಾಧ್ಯ ಎನ್ನುವ ತಿಳುವಳಿಕೆ ಮತ್ತು ಹೊಸಕಾಲದ ಅನಿವಾರತ್ಯತೆಯ ಅರಿವು ಅವರಿಗೆ ಬಂದು ಬಿಟ್ಟಿದೆ. ಈ ಮೂರು ನಿಲುವುಗಳು ಒಂದೇ ಇಂಗ್ಲಿಷ್ ವಿದ್ಯಾವಂತ ವರ್ಗದ ಮೂರು ವಿಭಿನ್ನ ಧೋರಣೆಗಳು ಎನ್ನುವುದನ್ನು ಮರೆಯಲಾಗದು[೨].

ಆರಂಭದ ಕಾದಂಬರಿಗಳಲ್ಲಿ ಚರ್ಚಿತಗೊಂಡಿರುವ ಈ ಜಿಜ್ಞಾಸೆಗಳು ಮುಂಚಿ ಕನ್ನಡ ಕಾದಂಬರಿಗಳಲ್ಲಿ ಸ್ಪಷ್ಟತೆಯನ್ನು ಪಡೆದುಕೊಂಡಿವೆ. ಕುವೆಂಪು ಮತ್ತು ಶಿವರಾಮ ಕಾರಂತರು ತಮ್ಮ ಕಾದಂಬರಿಗಳಲ್ಲಿ ಆಧುನಿಕ ಶಿಕ್ಷಣದ ಬಗೆಗೆ ಗಟ್ಟಿ ನಿಲುವುಗಳನ್ನು ವ್ಯಕ್ತಪಡಿಸಿವೆ. ಈ ಇಬ್ಬರು ಹೊಸ ಶಿಕ್ಷಣದ ಪ್ರಭಾವ ಮತ್ತು ಪ್ರೇರಣೆಗಳನ್ನು ತಮ್ಮ ಕಾದಂಬರಿಗಳ ಪಾತ್ರಗಳ ಮೂಲಕವೇ ನಿರ್ವಚನಗೊಳಿಸಿದ್ದಾರೆ.

ಕುವೆಂಪು ಮತ್ತು ಶಿವರಾಮಕಾರಂತರು ಕನ್ನಡಿಗರ ಪ್ರಜ್ಞೆಯನ್ನು ವಿಸ್ತಾರಗೊಳಿಸಿದ ಲೇಖಕರು. ತಮ್ಮ ಸಾಹಿತ್ಯವನ್ನು ರಸಾನುಭವಕ್ಕೆ ಸೀಮಿತಗೊಳಿಸಿಕೊಂಡವರಲ್ಲ. ಪ್ರಖರವಾದ ವೈಚಾರಿಕ ಚಿಂತನೆಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಹೊಸ ಮಾರ್ಗ ತೋರಿದರು. ಕುವೆಂಪು ಅವರು ಶೈಕ್ಷಣಿಕ ಕ್ಷೇತ್ರದಲ್ಲಿನ ಹಲವು ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿದ್ದರು. ಶಿವರಾಮ ಕಾರಂತರು ರವೀಂದ್ರನಾಥ ಠಾಕೂರರ ಚಿಂತನೆಗಳಿಂದ ಪ್ರಭಾವಿತಗೊಂಡು ಶಿಕ್ಷಣದಲ್ಲಿ ಹಲವು ಪ್ರಯೋಗಗಳನ್ನು ನಡೆಸಿದವರು.

ಕಾಲದಿಂದ ಕಾಲಕ್ಕೆ ಬದಲಾದ ಶೈಕ್ಷಣಿಕ ಚಿಂತನೆಗಳು, ಶಿಕ್ಷಣ ಸಿದ್ಧಾಂತಗಳು, ಶೈಕ್ಷಣಿಕ ನೀತಿಗಳು ಹಾಗೂ ಪದ್ಧತಿಗಳಿಗೆ ನಿರಂತರವಾದ ಪ್ರತಿಕ್ರಿಯೆಗಳನ್ನು ನೀಡಿದ್ದಾರೆ. ಇವರ ಶೈಕ್ಷಣಿಕ ಚಿಂತನೆಗಳನ್ನು ಪ್ರತ್ಯೇಕವಾಗಿ ಅಧ್ಯಯನ ನಡೆಸಬೇಕಾದ ಅಗತ್ಯವಿದೆ. ಹೊಸ ಶಿಕ್ಷಣದ ಬಗೆಗೆ ಅದರಿಂದ ಭಾರತದಲ್ಲಿ ಉಂಟಾದ ಪ್ರಭಾವ ಹಾಗೂ ಪರಿಣಾಮಗಳನ್ನು ಇವರ ವೈಚಾರಿಕ ಬರಹಗಳು ವಿಶ್ಲೇಷಣೆ ನಡೆಸಿವೆ. ಅಂತೆಯೇ ಇವರ ಕಾದಂಬರಿಗಳ ಹಲವು ಪಾತ್ರಗಳ ಶಿಕ್ಷಣ ಚಿಂತನೆಯ ಮುಂದುವರಿಕೆಯ ಭಾಗವಾಗಿ ಚಿತ್ರಿತಗೊಂಡಿವೆ.

ಕುವೆಂಪು ಅವರು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮಲೆನಾಡಿನಲ್ಲಿ ಹೊಸ ಶಿಕ್ಷಣ ಜಾರಿಗೊಂಡ ಬಗೆಯನ್ನು ವಿವರಿಸಿದ್ದಾರೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಆ ಶಿಕ್ಷಣದಿಂದ ಉಂಟಾದ ಪರಿಣಾಮಗಳನ್ನು ಹೂವಯ್ಯ ಮತ್ತು ರಾಮಯ್ಯರ ಪಾತ್ರಗಳ ಮೂಲಕ ನಿರೂಪಿಸಿದ್ದಾರೆ. ಶಿವರಾಮ ಕಾರಂತರ 'ಸರಸಮ್ಮನ ಸಮಾಧಿ', 'ಮೂಕಜ್ಜಿಯ ಕನಸುಗಳು', 'ಮರಳಿ ಮಣ್ಣಿಗೆ', 'ಬೆಟ್ಟದ ಜೀವ' ಈ ನಾಲ್ಕು ಕಾದಂಬರಿಗಳು ಇಂಗ್ಲಿಷ್ ಶಿಕ್ಷಣದ ವೈಫಲ್ಯವನ್ನು ವಿವರಿಸಿವೆ. ಈ ಇಬ್ಬರು ಕಾದಂಬರಿಕಾರರ ಕಾದಂಬರಿಗಳ ಪಾತ್ರಗಳ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ವಸಾಹತು ಶಿಕ್ಷಣ ಕುರಿತು ಅವರ ನಿಲುವುಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ನಿರ್ವಚಿಸಲಾಗಿದೆ. ಅದಕ್ಕೆ ಪೂರಕವಾಗಿ ಅವರ ವೈಚಾರಿಕ ಲೇಖನಗಳ ಶೈಕ್ಷಣಿಕ ಚಿಂತನೆಗಳನ್ನು ಬಳಸಿಕೊಳ್ಳಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಶ್ರೀನಿವಾಸ ಹಾವನೂರು, ಹೊಸಗನ್ನಡ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೪, ಪುಟ ೨೮೪.

೨. ಶಿವರಾಮ ಪಡಿಕ್ಕಲ್, ನಾಡು ನುಡಿಯ ರೂಪಕ: ರಾಷ್ಟ್ರ, ಆಧುನಿಕತೆ ಮತ್ತು ಕನ್ನಡದ ಮೊದಲ ಕಾದಂಬರಿಗಳು, ಮಂಗಳೂರು ವಿಶ್ವವಿದ್ಯಾನಿಲಯ, ೨೦೦೧, ಪುಟ ೫೫.

೩. ಬರಗೂರು ರಾಮಚಂದ್ರಪ್ಪ (ಸಂ), ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು, ಕನ್ನಡ ಸಾಹಿತ್ಯ ಅಕಾಡೆಮಿ, ೧೯೯೩, ಪುಟ ೧೪೬.

೪. ಶಿವರಾಮ ಪಡಿಕ್ಕಲ್, ನಾಡು ನುಡಿಯ ರೂಪಕ: ರಾಷ್ಟ್ರ, ಆಧುನಿಕತೆ ಮತ್ತು ಕನ್ನಡದ ಮೊದಲ ಕಾದಂಬರಿಗಳು, ಮಂಗಳೂರು ವಿಶ್ವವಿದ್ಯಾನಿಲಯ, ೨೦೦೧, ಪುಟ ೩೩.

೫. ಜಿ ಎಸ್ ಅಮೂರ, ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬, ಪುಟ ೧೨.

೬. ಗುಲ್ವಾಡಿ ವೆಂಕಟರಾಯರು, ಇಂದಿರಾಬಾಯಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೧, ಪುಟ – ಮುನ್ನುಡಿ.

೭ ಕೆರೂರು ವಾಸುದೇವಚಾರ್ಯರು, ಇಂದಿರಾ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೮, ಪುಟ ೧.

೮. ಗಳಗನಾಥ, ಪ್ರಬುದ್ಧ ಪದ್ಮನಯನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೩, ಪುಟ ೩.

೯. ಗುಲ್ವಾಡಿ ವೆಂಕಟರಾಯ, ಇಂದಿರಾಬಾಯಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೧, ಪುಟ ೬೧.

೧೦. ಅದೇ, ಪುಟ ೬೧.

೧೧. ಅದೇ, ಪುಟ ೬೫.

೧೨. ಜಿ.ಎಸ್.ಅಮೂರ, ಕನ್ನಡ ಕಥನ ಸಾಹಿತ್ಯ–ಕಾದಂಬರಿ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೯, ಪುಟ ೨೯.

೧೩. ಅದೇ, ಪುಟ ೪೫.

೧೪. ಎಂ.ಎಸ್.ಪುಟ್ಟಣ್ಣ, ಮಾಡಿದ್ದುಣ್ಣೋ ಮಹಾರಾಯ, ಕಾವ್ಯಾಲಯ, ಮೈಸೂರು, ೧೯೪೫, ಪುಟ ೪೦.

೧೫. ಗುಲ್ವಾಡಿ ವೆಂಕಟರಾಯ, ಇಂದಿರಾಬಾಯಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೧, ಪುಟ ೬೫.

೧೬. ಕೆರೂರು ವಾಸುದೇವಾಚಾರ್ಯ, ಇಂದಿರಾ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೮, ಪುಟ ೧೪.

೧೭. ಅದೇ, ಪುಟ ೪೫.

೧೮. ಜಿ.ಎಸ್.ಅಮೂರ, ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬, ಪುಟ ೩೫.

೧೯. ಕೆರೂರು ವಾಸುದೇವಾಚಾರ್ಯ, ಇಂದಿರಾ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೮, ಪುಟ ೪೫.

೨೦. ಎಂ.ಎಸ್.ಪುಟ್ಟಣ್ಣ, ಮಾಡಿದ್ದುಣ್ಣೋ ಮಹಾರಾಯ, ಕಾವ್ಯಾಲಯ, ೧೯೪೫, ಪುಟ ೪೦.

೨೧. ಜಿ.ಎಸ್.ಅಮೂರ, ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬, ಪುಟ ೩೫.

೨೨. ಶಿವರಾಮ ಪಡಿಕ್ಕಲ್, ನಾಡು ನುಡಿಯ ರೂಪಕ: ರಾಷ್ಟ್ರ, ಆಧುನಿಕತೆ ಮತ್ತು ಕನ್ನಡದ ಮೊದಲ ಕಾದಂಬರಿಗಳು, ಮಂಗಳೂರು ವಿಶ್ವವಿದ್ಯಾನಿಲಯ, ೨೦೦೧, ಪುಟ ೧೧೨.

## ಅಧ್ಯಾಯ ೫ : ನವೋದಯ ಪಂಥದ ಆಯ್ದ ಕಾದಂಬರಿಗಳು

೫.೧ ಕುವೆಂಪು ಕಾದಂಬರಿಗಳು

೫.೨ ಶಿವರಾಮ ಕಾರಂತರ ಆಯ್ದ ಕಾದಂಬರಿಗಳು

ಅಧ್ಯಾಯ – ೫

## ನವೋದಯ ಪಂಥದ ಆಯ್ದ ಕಾದಂಬರಿಗಳು

ಕುವೆಂಪು ಮತ್ತು ಶಿವರಾಮಕಾರಂತರು ಕನ್ನಡಿಗರ ಪ್ರಜ್ಞೆಯನ್ನು ವಿಸ್ತಾರಗೊಳಿಸಿದ ಲೇಖಕರು. ತಮ್ಮ ಸಾಹಿತ್ಯವನ್ನು ರಸಾನುಭವಕ್ಕೆ ಸೀಮಿತಗೊಳಿಸಿಕೊಳ್ಳದೇ ಪ್ರಖರವಾದ ವೈಚಾರಿಕ ಚಿಂತನೆಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಹೊಸ ಮಾರ್ಗ ತೋರಿದರು. ಕುವೆಂಪು ಅವರು ಶೈಕ್ಷಣಿಕ ಕ್ಷೇತ್ರದಲ್ಲಿನ ಹಲವು ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿದವರು. ಶಿವರಾಮ ಕಾರಂತರು ರವೀಂದ್ರನಾಥ ಠಾಕೂರರ ಚಿಂತನೆಗಳಿಂದ ಪ್ರಭಾವಿತಗೊಂಡು ಶಿಕ್ಷಣದಲ್ಲಿ ಹಲವು ಪ್ರಯೋಗಗಳನ್ನು ನಡೆಸಿದವರು

ಈ ಇಬ್ಬರು ಬರಹಗಾರರು ಕಾಲದಿಂದ ಕಾಲಕ್ಕೆ ಬದಲಾದ ಶೈಕ್ಷಣಿಕ ಚಿಂತನೆಗಳು, ಶಿಕ್ಷಣ ಸಿದ್ಧಾಂತಗಳು, ಶೈಕ್ಷಣಿಕ ನೀತಿಗಳು ಹಾಗೂ ಪದ್ಧತಿಗಳಿಗೆ ನಿರಂತರವಾದ ಪ್ರತಿಕ್ರಿಯೆಗಳನ್ನು ನೀಡಿದ್ದಾರೆ. ಇವರ ಶೈಕ್ಷಣಿಕ ಚಿಂತನೆಗಳನ್ನು ಪ್ರತ್ಯೇಕವಾಗಿ ಅಧ್ಯಯನ ನಡೆಸಬೇಕಾದ ಅಗತ್ಯವಿದೆ. ಹೊಸ ಶಿಕ್ಷಣ ಹಾಗೂ ಅದರಿಂದ ಭಾರತದಲ್ಲಿ ಉಂಟಾದ ಪ್ರಭಾವ ಮತ್ತು ಪರಿಣಾಮಗಳನ್ನು ಇವರ ವೈಚಾರಿಕ ಬರಹಗಳು ವಿಶ್ಲೇಷಣೆ ನಡೆಸಿವೆ. ಅಂತೆಯೇ ಇವರ ಕಾದಂಬರಿಗಳ ಹಲವು ಪಾತ್ರಗಳ ಶಿಕ್ಷಣ ಚಿಂತನೆಯ ಮುಂದುವರಿಕೆಯ ಭಾಗವಾಗಿ ಚಿತ್ರಿತಗೊಂಡಿವೆ.

ಕುವೆಂಪು ಅವರು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮಲೆನಾಡಿನಲ್ಲಿ ಹೊಸ ಶಿಕ್ಷಣ ಜಾರಿಗೊಂಡ ಬಗೆಯನ್ನು ವಿವರಿಸಿದ್ದಾರೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಆ ಶಿಕ್ಷಣದಿಂದ ಉಂಟಾದ ಪರಿಣಾಮಗಳನ್ನು ಹೂವಯ್ಯ ಮತ್ತು ರಾಮಯ್ಯರ ಪಾತ್ರಗಳ ಮೂಲಕ ನಿರೂಪಿಸಿದ್ದಾರೆ. ಶಿವರಾಮ ಕಾರಂತರ 'ಸರಸಮ್ಮನ ಸಮಾಧಿ', 'ಮೂಕಜ್ಜಿಯ ಕನಸುಗಳು', 'ಮರಳಿ ಮಣ್ಣಿಗೆ', 'ಬೆಟ್ಟದ ಜೀವ' ಈ ನಾಲ್ಕು ಕಾದಂಬರಿಗಳು ಇಂಗ್ಲಿಷ್ ಶಿಕ್ಷಣದ ವೈಫಲ್ಯವನ್ನು ವಿವರಿಸಿವೆ. ಈ ಇಬ್ಬರು ಕಾದಂಬರಿಕಾರರ ಕಾದಂಬರಿಗಳ ಪಾತ್ರಗಳ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ವಸಾಹತು ಶಿಕ್ಷಣ ಕುರಿತು ಅವರ ನಿಲುವುಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ನಿರ್ವಚಿಸಲಾಗಿದೆ. ಅದಕ್ಕೆ ಪೂರಕವಾಗಿ ಅವರ ವೈಚಾರಿಕ ಲೇಖನಗಳ ಶೈಕ್ಷಣಿಕ ಚಿಂತನೆಗಳನ್ನು ಬಳಸಿಕೊಳ್ಳಲಾಗಿದೆ.

### ೫.೧ ಕುವೆಂಪು ಕಾದಂಬರಿಗಳು

ಸಾಂಪ್ರಾದಾಯಿಕ ಶಿಕ್ಷಣ ಪದ್ಧತಿ ಹಾಗೂ ವಸಾಹತು ಶಿಕ್ಷಣ ನೀತಿಗಳನ್ನು ಕುರಿತ ಕುವೆಂಪು ಚಿಂತನೆ ಅವರ ಕಾವ್ಯ, ಕಾದಂಬರಿ, ನಾಟಕ, ವೈಚಾರಿಕ ಬರೆಹ, ಭಾಷಣ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಅಭಿವ್ಯಕ್ತಿಗೊಂಡಿದೆ. 'ವಿದ್ಯೆ ಎನ್ನುವುದು ಒಬ್ಬ

ಸಾಮಾನ್ಯ ಮನುಷ್ಯನನ್ನು ಮೃಗತ್ವದಿಂದ ದೈವತ್ವಕ್ಕೆ ಎತ್ತುವ ಒಂದು ಸಾಧನ ಹಾಗೂ ವಿಧಾನ' ಎನ್ನುವುದು ಕುವೆಂಪು ಅವರ ಆಶಯ. ಶಿಕ್ಷಣಕ್ಕೆ ಎರಡು ಉದ್ದೇಶಗಳಿವೆ. 'ಒಂದು ಲೌಕಿಕ ಉದ್ದೇಶ, ಮತ್ತೊಂದು ಆಧ್ಯಾತ್ಮಿಕ ಉದ್ದೇಶ. ನಮ್ಮ ಹೊಟ್ಟೆ ಬಟ್ಟೆಗಳಿಗೆ ಸಂಪಾದನೆ ಮಾಡಿಕೊಂಡು ಜೀವನವನ್ನು ಸುಖಮಯವಾಗಿ ಮಾಡಿಕೊಳ್ಳಬೇಕೆಂಬ ಲೌಕಿಕ ಉದ್ದೇಶವೇ ಬಹುಜನರ ಆಶಯ ಎಂದಿದ್ದಾರೆ ಕುವೆಂಪು. ಅಂತಹ ಬಹುಜನರ ಆಶಯಗಳು ಇಂದು ಈಡೇರುತ್ತಿವೆಯಾ? ಎಂಬ ಪ್ರಶ್ನೆಗೆ ಉತ್ತರ ಸರಳವಾಗಿಲ್ಲ. ಲೌಕಿಕ ಬದುಕು ಇಂದು ಹೊಟ್ಟೆ ಬಟ್ಟೆ ಸಂಪಾದನೆಗೆ ಮಾತ್ರ ಸೀಮಿತವಾಗಿಲ್ಲ. ಶಿಕ್ಷಣ ಭೋಗಜೀವನವನ್ನು ಒದಗಿಸಿಕೊಡುವ ಚಿಮ್ಮುಹಲಗೆಯಾಗಬೇಕು ಎನ್ನುವುದು ಬಹುಸಂಖ್ಯಾತರ ಬಯಕೆಯಾಗಿದೆ. ಲಕ್ಷಾಂತರ ರೂಪಾಯಿ ವಂತಿಕೆ ನೀಡಿ ತಮ್ಮ ಮಕ್ಕಳನ್ನು ಓದಿಸಬೇಕು ಹಾಗೂ ಆ ಮಕ್ಕಳು ಎಲ್ಲ ಕಾಲದಲ್ಲಿಯೂ ಪುಸ್ತಕಗಳಿಗೆ ಅಂಟಿಕೊಂಡಿರಬೇಕು ಎನ್ನುವುದು ಅಸಂಖ್ಯ ಪೋಷಕರ ಬಯಕೆ. ಶಿಕ್ಷಣ ಇಂದು ಮಾರುಕಟ್ಟೆಯ ಸರಕಿನಂತಾಗಿದೆ. ಇದನ್ನು ಉದ್ಯಮವನ್ನಾಗಿಸಿಕೊಂಡವರು ಸಮಾಜದಲ್ಲಿ ಒತ್ತಡವನ್ನು ಸೃಷ್ಟಿಸುತಿದ್ದಾರೆ. ಓದು ಬರೆಹ ಕಲಿತ ಮಾತ್ರಕ್ಕೆ ಶಿಕ್ಷಣ ದೊರೆಯಿತು ಎಂದರ್ಥವಲ್ಲ.

ಕುವೆಂಪು ಅವರಿಗೆ ೧೯೧೬ ರಲ್ಲಿ ಕುಪ್ಪಳಿಯ ಮನೆಯಲ್ಲಿ ಖಾಸಗಿ ಮೇಷ್ಟ್ರ ಮೂಲಕ ವಿದ್ಯಾಭ್ಯಾಸ ಆರಂಭವಾಯಿತು. ಇದು ಭಾರತೀಯ ಸಮಾಜದಲ್ಲಿದ್ದ ಗುರುಕುಲ ಶಿಕ್ಷಣ ಪದ್ಧತಿಗೆ ಹತ್ತಿರವಾದುದು. ಅನಂತರ ಅವರು ತೀರ್ಥಹಳ್ಳಿಯ ಮಾಧ್ಯಮಿಕ ಶಾಲೆಗೆ ಸೇರಿದರು. ಮುಂದಿನ ಕಲಿಕೆಯೆಲ್ಲ ವಸಾಹತು ಶಿಕ್ಷಣ ನೀತಿಯಿಂದಾಗಿ ರೂಪುಗೊಂಡಿದ್ದ ಕ್ರೈಸ್ತ ಮಿಷನರಿ ಶಾಲೆಗಳಲ್ಲಿ ಹಾಗೂ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ನಡೆಯಿತು. ಹೀಗಾಗಿ ಸಾಮಾನ್ಯ ರೈತಾಪಿ ಕುಟುಂಬದ ಕುವೆಂಪು ಅಕ್ಷರವಂತರಾಗಿ ಶೈಕ್ಷಣಿಕ ಕ್ಷೇತ್ರದ ಉನ್ನತ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಲು ಕಾರಣವಾದದ್ದು ಬ್ರಿಟಿಷರು ಜಾರಿಗೆ ತಂದಿದ್ದ ವಸಾಹತು ಶಿಕ್ಷಣ ನೀತಿ. ಅದನ್ನು ಅವರು ತಮ್ಮ ಆತ್ಮಕತೆಯಲ್ಲಿ ಹೇಳಿಕೊಂಡಿದ್ದಾರೆ.

೧೯೨೯ ರಿಂದ ೧೯೬೦ರವರೆಗಿನ ಸರಿಸುಮಾರು ೩೧ ವರ್ಷಗಳ ಅವಧಿಯಲ್ಲಿ ಅಧ್ಯಾಪಕ, ಪ್ರವಾಚಕ, ಪ್ರಾಧ್ಯಾಪಕ, ಪ್ರಾಂಶುಪಾಲ ಹಾಗೂ ವಿಶ್ವವಿದ್ಯಾಲಯದ ಕುಲಪತಿ– ಹೀಗೆ ಶೈಕ್ಷಣಿಕ ರಂಗದ ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿದ ಕುವೆಂಪು ಅವರು ಶಿಕ್ಷಣದ ಬಗ್ಗೆ ಬಹುವಾಗಿ ಚಿಂತಿಸಿದವರು. ಅವರ 'ಪ್ರಸಾರಾಂಗ' (೧೯೫೦), 'ಷಷ್ಠಿನಮನ' (೧೯೬೨), 'ಮನುಜಮತ–ವಿಶ್ವಪಥ' (೧೯೭೧), 'ವಿಚಾರಕ್ರಾಂತಿಗೆ ಆಹ್ವಾನ' (೧೯೭೬), 'ಕುವೆಂಪು ಭಾಷಣಗಳು ಭಾಗ–೨' (೧೯೭೬) ಮುಂತಾದ ಕೃತಿಗಳಲ್ಲಿ ಅವರ ಶೈಕ್ಷಣಿಕ ಚಿಂತನೆಗಳು ದಾಖಲಾಗಿವೆ. ಈ ವಿಚಾರಗಳ ಹಿನ್ನಲೆಯಲ್ಲಿ

ಕುವೆಂಪು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿರುವ ಪಾತ್ರಗಳ ಅಧ್ಯಯನದ ಹಿನ್ನಲೆಯಲ್ಲಿ ಆಧುನಿಕ ಶಿಕ್ಷಣ ಕುರಿತ ಕುವೆಂಪು ನಿಲುವನ್ನು ನಿರ್ವಚಿಸುವ ಪ್ರಯತ್ನ ಮಾಡಲಾಗಿದೆ.

**ಮಲೆಗಳಲ್ಲಿ ಮದುಮಗಳು**

'ಮಲೆಗಳಲ್ಲಿ ಮದುಮಗಳು' (೧೯೬೭) ಕಾದಂಬರಿಯ ಕಥನವು 'ಕಾನೂರು ಹೆಗ್ಗಡಿತಿ' (೧೯೩೬) ಯ ಕಥನಕ್ಕಿಂತ ಹಿಂದಿನದು ಎನ್ನುವುದು ನಿರ್ವಿದಿತ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಕಥನದ ಕಾಲವನ್ನು ತಿಳಿಯಲು ಕಾದಂಬರಿಯಲ್ಲಿಯೇ ಆಧಾರಗಳಿವೆ. ಸ್ವಾಮಿ ವಿವೇಕಾನಂದರು ಪಾಶ್ಚಿಮಾತ್ಯ ದೇಶಗಳಲ್ಲಿ ಭಾರತೀಯ ಸಂಸ್ಕೃತಿಯ ಕೀರ್ತಿ ಪತಾಕೆಯನ್ನು ಹಾರಿಸುತ್ತಿದ್ದ ಅವಧಿಯಲ್ಲಿ ಇತ್ತ ಮಲೆನಾಡಿನಲ್ಲಿ ಕ್ರೈಸ್ತ ಪಾದ್ರಿ ಜೀವರತ್ನಯ್ಯ ಮತಾಂತರ ಕಾರ್ಯದಲ್ಲಿ ತೊಡಗುತ್ತಾನೆ. ಸ್ವಾಮಿ ವಿವೇಕಾನಂದರ ಚಿಕಾಗೋ ಭಾಷಣದ ಚಾರಿತ್ರಿಕ ಸನ್ನಿವೇಶದಿಂದ ಕಾದಂಬರಿಯ ಕಥನದ ಕಾಲಮಾನ ೧೮೯೩ನೇ ಇಸವಿ ಎಂದು ತಿಳಿಯಬಹುದು. ಅಂದರೆ 'ಮಲೆಗಳಲ್ಲಿ ಮದುಮಗಳು' ಹತ್ತೊಂಬತ್ತನೆ ಶತಮಾನದ ಆರಂಭದ ಕಾಲದ ಮಲೆನಾಡಿನ ಕಥೆಯನ್ನು ನಿರೂಪಿಸಿದೆ.

ಬಂಗಾಳ ಪ್ರಾಂತ್ಯದಲ್ಲಿ ಭಾರತೀಯ ಸಂಸ್ಕೃತಿಯನ್ನು ಉನ್ನತೀಕರಿಸುವ ಆ ಮೂಲಕ ಭಾರತೀಯರಲ್ಲಿ ರಾಷ್ಟ್ರೀಯತೆಯ ಪ್ರಜ್ಞೆಯನ್ನು ಮೂಡಿಸುವ ಪ್ರಯತ್ನಗಳು ನಡೆಯುತ್ತಿದ್ದ ಕಾಲದಲ್ಲಿ ಮಲೆನಾಡಿನ ಕಗ್ಗಾಡಿನ ಹಳ್ಳಿಗಳಲ್ಲಿ ಕ್ರೈಸ್ತಪಾದ್ರಿಗಳು ಮತಾಂತರದಲ್ಲಿ ತೊಡಗಿದ್ದರು. ಪರಂಪರಾಗತವಾಗಿ ನಡೆದುಕೊಂಡು ಬರುತ್ತಿದ್ದ ಸ್ಥಳೀಯರ ಬದುಕು ಹಲವು ಬಗೆಯ 'ಹೊಸತು'ಗಳಿಗೆ ಕಣ್ತೆರೆಯುವ ಸನ್ನಿವೇಶಗಳು ಈ ಕಾದಂಬರಿಯಲ್ಲಿ ಚಿತ್ರಿತಗೊಂಡಿವೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಸ್ಥಳೀಯವಾದ ಕಥನವನ್ನು ಹೇಳುತ್ತದೆ. ಅದೇ ಕಾಲಕ್ಕೆ ಅದು ಭಾರತದ ಕಥನವೂ ಆಗಿದೆ. ಕಾದಂಬರಿಯಲ್ಲಿ ಚಿತ್ರಿತಗೊಂಡಿರುವ ಹಲವು ಸನ್ನಿವೇಶಗಳು ಈ ಸಂಗತಿಯನ್ನು ಸಮರ್ಥಿಸುತ್ತವೆ. ಮಲೆನಾಡಿನ ಬದುಕಿಗೆ ವಸಾಹತುಶಾಹಿ ಚಿಂತನೆ ಹರಡಿದ ಬಗೆ ಹಾಗೂ ಮಲೆನಾಡಿನ ಬದುಕು ತನ್ನ ಸಾಂಪ್ರದಾಯಿಕ ನೀತಿಗಳಿಂದ ಹೊರಬಂದು ಹೊಸತನಕ್ಕೆ ಹೊಂದಿಕೊಂಡ ಸಂಕ್ರಮಣ ಸ್ಥಿತಿಯು ಕಾದಂಬರಿಯಲ್ಲಿ ಚಿತ್ರಿತಗೊಂಡಿದೆ. ಪ್ರಾದೇಶಿಕ ಕಥನವಾದರೂ ಇದು ಭಾರತೀಯ ಮನಸ್ಥಿತಿಯನ್ನು ಚಿತ್ರಿಸಿದೆ. ಬ್ರಿಟಿಷರ ವಸಾಹತುಶಾಹಿ ಚಿಂತನಕ್ರಮ ಮತ್ತು ಜೀವನ ವಿನ್ಯಾಸಗಳು ಭಾರತೀಯರ ಬದುಕಿನಲ್ಲಿ ಉಂಟು ಮಾಡಿದ ಬದಲಾವಣೆಗಳ ರೂಪಕದಂತೆ ಈ ಕಾದಂಬರಿಯನ್ನು ಗ್ರಹಿಸಬಹುದು.

ಹೋಟೆಲ್ಲು, ಕಾಫಿ, ಬೈಸಿಕಲ್ಲು, ಆಸ್ಪತ್ರೆ, ಮೆಡಿಸನ್ನು, ಶಾಲೆ – ಈ ರೀತಿಯ ಆಧುನಿಕತೆಯ ಪರಿಕರಗಳು ಮಲೆನಾಡಿನ ಬದುಕಿಗೆ ನುಸುಳಿದವು. ಆಗ ಸ್ಥಳೀಯರಲ್ಲಿ ಒಂದು ಬಗೆಯ ದಿಗಿಲು ಉಂಟಾಯಿತು. ತಮ್ಮ ಎತ್ತಿನ ಗಾಡಿ, ನಾಟಿ ಔಷಧಿ,

ಕೂಲಿಮಠದ ಪಾಠ, ಇವುಗಳಿಗಿಂತ ಹೊಸದಾಗಿ ಬಂದ ವಸ್ತುಗಳು ಭಿನ್ನ ಎನಿಸಿದಾಗ ನಿಧಾನವಾಗಿ ಅವುಗಳ ಆಕರ್ಷಣೆಗೆ ಒಳಗಾದರು.

ಇಂಥ ಸಂದರ್ಭದಲ್ಲಿ ಪರಕೀಯರಿಂದ ಬಂದ ವಸ್ತು ಮತ್ತು ಆಲೋಚನಾ ಕ್ರಮಗಳನ್ನು ಸ್ವೀಕರಿಸುವಲ್ಲಿ ಸ್ಥಳೀಯರಲ್ಲಿ ಉಂಟಾದ ಗೊಂದಲಗಳನ್ನು ಹಲವು ಸನ್ನಿವೇಶಗಳಿಂದ ಗ್ರಹಿಸಬಹುದು. ಈ ಕಾದಂಬರಿಯ ಚರ್ಚಿಸುವ ಆಧುನಿಕತೆಯ ಹಲವು ವಿವರಗಳಲ್ಲಿ ಹೊಸ ಬಗೆಯ ಶಿಕ್ಷಣ ಕ್ರಮವೂ ಒಂದು. ಮಲೆನಾಡಿನ ಕೂಲಿ ಮಠಗಳ ಜಾಗದಲ್ಲಿ 'ಇಸ್ಕೂಲು' ಸ್ಥಾಪಿತಗೊಂಡದ್ದು ಚಾರಿತ್ರಿಕ ಸಂಗತಿ. ಹೀಗೆ ಕಾದಂಬರಿಯಲ್ಲಿ ಆಧುನಿಕ ಶಿಕ್ಷಣದ ಆರಂಭದ ನಡೆ ಹೇಗಿದ್ದವು ಎನ್ನುವ ವಿವರಗಳಿವೆ. ಅದೇ ಕಾಲಕ್ಕೆ ಕಾದಂಬರಿಯ ನಿರೂಪಕ ಆಧುನಿಕ ಶಿಕ್ಷಣವನ್ನು ಪಡೆದವನು ಎಂಬುದು ಗಮನಾರ್ಹ ಸಂಗತಿ.

ಕ್ರೈಸ್ತ ಧರ್ಮ ಪ್ರಚಾರಕ್ಕಾಗಿ ಬಂದ ಮಿಷನರಿಗಳು ಹಾಗೂ ಕ್ರೈಸ್ತ ಪಾದ್ರಿಗಳ ಉದ್ದೇಶ ಸ್ಥಳಿಯರನ್ನು ಕ್ರೈಸ್ತಧರ್ಮಕ್ಕೆ ಮತಾಂತರಗೊಳಿಸುವುದು. ಅವರು ತಮ್ಮ ಉದ್ದೇಶದ ಈಡೇರಿಕೆಗಾಗಿ ಶಿಕ್ಷಣ ಮತ್ತು ವೈದ್ಯಕೀಯ ಸೇವಾ ಕಾರ್ಯಗಳಲ್ಲಿ ತೊಡಗಿದರು. ಹಿಂದೂ ಧರ್ಮದ ವರ್ಣವ್ಯವಸ್ಥೆಯ ಹಾಗೂ ಪುರೋಹಿತಶಾಹಿಯನ್ನು ವಿಮರ್ಶೆ ಮಾಡಿದರು. ಸ್ಥಳೀಯರನ್ನು ಅವರ ಧಾರ್ಮಿಕ ನಂಬಿಕೆಗಳಿಂದ ಬಿಡುಗಡೆಗೊಳಿಸಿ ಕ್ರೈಸ್ತ ಚಿಂತನೆಗಳೆಡೆಗೆ ಆಕರ್ಷಿತರಾಗುವಂತೆ ಮಾಡಲು ಹಲವು ಪ್ರಯತ್ನಗಳನ್ನು ನಡೆಸಿದರು. ಇದಕ್ಕಾಗಿ ಮಂಡಗದ್ದೆಯಲ್ಲಿ ಹೆರಿಗೆ ಆಸ್ಪತ್ರೆಯನ್ನು ತೀರ್ಥಹಳ್ಳಿ, ದೇವಂಗಿ ಮೊದಲಾದ ಊರುಗಳಲ್ಲಿ ಸ್ಕೂಲುಗಳನ್ನು ಸ್ಥಾಪಿಸಿದರು.

> ಮೇಗರಹಳ್ಳಿಯಲ್ಲಿ ಪಾದ್ರಿ ಜೀವರತ್ನಯ್ಯ ಕಟ್ಟಿಸುತ್ತಿದ್ದ – 'ಇಸ್ಕೂಲು ಮನೆ' ಇಂಥ ವಿದ್ಯೆಯ ಅವಕಾಶವನ್ನು ಸ್ಥಳೀಯರಿಗೆ ನೀಡುವ ಕಾರಣಕ್ಕೆ ರೂಪುಗೊಳ್ಳುತ್ತಿತ್ತು. ಆ ಸ್ಕೂಲು ಕಟ್ಟಡದ ವಿನ್ಯಾಸ ಕೂಡ ಭಿನ್ನವಾಗಿದ್ದು ಕಣ್ಣಾಪಂಡಿತರಿಗೆ ಚೀಂಕ್ರನಿಗೆ ಅಲ್ಲಿಯ ಕಟ್ಟಿಗೆ, ಹೆಂಚು, ಮಣ್ಣಿನಿಂದ ಬರುತ್ತಿದ್ದ 'ಹೊಸತನದ ಹಸಿವಾಸನೆ' ಸುತ್ತಲೂ ತುಂಬಿತ್ತು.[೧]

ಮಲೆನಾಡಿನ ಪ್ರದೇಶದಲ್ಲಿ ಕೂಲಿಮಠಗಳ ವಿದ್ಯಾಭ್ಯಾಸ ಪದ್ಧತಿಯು ತನ್ನ ಆಕರ್ಷಣೆಯನ್ನು ಕಳೆದುಕೊಂಡಿತ್ತು. ಇದಕ್ಕೆ ಕಾರಣ ಬ್ರಿಟಿಷರು ಜಾರಿಗೆ ತಂದ ವಸಾಹತು ಶಿಕ್ಷಣ ಹಾಗು ಅದರ ಜಾರಿಗಾಗಿ ಮಿಷನರಿಗಳು ಶಾಲೆಗಳನ್ನು ಆರಂಭಿಸಿದ್ದು. ಅದುವರೆಗೂ ಮಲೆನಾಡಿನ ಸ್ಥಿತಿವಂತರು ಒಂದು ಒಳ್ಳೆಯ ದಿನ ಹಾಗೂ ಮುಹೂರ್ತ ನೋಡಿ ತಮ್ಮ ಮಕ್ಕಳನ್ನು ಅಕ್ಷರ ಅಭ್ಯಾಸಕ್ಕೆ ನಿಯೋಜಿಸುತ್ತಿದ್ದರು. ಆ ದಿನ ಮನೆಯಲ್ಲಿ ಹಬ್ಬದ ವಾತಾವರಣವಿರುತ್ತಿತ್ತು. ಮಗು ಹೊಸತನಕ್ಕೆ ಕಾಲಿಡುವ ಸೂಚಕವಾಗಿತ್ತು. ಅದೊಂದು ಧಾರ್ಮಿಕ ಆಚರಣೆಯ ಭಾಗವಾಗಿತ್ತು. ಆ ದಿನ ಮುಂಜಾನೆಗೆ ಮಗುವನ್ನು

ಎಬ್ಬಿಸಿ, ಆ ಮಗುವಿಗೆ ಅಭ್ಯಂಜನ ಸ್ನಾನ ಮಾಡಿಸಿ, ಹೊಸ ಪಂಚೆ ತೊಡಿಸುತ್ತಿದ್ದರು. ಮನೆಯ ಮುಂದಿನ ತುಳಸಿಕಟ್ಟೆಗೆ ನಮಸ್ಕರಿಸಿ, ಹಿರಿಯರ ಆಶೀರ್ವಾದ ಪಡೆದು ಗುರುಗಳ ಹತ್ತಿರ ಕರೆದೊಯ್ಯುತ್ತಿದ್ದರು. ಗುರುಗಳು ಪ್ರಶಸ್ತವಾದ ಸ್ಥಳದಲ್ಲಿ ನುಣ್ಣನೆಯ ಮರಳನ್ನು ಹರಡಿ ಬಾಲಕನ ಬೆರಳಿಡಿದು ಅದರ ಮೇಲೆ ದೊಡ್ಡದಾಗಿ ಶ್ರೀಕಾರ ಬರೆಸುತ್ತಿದ್ದರು. ಆ ಮಗು ಅದನ್ನು ಹತ್ತು ಸಲ ತಿದ್ದಬೇಕಾಗಿತ್ತು. ಇದು ಮಲೆನಾಡಿನಲ್ಲಿ ಮಕ್ಕಳಿಗೆ ಶಿಕ್ಷಣವನ್ನು ಆರಂಭಿಸುತ್ತಿದ್ದ ರೀತಿ. ಅನಂತರ ಐಗಳು ನಿಗದಿತ ಸಮಯದಲ್ಲಿ ಉಳಿದ ಮಕ್ಕಳೊಂದಿಗೆ ಮರಳಲ್ಲಿ ಅಕ್ಷರಾಭ್ಯಾಸ ಮಾಡಿಸುತ್ತಿದ್ದರು. ಈ ರೀತಿಯ ಸಾಂಪ್ರದಾಯಿಕ ಶಿಕ್ಷಣಕ್ಕೆ ಎದುರಾಗಿ ಪಾದ್ರಿಗಳ 'ಇಸ್ಕೂಲು' ಮಲೆನಾಡಿನಲ್ಲಿ ಆರಂಭಗೊಂಡ ಬಗೆಯನ್ನು 'ಮಲೆಗಳಲ್ಲಿ ಮದುಮಗಳು' ಚಿತ್ರಿಸಿದೆ.

ಕ್ರೈಸ್ತ ಪಾದ್ರಿ ಜೀವರತ್ನಯ್ಯ ಮತಾಂತರದಂತಹ ಹುನ್ನಾರ ನಡೆಸುತ್ತಿದ್ದರೂ ಮಲೆನಾಡಿನ ಗೌಡರು ಆತನ ಬಗೆಗೆ ಆಕರ್ಷಿತರಾಗಿದ್ದರು. ಇದರ ಕಾರಣಗಳನ್ನು ಶೋಧಿಸಿದರೆ ಆಧುನಿಕತೆಗೆ ಮಲೆನಾಡಿನ ಜನರು ಕೌತುಕ ತಿಳಿಯುತ್ತದೆ.

> ಪಾದ್ರಿಯಿಂದ ಅನಕ್ಷರಸ್ಥರಾದ ಗೌಡರುಗಳಿಗೆ ಒದಗುತ್ತಿದ್ದ ಸಹಾಯವೆಂದರೆ, ಹಳೆಯ ರಾಜ್ಯಗಳಳಿದು ಬ್ರಿಟಿಷ್ ಚಕ್ರಾಧಿಪತ್ಯ ಸುಭದ್ರವಾಗಿ ಕಾಲೂರುತ್ತಿದ್ದ ಆ ಕಾಲದಲ್ಲಿ ಹೊಸ ಕಾನೂನುಗಳು, ಹೊಸ ಹೆಸರಿನ ಅಧಿಕಾರಿಗಳು ಹೊಸ ಹೊಸ ರೂಲೀಸುಗಳು ಜಾರಿಗೆ ಬರುತ್ತಿದ್ದುದರಿಂದ ತಕ್ಕ ಮಟ್ಟಿಗೆ ಇಂಗ್ಲಿಷ್ ತಿಳಿದಿದ್ದ ಆ ಪಾದ್ರಿ ಸರ್ಕಾರದ ವ್ಯವಹಾರಗಳಲ್ಲಿ ಅವರಿಗೆ ನೀಡುತ್ತಿದ್ದ ನೆರವು. ಹಳ್ಳಿಯವರು ತೀರ್ಥಹಳ್ಳಿಗೆ ಹೋದಾಗ ಆಸ್ಪತ್ರೆ, ಡಾಕ್ಟರು, ಅಮಲ್ದಾರರು, ಪೊಲೀಸಿನವರು, ಪೋಸ್ಟಾಫೀಸು, ಕಾಫಿ, ಹೋಟೆಲ್, ಇಸ್ಕೂಲು ಮುಂತಾದ ತಾವು ಇಂದೆಂದೂ ಕೇಳದಿದ್ದ ಭಾಷೆಯ ಹೆಸರುಗಳಿಗೆ ದಿಗಿಲುಪಟ್ಟುಕೊಳ್ಳುತ್ತಿದ್ದಾಗ ಪಾದ್ರಿಯಿಂದ ಅವರಿಗೆ ತುಂಬಾ ಉಪಕಾರವಾಗುತ್ತಿತ್ತು. ಆ ಅನುಕೂಲಕ್ಕಾಗಿ ಅವರು ಪಾದ್ರಿಯ ನಿಂದನಾತ್ಮಕವೂ ಖಂಡನಾತ್ಮಕವೂ ಆಗಿದ್ದ ಉಪದೇಶವನ್ನೆಲ್ಲ ನಗುಮೊಗದಿಂದ ಲಘುವಾಗೆಣಿಸಿ ಸಹಿಸಿಕೊಂಡು ಹೋಗುತ್ತಿದ್ದರು.[3]

ಹೀಗೆ ತನಗೆ ತಿಳಿದಿದ್ದ ಇಂಗ್ಲಿಷಿನ ಬಲದಿಂದಲೇ ಮಲೆನಾಡಿನ ಒಕ್ಕಲಿಗರನ್ನು ಪಾದ್ರಿ ಜೀವರತ್ನಯ್ಯ ತನ್ನೆಡೆಗೆ ಸೆಳೆಯುವ ಪ್ರಯತ್ನ ಮಾಡಿದನು. ಬೆಟ್ಟಳ್ಳಿ ದೇವಯ್ಯನಿಗೆ ಬೈಸಿಕಲ್ಲಿನ ಆಸೆಯನ್ನು ತೋರಿಸಿ, ಆತನ ಧರ್ಮದ ದೊಡ್ಡು ನಂಬಿಕೆಗಳ ಬಗೆ ತಿಳಿ ಹೇಳಿ ಕ್ರೈಸ್ತ ಧರ್ಮದೆಡೆಗೆ ಒಲವು ಉಂಟಾಗುವಂತೆ ಮಾಡಿದನು. ಆದರೆ ಬೈಸಿಕಲ್ಲಿನ ಬಗೆಗಿನ ಆಸೆ, ಪಾದ್ರಿ ಜೀವರತ್ನಯ್ಯನ ಮಗಳ ಬಗೆಗಿನ ಮೋಹದಿಂದ. ದೇವಯ್ಯ ಮತಾಂತರಗೊಳ್ಳುವಲ್ಲಿ ಗೊಂದಲಕ್ಕೆ ಒಳಗಾಗುತ್ತಾನೆ.

ಕ್ರೈಸ್ತ ಪಾದ್ರಿಗಳು ಮತಾಂತರದ ಉದ್ದೇಶದ ಈಡೇರಿಕೆಗಾಗಿ ಶಿಕ್ಷಣ ವೈದ್ಯಕೀಯ ಸೇವೆಗಳನ್ನು ಜಾರಿಗೊಳಿಸಿದರು. ಇದರ ಫಲಾನುಭವಿಗಳಾದ ಸ್ಥಳೀಯರು ಮತಾಂತರ ವಿಷಯದ ಬಗೆಗೆ ಆಕರ್ಷಿತರಾಗಲಿಲ್ಲ; ಅದರ ಬದಲಿಗೆ ಮತಾಂತರದ ಆಮಿಷವಾಗಿ ದೊರೆತ ಶಾಲೆ, ಆಸ್ಪತ್ರೆ ಮೊದಲಾದ ಅನುಕೂಲತೆಗಳೆಡೆಗೆ ಆಕರ್ಷಿತರಾದರು. ಅವುಗಳಿಂದ ದೊರೆಯುವ ಅನುಕೂಲಗಳನ್ನು ಪಡೆಯಲು ಉತ್ಸುಕರಾದರು. ಹೀಗೆ ಮತಾಂತರವನ್ನು ವಿರೋಧಿಸಿದ ಮಲೆನಾಡಿಗರು ಶಾಲೆ, ಆಸ್ಪತ್ರೆಯಂತಹ ವ್ಯವಸ್ಥೆಯನ್ನು ಸ್ವಾಗತಿಸಿದರು. ಭಾರತೀಯ ಸಂದರ್ಭದಲ್ಲಿಯೂ ಈ ಕ್ರಿಯೆ ನಡೆಯುತ್ತದೆ. ರಾಜರಾಮ ಮೋಹನರಾಯರಂತಹ ಸುಧಾರಕರು ಇಂಗ್ಲಿಷ್ ಶಿಕ್ಷಣವನ್ನು ಜಾರಿಗೊಳಿಸಬೇಕೆಂದು ಒತ್ತಾಯ ಮಾಡುತ್ತಾರೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮುಕುಂದಯ್ಯ ರೆವರೆಂಟ್ ಲೇಕ್ ಹೀಲ್‌ಗೆ ಹೇಳುವ ಮಾತುಗಳಲ್ಲಿ ಈ ಸಂಗತಿಗಳನ್ನು ಗಮನಿಸಬಹುದು.

> ಕ್ರೈಸ್ತ ಮಿಷನರಿಗಳ ವೈದ್ಯಕೀಯ ಸಹಾಯ, ವಿದ್ಯಾಭ್ಯಾಸ, ಪ್ರಚಾರ ಇತ್ಯಾದಿ ಲೋಕೋಪಕಾರ ಕಾರ್ಯಗಳನ್ನು ಬಾಯಿತುಂಬ ಶ್ಲಾಘಿಸಿದ ಮುಕುಂದಯ್ಯ ಅವರ ಮತಾಂತರ ಚಟುವಟಿಕೆಗಳನ್ನು ಸಮಾಜದ ಅಡಿಪಾಯವನ್ನೆ ಬುಡಮೇಲು ಮಾಡುವ ಕೆಲಸ ಎಂದು ವರ್ಣಿಸಿ, ಕೆಲವು ನಿದರ್ಶನಗಳನ್ನು ಕೊಟ್ಟ. ಮಿಶನ್ ಸ್ಕೂಲು ಚೆನ್ನಾಗಿ ನಡೆಯುವಂತೆ ತಾನು ಸಹಕರಿಸುವುದಾಗಿಯೂ ಇತರರನ್ನೂ ಸಹಕರಿಸುವಂತೆ ಮಾಡುವುದಾಗಿಯೂ ಭರವಸೆಯಿತ್ತನು.[೩]

ಮುಕುಂದಯ್ಯನ ಈ ಮಾತುಗಳಲ್ಲಿ ಕುವೆಂಪು ಅವರ ನಿಲುವು ಪ್ರಕಟಗೊಂಡಿದೆ. ಮತಾಂತರದಂತಹ ಕ್ರಿಯೆಯ ಬಗ್ಗೆ ವಿರೋಧ ವ್ಯಕ್ತಪಡಿಸುತ್ತಲೆ ಶಾಲೆ, ಆಸ್ಪತ್ರೆಯಂತಹ ನೂತನ ವ್ಯವಸ್ಥೆಗಳನ್ನು ಒಪ್ಪಿಕೊಳ್ಳುತ್ತಾರೆ. ಆಧುನಿಕ ಶಿಕ್ಷಣ ಪಡೆದ ನಿರೂಪಕ ಅಂತಹ ಶಿಕ್ಷಣ ವ್ಯವಸ್ಥೆಯೊಂದು ರೂಪುಗೊಳ್ಳುತ್ತಿದುದ್ದನ್ನು ಹಾಗೂ ಸಮಕಾಲೀನ ಸಮಾಜ ಅದನ್ನು ಸ್ವೀಕರಿಸಿದ ರೀತಿಯನ್ನು ಗ್ರಹಿಸಿರುವುದನ್ನು ಗುರುತಿಸಬಹುದಾಗಿದೆ.

ಕ್ರೈಸ್ತ ಮಿಷನರಿಗಳ ಮತಾಂತರದ ಕ್ರಿಯೆಯನ್ನು ಮುಕುಂದಯ್ಯ ಖಂಡಿಸುತ್ತಾನೆ. ಮಿಷನರಿ ಸ್ಕೂಲನ್ನು ಒಪ್ಪಿಕೊಳ್ಳುತ್ತಾನೆ. ಈ ಚಿಂತನೆಯು ವಸಾಹತುಶಾಹಿಯ ಸ್ವೀಕಾರ ಮತ್ತು ನಿರಾಕರಣೆಯ ಬಗೆಗೆ ಕುವೆಂಪು ಅವರ ನಿಲುವುಗಳನ್ನು ವ್ಯಕ್ತಪಡಿಸುತ್ತದೆ.

'ಇಸ್ಕೂಲು' ಆರಂಭಕ್ಕೂ ಮುಂಚೆ ಮಲೆನಾಡಿನಲ್ಲಿ 'ಕೂಲಿ ಮಠಗಳು' ಶಿಕ್ಷಣ ನೀಡುತ್ತಿದ್ದವು. ಅವು ಕೆಲವು ಜಾತಿಯ ಮಕ್ಕಳಿಗೆ ಮಾತ್ರ ಮೀಸಲಾಗಿದ್ದವು. (ಅಗ್ರಹಾರಗಳು ಹಾಗೂ ಬ್ರಹ್ಮಪುರಿಗಳು ಕೇವಲ ಬ್ರಾಹ್ಮಣರಿಗೆ ವಿದ್ಯೆಯನ್ನು ನೀಡುವ ಕೇಂದ್ರಗಳಾಗಿದ್ದಂತೆ) ಕೂಲಿ ಮಠಗಳಲ್ಲಿ ಮೊದಲು ಆಯಾ ಜಾತಿಯ ಮಕ್ಕಳಿಗೆ ಆಯಾ ಜಾತಿಯ ಶಿಕ್ಷಕರು ಪಾಠ ಹೇಳಿಕೊಡುತ್ತಿದ್ದರು. 'ಮಲೆಗಳಲ್ಲಿ ಮದುಮಗಳು' ಕಥನದ ಕಾಲಕ್ಕೆ ಬೇರೆ ಜಾತಿಯ

ಶಿಕ್ಷಕರು (ಐಗಳು) ನೇಮಕಗೊಂಡಿರುವುದನ್ನು ಗಮನಿಸಬಹುದು. (ಅನಂತ ಐಗಳು ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದ ಸೆಟ್ಟರ ಜಾತಿಯವರು) ಈ ವಿಚಾರವನ್ನು ಗಮನಿಸಿದರೆ ಹತ್ತೊಂಬತ್ತನೇ ಶತಮಾನದ ಅಂತ್ಯದ ಕಾಲಕ್ಕೆ 'ವಿದ್ಯೆ ಕಲಿಸುವಿಕೆ' ಜಾತಿಯ ಕಟ್ಟುಪಾಡುಗಳಿಂದ ಬಿಡಿಸಿಕೊಳ್ಳುತ್ತಿದ್ದುದನ್ನು ಅರಿಯಬಹುದು. ವಸಾಹತು ಶಿಕ್ಷಣ ನೀತಿಯಿಂದಾಗಿ ಈ ಬದಲಾವಣೆಗೆ ವೇಗ ದೊರೆಯಿತು.

ಆ ಕಾಲದಲ್ಲಿ ಐಗಳು ಹುಡುಗರಿಗೆ ಅಕ್ಷರಾಭ್ಯಾಸ ಮಾಡಿಸುವುದು, ಅಭ್ಯಂಜನಾದಿಗಳನ್ನು ಮಾಡಿಸಿ ಅವರ ಯೋಗಕ್ಷೇಮಗಳನ್ನು ನೋಡಿಕೊಳ್ಳುವುದು, ಆಳು ಲೆಕ್ಕ ಇಡುವುದು, ಗದುಗಿನ ಭಾರತ, ತೊರವೆ ರಾಮಾಯಣ, ಜೈಮಿನಿ ಭಾರತ ಇತ್ಯಾದಿ ಕಾವ್ಯಗಳನ್ನು ಓಲೆಗರಿಗಳಲ್ಲಿ ನಕಲು ಮಾಡುವುದು ಈ ರೀತಿಯ ಹಲವು ಬಗೆಯ ಕಾರ್ಯಗಳಲ್ಲಿ ತೊಡಗುತ್ತಿದ್ದರು.

ಈ ಪ್ರಕಾರವಾಗಿಯೇ ಕುವೆಂಪು ಅವರಿಗೆ ೧೯೧೬ ರಲ್ಲಿ ಕುಪ್ಪಳ್ಳಿಯ ಮನೆಯಲ್ಲಿ ಖಾಸಗಿ ಮೇಷ್ಟ್ರು ಮೂಲಕ ವಿದ್ಯಾಭ್ಯಾಸ ಆರಂಭವಾಯಿತು (ಇದು ಭಾರತೀಯ ಸಮಾಜದಲ್ಲಿದ್ದ ಗುರುಕುಲ ಶಿಕ್ಷಣ ಪದ್ಧತಿಗೆ ಹತ್ತಿರವಾದುದು). ಅನಂತರ ತೀರ್ಥಹಳ್ಳಿಯ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಣ ಪಡೆದರು. ಮುಂದಿನ ಕಲಿಕೆ (೧೯೨೦ - ೧೯೨೭ ವೆಸ್ಲಿಯನ್ ಹೈಸ್ಕೂಲು) ಆಧುನಿಕ ಶಿಕ್ಷಣದ ಪರಿಣಾಮವಾಗಿ ರೂಪುಗೊಂಡಿದ್ದ ಕ್ರೈಸ್ತ ಮಿಷನರಿ ಶಾಲೆ ಹಾಗೂ ಮಹಾರಾಜ ಕಾಲೇಜಿನಲ್ಲಿ ನಡೆಯುತ್ತದೆ. ಹೀಗೆ ಕುವೆಂಪು ಅವರು ಆಧುನಿಕ ಶಿಕ್ಷಣದ ಭಾಗವಾಗಿಯೇ ಬೆಳೆದು ಬಂದವರು.

> ಈ ಸಾಯಂಕಾಲ ನಡೆಯಲಿರುವ ಈ ಸ್ಕೂಲಿನ ಪ್ರಾರಂಭೋತ್ಸವ ಆ ದಿಕ್ಕಿನಲ್ಲಿ ನಮ್ಮ ಮಿಷನ್ ಇಟ್ಟಿರುವ ಮೊದಲ ಹೆಜ್ಜೆ. ನಿಮ್ಮ ಜನರೆಲ್ಲ, ಅದರಲ್ಲಿಯೂ ನಿಮ್ಮಂಥ ಮತ್ತು ದೇವಯ್ಯ ಗೌಡರಂಥ ಮುಂದಾಳುತನದ ಯುವಕರು, ಮುಂದೆ ಬಂದು ನಮ್ಮೊಡನೆ ಸಹಕರಿಸುತ್ತೀರೆಂದು ನಾನು ದೃಢವಾಗಿ ಹೀಗೆ ನಂಬಿದ್ದೇನೆ[೪]

ರೆವರೆಂಡ್ ಲೇಕ್ ಹಿಲ್ ಅವರು ಶಾಲೆಯ ಆರಂಭೋತ್ಸವ ಕಾರ್ಯಕ್ರಮಕ್ಕೆ ಮುಕುಂದಯ್ಯನನ್ನು ಆಹ್ವಾನಿಸುತ್ತಾನೆ. ಈ ರೀತಿಯಲ್ಲಿ ಕ್ರೈಸ್ತ ಪಾದ್ರಿಗಳು ತಾವು ಮಲೆನಾಡಿನ ಜನರ ನಂಬಿಕೆಗೆ ಪಾತ್ರರಾಗಬೇಕು. ಸ್ಥಳೀಯರ ವಿಶ್ವಾಸಗಳಿಸಿಕೊಂಡ ಅನಂತರದಲ್ಲಿ ಅವರು ನಮ್ಮ ಉಪದೇಶಕ್ಕೆ ಮಣಿಯುತ್ತಾರೆ. ಅದಕ್ಕಾಗಿ ಔಷಧೋಪಚಾರ, ವಿದ್ಯಾಭ್ಯಾಸ ಮೊದಲಾದ ಕಾರ್ಯಗಳ ಮೂಲಕ ದೇಶಿಯರ ಮನಸ್ಸು ಗೆಲ್ಲಬೇಕು ಎಂದು ಯೋಜನೆ ರೂಪಿಸಿರುತ್ತಾರೆ. ಆ ಯೋಜನೆಯಂತೆಯೇ ಅವರು ಶಾಲೆಯನ್ನು ಸ್ಥಾಪಿಸುತ್ತಾರೆ.

ಕಾದಂಬರಿಯಲ್ಲಿ ನವೀನತೆಯ ಸಂಕೇತವಾಗಿದ್ದ ಅಂತಕ್ಕ ಶೆಟ್ಟಿಯ ಹೋಟೇಲ್ ನಾಶವಾಗುತ್ತದೆ. ಅದು ಮುಂದೆ ಇಸ್ಕೂಲು ಮನೆಯಾಗುತ್ತದೆ. ಹೀಗೆ ಆಧುನಿಕತೆಯ

ಅನುಕೂಲಗಳನ್ನು ಕೊಡ ಮಾಡುವ ಎರಡು ವ್ಯವಸ್ಥೆಗಳಲ್ಲಿ ಒಂದು ನಾಶವಾಗಿ ಅದೇ ಜಾಗದಲ್ಲಿ ಮತ್ತೊಂದು ಸ್ಥಾಪನೆಗೊಳ್ಳುತ್ತದೆ. ಈ ವಿಚಾರದಲ್ಲಿ ಹೋಟೇಲು ನಾಶವಾಗಿ ಶಾಲೆ ಆರಂಭಗೊಳ್ಳುವುದು ಕಾದಂಬರಿಕಾರರು ಆಧುನಿಕ ಶಿಕ್ಷಣ ಕ್ರಮವನ್ನು ಆಹ್ವಾನಿಸಿದ ಸಂಕೇತವಾಗಿದೆ. ಶಾಲೆ ಆರಂಭವಾಗುತ್ತದೆ ಎನ್ನುವ ವಿಚಾರ ತಿಳಿದೊಡನೆ ಮುಕುಂದಯ್ಯ

> ನಮ್ಮ ಕಾಡು, ನಿಮ್ಮ ತಿಮ್ಮು, ಹಳೆಮನೆ ಧರ್ಮು, ಹೆಂಚಿನಮನೆ ರಾಮು ಎಲ್ಲರ್‍ನೂ ಇಸ್ಕೂಲು ಸುರುವಾದ ಕೂಡ್ಲೆ, ಮೊದ್ಲೂಲು ತಂದು ಸೇರಿಸಿ ಬಿಡಬೇಕು, ಓದಕ್ಕೆ! ..... ಏನಂತೀಯ? ದೇವಯ್ಯ[25]

ಎಂದು ದೇವಯ್ಯನನ್ನು ಕೇಳುತ್ತಾನೆ. ಶಾಲೆ ಆರಂಭಗೊಳ್ಳುವುದು ಮುಕುಂದಯ್ಯನಿಗೆ ಉತ್ಸಾಹವನ್ನು ಇಮ್ಮಡಿಗೊಳಿಸಿದೆ. ಮಲೆನಾಡಿನ ಮಕ್ಕಳಿಗೆ ಹೊಸ ಶಿಕ್ಷಣ ನೀಡುವ ಅರಿವಿನ ಮಹತ್ವವನ್ನು ಕುವೆಂಪು ಈ ರೀತಿಯಲ್ಲಿ ವಿವರಿಸಿದ್ದಾರೆ. ಇದುವರೆಗೆ ವಿಶ್ಲೇಷಿಸಿದ ಪ್ರಸಂಗಗಳು ಮಲೆನಾಡಿಗೆ ಕಾಲಿಟ್ಟ ಪಾದ್ರಿಗಳು ತಮ್ಮೊಂದಿಗೆ ಆಧುನಿಕ ವಿಚಾರಗಳನ್ನು ಹೊತ್ತು ತಂದದ್ದನ್ನು ಸಾಕ್ಷಿಕರಿಸಿವೆ. ಕ್ರೈಸ್ತ ಪಾದ್ರಿಗಳು ಆಧುನಿಕ ಯಂತ್ರಗಳನ್ನು ಪರಿಚಯಿಸುತ್ತಾರೆ (ಬೀಸೊ ಕಲ್ಲು ಪ್ರಸಂಗ). ಹೀಗೆ ಬಂದ ಪಾದ್ರಿಗಳು ಎಲ್ಲರೂ ಸಾಕ್ಷರರಾಗಬೇಕು ಎನ್ನುವುದನ್ನು ಪ್ರಚಾರ ಮಾಡುತ್ತಾರೆ. ಅಕ್ಷರ ಕಲಿಸಲು ತಾವೇ ಶಾಲೆಗಳನ್ನು ಕಟ್ಟಿಸುತ್ತಾರೆ. ಓದಿನಿಂದ ಯಾವ ಪ್ರಯೋಜನವಿದೆ? ಎಂದುಕೊಂಡಿದ್ದ ಸ್ಥಳೀಯರಿಗೆ ವಿದ್ಯಾಭ್ಯಾಸದ ಪರಿಚಯ ಮಾಡಿಸುತ್ತಾರೆ. ಈ ಕ್ರಿಯೆ ಅನಂತರದ ದಿನಗಳಲ್ಲಿ ಮಲೆನಾಡಿನಲ್ಲಿ ಹಲವು ಬದಲಾವಣೆಗಳಿಗೆ ಕಾರಣವಾಗುತ್ತದೆ. ಮಲೆನಾಡಿನ ಸ್ಥಿತಿವಂತರು ತಮ್ಮ ಮಕ್ಕಳಿಗೆ ದೂರದ ಊರುಗಳಲ್ಲಿ ಶಿಕ್ಷಣ ಕೊಡಿಸುತ್ತಾರೆ. ಮಲೆನಾಡಿನ ತರುಣರು ಶಿವಮೊಗ್ಗ, ಮೈಸೂರಿನಂತಹ ನಗರಗಳಿಗೆ ಹೋಗಿ ಉನ್ನತ ಶಿಕ್ಷಣ ಕಲಿಯಲು ಪಾದ್ರಿಗಳ 'ಇಸ್ಕೂಲು'ಗಳು ಕಾರಣವಾಗುತ್ತವೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಆಧುನೀಕರಣದ ಹಲವು ಚಟುವಟಿಕೆಗಳಿಗೆ ಆಶ್ರಯತಾಣವಾಗಿದ್ದ ಅಂತಕ್ಕನ 'ಹೋಟೆಲ್' ಆ ಚಟುವಟಿಕೆಗಳಿಂದಲೇ ಅವಸಾನ ಹೊಂದುತ್ತದೆ. ಅಂತ್ಯದಲ್ಲೂ ಒಂದು ಬಗೆಯ ಆರಂಭ ಕಾಣುವ ಅಂತಕ್ಕನ ಮನೆ ಇಸ್ಕೂಲಾಗಿ ಪರಿವರ್ತನೆ ಹೊಂದುತ್ತದೆ. ಮಲೆನಾಡಿನ ಬದುಕಿನಲ್ಲಿ ಹಲವು ತಲ್ಲಣಗಳಿಗೆ ಕಾರಣವಾಗಿದ್ದ ಸ್ಥಳವೇ ಶಾಲೆಯಾಗುತ್ತದೆ. ಆ ಮೂಲಕ ಮಲೆನಾಡಿಗೆ ಬರುತ್ತಿರುವ ಬದಲಾವಣೆ ಇದು ನಾಂದಿಯಾಗುತ್ತದೆ.

ಬ್ರಿಟಿಷರು ತಮ್ಮ ವಸಾಹತುಶಾಹಿ ನೆಲೆಯಾದ ಭಾರತದಲ್ಲಿ ತಮ್ಮ ಅನುಕೂಲಗಳಿಗಾಗಿ ರೂಪಿಸಿದ ವ್ಯವಸ್ಥೆಗಳು, ಜಾರಿಗೆ ತಂದ ಕಾಯ್ದೆಗಳು, ಪರೋಕ್ಷವಾಗಿ ಭಾರತೀಯರನ್ನು ಆಧುನೀಕರಣಗೊಳಿಸಿದವು. ಆಧುನಿಕ ಚಿಂತನೆಗಳು ಹಾಗೂ ಪರಿಕರಗಳು ಆರಂಭದಲ್ಲಿ ಪರಂಪರಾಗತವಾಗಿ ನಡೆದುಕೊಂಡು ಬರುತ್ತಿದ್ದ ಭಾರತೀಯ

ಜೀವನ ಕ್ರಮವನ್ನು ಪಲ್ಲಟಗೊಳಿಸಿದವು. ಆದರೆ ಆ ಸಂಕ್ರಮಣ ಸ್ಥಿತಿಯನ್ನು ಅರಗಿಸಿಕೊಂಡ ಭಾರತೀಯರು ಹೊರಗಿನಿಂದ ಬಂದುರಲ್ಲಿ ಯಾವುದನ್ನು ಎಷ್ಟು ಸ್ವೀಕರಿಸಬೇಕು ಎಂಬುದನ್ನು ಅರ್ಥೈಸಿಕೊಂಡರು. ಹಲವು ಬಗೆಯ ಆಮಿಷಗಳಿದ್ದರೂ ಮತಾಂತರ ಪ್ರಕ್ರಿಯೆ ಯಶಸ್ಸು ಕಾಣಲಿಲ್ಲ. ಅದಕ್ಕಾಗಿ ರೂಪಿಸಿದ ತಂತ್ರಗಳನ್ನು ಭಾರತೀಯರು ಧನಾತ್ಮಕವಾಗಿ ಬಳಸಿಕೊಂಡರು. ಈ ಚಿಂತನೆಯು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಸ್ಪಷ್ಟವಾಗಿ ಚಿತ್ರಣಗೊಂಡಿದೆ.

ಕ್ರೈಸ್ತಧರ್ಮ ಮತ್ತು ಆಧುನಿಕ ಶಿಕ್ಷಣ ಹೀಗೆ ಒಂದು ಆಚರಣೆ ಮತ್ತೊಂದು ಪದ್ಧತಿ ಮಲೆನಾಡಿಗೆ ಕಾಲಿಟ್ಟು ಸಂಕಲನ ಉಂಟು ಮಾಡಿದವು. ಇವುಗಳ ಸ್ವೀಕಾರ ಹಾಗೂ ನಿರಾಕರಣೆಯ ಬಗ್ಗೆ ಜಿಜ್ಞಾಸೆ ನಡೆದಿದೆ. ಕನ್ನಡದ ಆರಂಭದ ಕಾದಂಬರಿಗಳಾದ 'ಇಂದಿರಾಬಾಯಿ', 'ಇಂದಿರಾ' ಕಾದಂಬರಿಗಳಲ್ಲಿ ಈ ತಾಕಲಾಟಗಳು ವ್ಯಕ್ತಗೊಂಡಿದೆ. ಈ ವಿಚಾರವನ್ನು ಭಾರತೀಯ ಸ್ಥಿತಿಗೆ ಅನ್ವಯಿಸಿ ನೋಡಬಹುದು. ಒಂದೆಡೆ ವಸಾಹತುಶಾಹಿಯ ದಟ್ಟ ಪ್ರಭಾವ ಉಂಟಾಗುತ್ತಿತ್ತು. ಇದರ ನಡುವೆಯೇ ರಾಷ್ಟ್ರೀಯತೆಯನ್ನು ಕಟ್ಟುವ, ಬೆಳೆಸುವ ಆ ಚಿಂತನೆಯನ್ನು ಪಸರಿಸುವ ಕಾರ್ಯಗಳು ನಡೆಯುತ್ತಿದ್ದವು. ಅದಕ್ಕಾಗಿ ಹಿಂದೂ ಧರ್ಮದ ಪುನರುಜ್ಜೀವನಕ್ಕೆ ಭಾರತೀಯ ಸುಧಾರಕರು ಶ್ರಮಿಸುತ್ತಿದ್ದರು. ಕ್ರೈಸ್ತ ಪಾದ್ರಿಗಳು ಮಲೆನಾಡಿನ ಕಗ್ಗಾಡಿನ ಹಳ್ಳಿಗಳಲ್ಲಿ ಹಿಂದೂ ಧರ್ಮದ ಮೌಢ್ಯಗಳನ್ನು ವಿವರಿಸುತ್ತಿದ್ದ ಕಾಲದಲ್ಲಿ ಉತ್ತರ ಭಾರತದಲ್ಲಿ ಹಿಂದೂ ಧರ್ಮವನ್ನು ಪುನರ್ ಮೌಲ್ಯೀಕರಿಸುವ ಕೆಲಸಗಳು ನಡೆಯುತ್ತಿದ್ದವು.

ರಾಷ್ಟ್ರೀಯ ಮಟ್ಟದಲ್ಲಿನ ಪ್ರತಿಕ್ರಿಯೆಗಳನ್ನು ಮುಕುಂದಯ್ಯನ ಮಾತುಗಳ ಮೂಲಕ ಕುವೆಂಪು ವ್ಯಕ್ತಪಡಿಸಿದ್ದಾರೆ. ಹಾಗಾಗಿ ವಸಾಹತುಶಾಹಿಯ ಕ್ರೈಸ್ತ ಮಿಷನರಿಗಳ ಹುನ್ನಾರಗಳನ್ನು ಖಂಡಿಸುವ ಕಾದಂಬರಿಯು ಆಧುನಿಕತೆಯಿಂದ ದೊರಕಬಹುದಾದ ಅನುಕೂಲತೆಗಳನ್ನು ಒಪ್ಪಿಕೊಂಡಿದೆ. ಅದರಲ್ಲೂ ವಸಾಹತುಶಾಹಿ ಶಿಕ್ಷಣವನ್ನು ಮುಕ್ತವಾದ ಮನಸ್ಸಿನಿಂದ ಈ ಕಥನವು ಸ್ವಾಗತಿಸಿದೆ. ಆ ಮೂಲಕ ಕುವೆಂಪು ಹೊಸ ಶಿಕ್ಷಣದ ಬಗೆಗೆ ಭರವಸೆಯನ್ನು ಇಟ್ಟುಕೊಂಡಿರುವುದು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಸ್ಪಷ್ಟಗೊಂಡಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಭಾರತೀಯ ಸಮಾಜ ಬ್ರಿಟಿಷರು ಜಾರಿಗೆ ತಂದ ವಸಾಹತು ಶಿಕ್ಷಣವನ್ನು ಆಪ್ತವಾಗಿ ಸ್ವೀಕರಿಸಿತು. ರಾಜರಾಮ್ ಮೋಹನರಾಯ್‌ರಂತಹ ಸುಧಾರಕರೇ ಇದರ ಮುಂದಾಳತ್ವವನ್ನು ವಹಿಸಿದ್ದರು. ಭಾರತೀಯರು ತಮ್ಮ ದಾಸ್ಯದಿಂದ ಬಿಡುಗಡೆ ಹೊಂದಲು ಇದು ನೆರವಿಗೆ ಬರುತ್ತದೆ ಎಂದು ನಂಬಲಾಗಿತ್ತು. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಈ ನಂಬಿಕೆಗಳು ಹುಸಿಯಾದವು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮಲೆನಾಡಿಗೆ ವಸಹಾತುಶಾಹಿ ಚಿಂತನೆಗಳು ಮತ್ತು ಸಾಮಗ್ರಿಗಳು ಪ್ರವೇಶ ಪಡೆದ ವಿವರಗಳಿವೆ. ಆ ಬಗೆಯ ಹಲವು

ಸಂಗತಿಗಳಲ್ಲಿ ಕ್ರೈಸ್ತಪಾದ್ರಿ ಜೀವರತ್ನಯ್ಯ – ಕಟ್ಟಿಸುವ ಶಾಲೆಯೂ ಒಂದು. ಈ ಸಂಗತಿಯು ಭಾರತೀಯ ಪರಿಸರದಲ್ಲಿ ರೂಢಿಗತವಾಗಿ ನಡೆದುಕೊಂಡು ಬಂದಿದ್ದ ಮಠದ ಶಾಲೆಗಳು, ಮದರಸಗಳು, ಗುರುಕುಲಗಳ ಜಾಗದಲ್ಲಿ 'ಶಾಲೆ' ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಂಡ ಚಾರಿತ್ರಿಕ ಸಂಗತಿಯನ್ನು ಚಿತ್ರಿಸಿದೆ.

ಮಲೆನಾಡಿಗೆ ಬೈಸಿಕಲ್, ಕಾಫಿ, ಮೆಡಿಸನ್ನುಗಳು ಬಂದಂತೆ ಶಾಲೆಯೂ ಬರುತ್ತದೆ. ಉಳಿದವುಗಳಿಗಿಂತ ಹೆಚ್ಚಿನ ಕೌತುಕವನ್ನು ಉಂಟುಮಾಡಿದ್ದು 'ಶಾಲೆ'. ಇದು ಎಲ್ಲ ಜಾತಿಯವರಿಗೂ ಕಲಿಯಲಿಕ್ಕೆ ಅವಕಾಶಗಳನ್ನು ಕಲ್ಪಿಸಿ ಮಲೆನಾಡಿನ ಭಾಗದ ಜಾತಿಯ ಶ್ರೇಣೀಕರಣ ವ್ಯವಸ್ಥೆಗೆ ಪೆಟ್ಟು ನೀಡಿತು.

ಪಾದ್ರಿ ಜೀವರತ್ನಯ್ಯ ತನ್ನ ವೈಯಕ್ತಿಕ ಹಿತಾಸಕ್ತಿಯ ಹಿನ್ನೆಲೆಯಲ್ಲಿಯೇ ಶಾಲೆ ಮತ್ತು ಆಸ್ಪತ್ರೆಗಳನ್ನು ಕಟ್ಟಿಸುತ್ತಾನೆ. ಅವನ ಈ ಕಾರ್ಯಗಳ ಹಿಂದೆ ಇದ್ದ 'ಮತಾಂತರದ' ಹುನ್ನಾರ ಎಲ್ಲರಿಗೂ ತಿಳಿದಿರುವಂತದ್ದು. ಆದರೆ ಮಲೆನಾಡಿನ ಜನ ಆತನ ಮತಾಂತರದ ಚಿಂತನೆಗೆ ಮನ್ನಣೆ ನೀಡಲಿಲ್ಲ. ಆದರೂ ಶಾಲೆ, ಆಸ್ಪತ್ರೆಯಂತಹ ಆಧುನಿಕ ವಿಚಾರಗಳಿಗೆ ಹಾಗೂ ವ್ಯವಸ್ಥೆಗಳಿಗೆ ಮಾರು ಹೋದರು. ಅವುಗಳನ್ನು ಅಪ್ಪಿಕೊಂಡರು. ತಮ್ಮ ದಿನನಿತ್ಯದ ಬದುಕಿನ ಭಾಗವಾಗಿ ಒಪ್ಪಿಕೊಂಡರು.

ಶಿಕ್ಷಣದ ಉದ್ದೇಶದ ಬಗ್ಗೆ ಚರ್ಚಿಸಿರುವ ಕುವೆಂಪು ಅವರು ಮಕ್ಕಳಿಗೆ ಶಿಕ್ಷಣವನ್ನು ಯಾಕೆ ನೀಡಬೇಕು ಎನ್ನುವುದನ್ನು 'ಮಲೆನಾಡಿನ ಯುವಕರಲ್ಲಿ' ಎನ್ನುವ ಲೇಖನದಲ್ಲಿ ಈ ಕೆಳಗಿನಂತೆ ವಿವರಿಸಿದ್ದಾರೆ.

> ಸರ್ಕಾರದವರು ಕೊಡುವ ನೌಕರಿ ಚಾಕರಿಗಳಿಗಾಗಿ ಓದುವ ಕಾಲ ಹಿಂದಾಯಿತು. ಸಂಸ್ಕೃತಿಗೋಸ್ಕರವಾದರೂ ನಮ್ಮ ಬಾಲಕರು ಓದಬೇಕು. ಬಿ.ಎ. ಎಂ.ಎ ಡಿಗ್ರಿಗಳನ್ನು ಪಡೆಯಬೇಕೆಂದು ನನ್ನ ಭಾವವಲ್ಲ. ಪಡೆದರೇನೋ ಸಂತೋಷವೇ ಆದರೆ ನೆಮ್ಮದಿಯಾಗಿ, ಮೌನಿಯಾಗಿ, ಚೊಕ್ಕವಾಗಿ ಇತರರಿಗೆ ಹಾನಿಕಾರವಾಗದಂತೆ ಸಣ್ಣ ಮನಸ್ಸನ್ನು ಆಚೆ ನೂಕಿ ಬದುಕನ್ನು ಸಾಗಿಸಲು ಎಷ್ಟು ವಿದ್ಯೆ ಬೇಕೋ ಅಷ್ಟನ್ನಾದರೂ ನಮ್ಮ ಬಾಲಕರಿಗೆ ನೀಡದಿದ್ದರೆ ಮಲೆನಾಡಿನಲ್ಲಿ ಮಲೆಗಳೇ ತಲೆಗಳಾಗುವ ಸಂಭವವುಂಟೆಂದು ನಾನು ಮನಸ್ಸಿಲ್ಲದ ಮನಸ್ಸಿನಿಂದ, ಆದರೂ ಸತ್ಯದೃಷ್ಟಿಯಿಂದ ತಮ್ಮ ಮುಂದೆ ಹೇಳಬೇಕಾಗಿದೆ[೬] ಎನ್ನುತ್ತಾರೆ.

ಈ ಮಾತುಗಳು ಕೇವಲ ಮಲೆನಾಡಿನ ಯುವಕರಿಗೆ ಮಾತ್ರ ಹೇಳುವಂತಹುದಲ್ಲ. ಎಲ್ಲ ಕಾಲದ ಯುವಜನಾಂಗವನ್ನು ಎಚ್ಚರಿಸಬಲ್ಲ ವಿಚಾರವಾಗಿದೆ. ಪ್ರತಿಯೊಬ್ಬ ವ್ಯಕ್ತಿಯ ಜೀವನವೂ ವಿಶಿಷ್ಟವಾದುದಾಗಿದೆ. ಆತ ತನ್ನ ಸಾಮರ್ಥ್ಯದ ಪೂರ್ಣ ಪ್ರಯೋಜನ ಪಡೆಯಲು ನೆರವಾಗುವಂತೆ ಅವನ ಸಾಹಸ ಮನೋಭಾವವನ್ನು ಸರಿಯಾದ ರೀತಿಯಲ್ಲಿ ರೂಪಿಸುವುದೇ ಶಿಕ್ಷಣದ ಮೊದಲ ಕರ್ತವ್ಯವಾಗಬೇಕು. ಅಲ್ಲದೇ ಪ್ರತಿಯೊಬ್ಬರು ತಮ್ಮ

ಪ್ರತಿಭೆಯನ್ನರಿತುಕೊಂಡು, ಸಾರ್ಥಕವಾಗಿ ಬಳಸಿಕೊಳ್ಳುವಂತೆ ಅವಕಾಶ ಕಲ್ಪಿಸುವುದೇ ಶಿಕ್ಷಣದ ಗುರಿಯಾಗಬೇಕು. ಮಾನಸಿಕವಾಗಿ, ಬೌದ್ಧಿಕವಾಗಿ ಪ್ರತಿಯೊಬ್ಬರೂ ಮತ್ತೊಬ್ಬರಿಗಿಂತ ಭಿನ್ನವಾಗಿದ್ದಾರೆ. ಈ ಸಂಗತಿಗಳನ್ನು ಆಧಾರವಾಗಿಟ್ಟುಕೊಂಡು ಶಿಕ್ಷಣ ಕ್ರಮವನ್ನು ರೂಪಿಸಬೇಕಿದೆ. ವಿದ್ಯಾರ್ಥಿಯ ಆತ್ಮಶಕ್ತಿ ಕಲಾಪ್ರಜ್ಞೆ ಹಾಗೂ ಕರ್ಮಕೌಶಲಗಳು ಸಮರಸವಾಗಿ ವಿಕಾಸಗೊಳ್ಳುವಂತಹ ಅವಕಾಶಗಳನ್ನು ಶಿಕ್ಷಣದ ಮುಖೇನ ಸೃಷ್ಟಿಸಬೇಕೆನ್ನುವುದು ಕುವೆಂಪು ಅವರ ನಿಲುವಾಗಿದೆ.

ಕ್ರೈಸ್ತಧರ್ಮ ಮತ್ತು ಇಂಗ್ಲಿಷ್ ಶಿಕ್ಷಣ ಇವೆರೆಡೂ ಮಲೆನಾಡಿನ ಹಳ್ಳಿಗಳಿಗೆ ಕಾಲಿಟ್ಟು ಸಂಚಲನ ಉಂಟುಮಾಡಿದವು. ಉತ್ತರದಲ್ಲಿ ಶಿಕ್ಷಿತಗೊಂಡ ಭಾರತೀಯ ಮುತ್ಸದ್ಧಿಗಳು ಹಿಂದೂ ಧರ್ಮದ ಪುನರುಜ್ಜೀವನಕ್ಕೆ ಶ್ರಮಿಸುತ್ತಿದ್ದರು. ಅದೇ ಕಾಲಘಟ್ಟದಲ್ಲಿ ಹಳ್ಳಿಗಳಲ್ಲಿ ಕ್ರೈಸ್ತ ಪಾದ್ರಿಗಳು ಹಿಂದು ಧರ್ಮದಲ್ಲಿನ ಕಂದಾಚಾರಗಳನ್ನು ಟೀಕಿಸುತ್ತ ಆ ಸ್ಥಾನದಲ್ಲಿ ಕ್ರೈಸ್ತಧರ್ಮದ ಚಿಂತನೆಗಳನ್ನು ಬಿತ್ತುವ ಕೆಲಸ ಮಾಡುತ್ತಿದ್ದರು. ಕೂಲಿ ಮಠಗಳ ಜಾಗದಲ್ಲಿ 'ಸ್ಕೂಲು'ಗಳು ಸ್ಥಾನ ಪಡೆದವು. ಸಾಂಪ್ರದಾಯಿಕ ಶಿಕ್ಷಣ ಕ್ರಮ ಮೂಲೆಗೆ ಸರಿದು ಇಂಗ್ಲಿಷ್ ಶಿಕ್ಷಣ ಪದ್ಧತಿ ಪಸರಿಸತೊಡಗಿತು.

ಮಲೆನಾಡಿಗೆ ಕಾಲಿಟ್ಟ ಪಾದ್ರಿಗಳು ತಮ್ಮೊಂದಿಗೆ ಆಧುನಿಕ ವಿಚಾರಗಳನ್ನು ಹೊತ್ತು ತಂದರು. ಅಷ್ಟೇ ಅಲ್ಲ ಆಧುನಿಕ ಯಂತ್ರಗಳನ್ನು ಪರಿಚಯಿಸಿದರು (ಬೀಸೊ ಕಲ್ಲು ಪ್ರಸಂಗ). ಹೀಗೆ ಬಂದ ಪಾದ್ರಿಗಳು ಎಲ್ಲರೂ ಸಾಕ್ಷರರಾಗಬೇಕು ಎನ್ನುವುದನ್ನು ಪ್ರಚುರ ಪಡಿಸಿದರು. ಅಕ್ಷರ ಕಲಿಸುವ ನಿಟ್ಟಿನಲ್ಲಿ ತಾವೇ ಶಾಲೆಗಳನ್ನು ಕಟ್ಟಿಸಿ, ಪಾಠ ಹೇಳಿಕೊಟ್ಟು ಓದು ಬರಹದಿಂದ 'ಏನು ಪ್ರಯೋಜನ' ಎಂದುಕೊಂಡಿದ್ದ ಮಂದಿಗೆ ಆಧುನಿಕ ವಿದ್ಯಾಭ್ಯಾಸದ ಪರಿಚಯ ಮಾಡಿಸಿದರು. ಈ ಕ್ರಿಯೆ ಮುಂದೆ ಮಲೆನಾಡಿನಲ್ಲಿ ಹಲವು ಬದಲಾವಣೆಗಳನ್ನು ತಂದಿತು. ವ್ಯವಸಾಯವನ್ನೇ ಪ್ರಧಾನವಾದ ಉದ್ಯೋಗ ಮಾಡಿಕೊಂಡಿದ್ದ ಮಲೆನಾಡಿನ ಸ್ಥಿತಿವಂತ ಕುಟುಂಬಗಳು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವುದಕ್ಕೆ ಮುಂದಾದರು. ಮಲೆನಾಡಿನ ತರುಣರು ಶಿವಮೊಗ್ಗ ಮತ್ತು ಮೈಸೂರಿನಂತಹ ಊರುಗಳಿಗೆ ಹೋಗಿ ಉನ್ನತ ವಿದ್ಯಾಭ್ಯಾಸ ಪಡೆಯಲು ಕಾರಣವಾಯಿತು. ಹೀಗೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಚಿತ್ರತಗೊಂಡಿರುವ ಶಾಲೆಗಳ ಆರಂಭ ಬೀಜ ಮುಂದೇ ಮರವಾದ ಬಗೆಯನ್ನು 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಗುರುತಿಸಬಹುದು. ಹೀಗೆ ಮಲೆನಾಡಿನ ಯುವಕರಿಗೆ ದೊರೆತ ಈ ಶಿಕ್ಷಣ ಮುಂದೆ ಆ ಭಾಗದಲ್ಲಿ ಬೀರಿದ ಪ್ರಭಾವವನ್ನು ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಗಮನಿಸಬಹುದಾಗಿದೆ.

**ಕಾನೂರು ಹೆಗ್ಗಡಿತಿ**

'ಕಾನೂರು ಹೆಗ್ಗಡಿತಿ' ಕಾದಂಬರಿಯನ್ನು ಕನ್ನಡ ವಿಮರ್ಶೆ ಹಲವು ಆಯಾಮಗಳಿಂದ ಚರ್ಚಿಸಿದೆ. ಈ ಕೃತಿಯಲ್ಲಿನ ಬಹುತೇಕ ವಿಷಯಗಳನ್ನು ಮತ್ತೆ ಮತ್ತೆ ಚರ್ಚೆ ಮಾಡಬೇಕಾದ

ಹಾಗೂ ಹೊಸ ವಿಮರ್ಶಾ ದೃಷ್ಟಿಕೋನದಿಂದ ಪರಿಶೀಲನೆ ಮಾಡಬೇಕಾದ ಅಗತ್ಯವಿದೆ. ಇದರ ಆರಂಭದ 'ಅರಿಕೆ'ಯಲ್ಲಿ ಕುವೆಂಪು ಅವರು 'ಇಲ್ಲಿ ಚಿತ್ರಿತವಾಗಿರುವುದು ಮಲೆನಾಡಿನ ಬಾಳಿನ ಕಡಲಿನಲ್ಲಿ ಒಂದು ಹನಿ' ಎಂದಿದ್ದಾರೆ. ಆದರೆ, ಓದಲು ತೊಡಗಿದಾಗ ಈ ಹನಿಯೆ ಒಂದು ಕಡಲಾಗಿ ವಿಸ್ತಾರಗೊಳ್ಳುತ್ತದೆ. ಮಲೆನಾಡಿನ ಬದುಕಿನ ವಿವರಗಳಿರುವ ಈ ಕೃತಿಯಲ್ಲಿ ಒಂದು ಸೂಕ್ಷ್ಮಜೀವಿಯಿಂದ ಹಿಡಿದು ಬೃಹತ್ ಚೇತನದವರೆಗೂ ಎಲ್ಲವೂ ಮುಖ್ಯ. ಈ ವಿವರಗಳಲ್ಲಿಯೇ ನಮಗೆ ಕುವೆಂಪು ಅವರ ದಾರ್ಶನಿಕತೆ ಗೋಚರವಾಗುತ್ತದೆ.

ಸುದೀರ್ಘವಾದ ಹಾಗೂ ದಟ್ಟ ವಿವರಗಳಿರುವ ಈ ಕಾದಂಬರಿಯ ಪ್ರಸ್ತುತ ಅಧ್ಯಯನದ ದೃಷ್ಟಿಕೋನ ಹೂವಯ್ಯ ಹಾಗೂ ರಾಮಯ್ಯರ ಶಿಕ್ಷಣದ ಕುರಿತದ್ದಾಗಿದೆ. ಈ ಕಾದಂಬರಿಯಲ್ಲಿ ಸ್ವಾತಂತ್ರ್ಯ ಪೂರ್ವದ ಜೀವನದ ವಿವರ ಇರುವುದರಿಂದ ವಸಾಹತುಶಾಹಿ ಶಿಕ್ಷಣ ಪದ್ಧತಿಯಲ್ಲಿ ಕಲಿತ ಯುವಕರಿಂದ ಆಧುನಿಕತೆಯ ಪರಿಚಯವಿಲ್ಲದಿದ್ದ ಕಾನೂರು ತನಗರಿವಿಲ್ಲದಂತೆ ಬದಲಾವಣೆಗೊಳಪಡುತ್ತಾ ಹೋಗುತ್ತದೆ. ಇವರ ಶಿಕ್ಷಣ ಅಥವಾ ಶಿಕ್ಷಣದ ಪ್ರಭಾವದಿಂದ ಕಾನೂರಿನ ಪ್ರತಿಯೊಬ್ಬರು ಪ್ರಭಾವಕ್ಕೊಳಗಾಗುವುದು ಗಮನಾರ್ಹವಾಗುತ್ತದೆ. ಈ ಹಿನ್ನೆಲೆಯಲ್ಲಿ ಹೂವಯ್ಯ ಹಾಗೂ ರಾಮಯ್ಯರ ವ್ಯಕ್ತಿತ್ವದ ವಿಶ್ಲೇಷಣೆ ಮಾಡಬೇಕಿದೆ.

ಕಾದಂಬರಿಯ ಮೊದಲನೇ ಅಧ್ಯಾಯ ರಾಮತೀರ್ಥದ ಕಲ್ಲುಸಾರದ ಮೇಲೆ. ಈ ಭಾಗದ ಆರಂಭದಲ್ಲಿ ಕುವೆಂಪು ಅವರು 'ಹೂವಯ್ಯ'ನ ಪಾತ್ರವನ್ನು ಸುಧೀರ್ಘವಾಗಿ ವರ್ಣಿಸಿದ್ದಾರೆ. ಹೀಗೆ ವರ್ಣಿಸುತ್ತಾ 'ಒಟ್ಟಿನಲ್ಲಿ ಪೌರುಷ, ಆಧ್ಯಾತ್ಮಿಕತೆ, ಅಂತರ್ಮುಖತೆ, ರಸಿಕತೆ, ಮೇಧಾಶಕ್ತಿ ಇತರರಿಗೆ ಕಷ್ಟವಿಲ್ಲದಿದ್ದರೂ ತನಗೇ ಕಷ್ಟಕರವಾಗಬಹುದಾದ ಹಠಭಾವ ಇವುಗಳಿಂದ ಮೆರೆಯುತ್ತಿದ್ದ ಆತನು ಭವ್ಯವ್ಯಕ್ತಿಯಾಗಿದ್ದನು' ಎಂದು ಪರಿಚಯಿಸಿದ್ದಾರೆ. ಇಡೀ ಕಾದಂಬರಿಯನ್ನು ಆವರಿಸಿರುವ ಹೂವಯ್ಯನ ಬದುಕು, ಓದು, ಚಿಂತನೆ ಇವೆಲ್ಲವುಗಳಿಂದ ಅವನಲ್ಲಿ ಈ ಗುಣಗಳಿರುವುದು ತಿಳಿಯುತ್ತದೆ. ಹೂವಯ್ಯನ ವ್ಯಕ್ತಿತ್ವ ವಿಶೇಷವಾಗಿ ಅವನ ಓದಿನಿಂದ ರೂಪಗೊಂಡಿರುವಂತಹದ್ದು. ಈತನ ಓದು ಸಿಂಗಪ್ಪಗೌಡರು ಹೇಳುತ್ತಿದ್ದ ರಾಮಾಯಣ, ಮಹಾಭಾರತಗಳಾದಿಯಾಗಿ ಸಾಹಿತ್ಯ, ವಿಜ್ಞಾನ, ಮನಃಶಾಸ್ತ್ರ, ತತ್ವಶಾಸ್ತ್ರಗಳೆಲ್ಲದರ ವ್ಯಾಪ್ತಿ ಹೊಂದಿದೆ. ಪ್ರಕೃತಿಯನ್ನು ಅರ್ಥಮಾಡಿಕೊಳ್ಳುವಲ್ಲಿಯು ಹೂವಯ್ಯ ಯಶಸ್ವಿಯಾಗಿದ್ದಾನೆ.

ಮೈಸೂರಿನಿಂದ ಬಂದ ಹೂವಯ್ಯ ಮತ್ತು ರಾಮಯ್ಯರನ್ನು ಕರೆದುಕೊಂಡು ಹೋಗಲು ಬಂದಿದ್ದ ನಿಂಗ ತಾನು ತಲೆಯ ಮೇಲೆ ಹೊತ್ತು ಬರುತಿದ್ದ ಟ್ರಂಕನ ಭಾರಕ್ಕೆ ನಲುಗುತ್ತಾನೆ. ಟ್ರಂಕಿನ 'ಯಮಭಾರ' ಅದರೊಳಗೆ ಏನಿರಬಹುದು ಎನ್ನುವ ಕುತೂಹಲವನ್ನು ಉಂಟುಮಾಡುತ್ತದೆ. ಆಗ ನಿಂಗ ರಾಮಯ್ಯನನ್ನು ಕುರಿತು 'ಟ್ರಂಕಾಗೆ ಏನಿಟ್ಟೀರಿ? ಕಬ್ಬಿಣಾ ನೆನ್ದಂಗೆ ಆಗ್ತದೆ' ಎನ್ನುತ್ತಾನೆ. ರಾಮಯ್ಯ 'ಪುಸ್ತಕ ಕಣೋ'

ಎಂದಾಗ 'ಕಾಗ್ದ ಕೂಡ ಇಷ್ಟು ಭಾರಾನಾ?' ಎಂದು ಅಚ್ಚರಿ ವ್ಯಕ್ತಪಡಿಸುತ್ತಾನೆ. ತನ್ನ ಮಾತುಗಳನ್ನು ಮುಂದುವರೆಸಿ 'ಇದನ್ನೆಲ್ಲಾ ಹ್ಯಾಂಗೋದುತ್ತಿರೋ ಏನೋ? ಒಂದು ಗಳಿಗೆ ಹೊರಾಕಾಗಲ್ಲಾ ನನ್ನಿಂದ' ಎನ್ನುತ್ತಾನೆ.

ಕಾದಂಬರಿಯ ಆರಂಭಕ್ಕೆ ಬರುವ ಈ ಸನ್ನಿವೇಶ ಮಲೆನಾಡಿಗೆ ನಾಗರಿಕತೆ ದಾಪುಗಾಲಿಡುತ್ತಿರುವುದನ್ನು ಸೂಚಿಸುತ್ತದೆ. ಕಗ್ಗಾಡಿನ ಮಲೆಯನಾಡಿಗೆ ಮೈಸೂರಿನಂತಹ ನಗರದಿಂದ ಬಂದ ಹೂವಯ್ಯ ಮತ್ತು ರಾಮಯ್ಯರು ಬರಿಗೈಯಲ್ಲಿ ಬರದೆ, ಜೊತೆಗೆ ಪುಸ್ತಕಗಳನ್ನು ತಂದರು. ವಸಾಹತುಶಾಹಿ ಭಾರತದಲ್ಲಿ ಕ್ರೈಸ್ತ ಪಾದ್ರಿಗಳು ಬೈಬಲನ್ನು ಹಳ್ಳಿಗಳಿಗೆ ತಲುಪಿಸುವ ಕೆಲಸದಲ್ಲಿ ತೊಡಗಿದರು. ಆಧುನಿಕತೆಯ ಪ್ರತೀಕದಂತಿದ್ದ ಪುಸ್ತಕಗಳು ನಿಧಾನವಾಗಿ ಹಳ್ಳಿಗಳ ಪ್ರವೇಶ ಪಡೆದವು. 'ಈ ಕ್ರಿಯೆ' ಮೇಲುನೋಟಕ್ಕೆ ಅತಿ ಸಾಮಾನ್ಯ ಎನಿಸುತ್ತದೆ. ಆದರೆ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಪ್ರೇರಣೆಗಳ ದೃಷ್ಟಿಕೋನದಿಂದ ಅವಲೋಕಿಸಿದರೆ ಪುಸ್ತಕಗಳ ಮೂಲಕ ಇಲ್ಲಿಗೆ ಬಂದ ಜ್ಞಾನದ ಪರಿಣಾಮಗಳು ತಿಳಿಯುತ್ತವೆ.

ಅಕ್ಷರವಿಲ್ಲದ, ನಾಗರಿಕತೆಯ ಯಾವ ಸೋಂಕು ಇಲ್ಲದ ಮಲೆನಾಡಿಗೆ 'ಅಕ್ಷರ'ದ ಆಗಮನವೇ ಹೊಸ ಕ್ರಾಂತಿಯ ಸಂಕೇತ. ಅದು ಆ ಕಾಲದ ಮಲೆನಾಡಿಗೆ ಅಕ್ಷರದಿಂದ ಒದಗಬಹುದಾದ ಜ್ಞಾನದ ಸೂಚ್ಯವಾಗಿಯೂ ಕಾಣಿಸುತ್ತದೆ. ಕಾನೂರಿನ ಆಳು ನಿಂಗನಿಗೆ ಪುಸ್ತಕಗಳ ಟ್ರಂಕು ಯಮಭಾರವೆನಿಸುತ್ತದೆ. ಇದು ಕಾದಂಬರಿಯಲ್ಲಿ ಸಾಮಾನ್ಯ ಕ್ರಿಯೆಯಂತೆ ಗೋಚರಿಸುತ್ತದೆ. ಆದರೆ ಈ ಭಾಗದಲ್ಲಿನ ನಿಂಗ ಮತ್ತು ರಾಮಯ್ಯರ ಮಾತುಗಳನ್ನು ಧ್ಯಾನಿಸಿದರೆ ನಿಂಗನ ಮಾತುಗಳು ಅಕ್ಷರವಂಚಿತ ಸಮುದಾಯಗಳಿಗೆ ಅಕ್ಷರ ದೊರಕುವ ಸನ್ನಿವೇಶಗಳು ಎದುರುಗೊಂಡರೆ ಅದಕ್ಕೆ ತೋರಬಹುದಾದ ಪ್ರತಿಕ್ರಿಯೆಯಂತೆ ನಿರೂಪಿತವಾಗಿವೆ. ಆ ಮಾತುಗಳಿಂದ ಹೊರಡಬಹುದಾದ ಅರ್ಥ ಕಾದಂಬರಿಯ ಕಥನದ ನಿರ್ವಚನೆಯಂತೆ ಮೂಡಿ ಬಂದಿದೆ. ಕಥನದ ಆರಂಭಕ್ಕೆ ಮಲೆನಾಡಿಗೆ ನಾಗರಿಕತೆ ಪ್ರವೇಶವನ್ನು ಈ ಮೂಲಕ ಸೂಚಿಸಿದ್ದಾರೆ. ರಾಮಯ್ಯ ಮತ್ತು ಹೂವಯ್ಯ ಈ ನಾಗರಿಕತೆಯ ಪ್ರತೀಕದಂತೆ ಗೋಚರಿಸುತ್ತಾರೆ. ಹೂವಯ್ಯ ಮತ್ತು ರಾಮಯ್ಯರನ್ನು ಹಾಗೂ ಅವರ ವ್ಯಕ್ತಿತ್ವವನ್ನು ನಿರೂಪಿಸಿರುವ ಕಾದಂಬರಿಕಾರರು ವಿಶೇಷಣಗಳನ್ನು ಬಳಸಿ ಅವರ ವ್ಯಕ್ತಿತ್ವ ಕಟ್ಟಿಕೊಟ್ಟಿದ್ದಾರೆ. ಓದಲು ಮೈಸೂರಿಗೆ ಹೋಗಿದ್ದ ಹೂವಯ್ಯ ಮತ್ತು ರಾಮಯ್ಯ ಕಾನೂರಿನ ಹೂವಯ್ಯ ಮತ್ತು ರಾಮಯ್ಯರಾಗಿ ಉಳಿದಿರಲಿಲ್ಲ. ನಗರ, ಅಲ್ಲಿನ ನಾಜೂಕುತನ, ಕಾಲೇಜಿನ ಕಲಿಕೆ ಈಗ ಅವರನ್ನು ಬದಲು ಮಾಡಿತ್ತು.

ಆಧುನಿಕ ವಿದ್ಯಾಭ್ಯಾಸ ಪಡೆದವನಾದ ಹೂವಯ್ಯ ತಾನು ಹುಟ್ಟಿ ಬೆಳೆದ ಕಾನೂರನ್ನು ಪರಂಪರಾಗತವಾಗಿ ರೂಢಿಸಿಕೊಂಡು ಬಂದ ಕಂದಾಚಾರಗಳಿಂದ

ಬಿಡುಗಡೆಗೊಳಿಸುವ ನಿಟ್ಟಿನಲ್ಲಿ ಪ್ರಯತ್ನ ನಡೆಸುತ್ತಾನೆ. ಕಾದಂಬರಿಯಲ್ಲಿ ಈ ಬಗೆಯ ಘರ್ಷಣೆ ನಿರಂತರವಾದುದು. ಶಿಕ್ಷಿತನಾದರೂ ರಾಮಯ್ಯ ಕಾನೂರಿನ ಮನೆಯ ಸಂಪ್ರದಾಯದ ಚೌಕಟ್ಟನ್ನು ಮೀರಲಾರದೆ, ತನ್ನನ್ನು ತಾನು ಅರ್ಥಮಾಡಿಕೊಳ್ಳದೆ ಸೋಲುತ್ತಾನೆ. ಈ ಬಗೆಯ ವೈರುಧ್ಯಗಳು ಕಾದಂಬರಿಯನ್ನು ಪೋಷಣೆ ಮಾಡಿವೆ. ಈ ಕಾದಂಬರಿಯಲ್ಲಿ ಹೂವಯ್ಯ ಮತ್ತು ರಾಮಯ್ಯ ಇಬ್ಬರೂ ವಿದ್ಯೆ ಪಡೆದವರೆ ಆದರೆ ಹೂವಯ್ಯನ ಪಾತ್ರ ಆಧುನಿಕ ವಿದ್ಯಾವಂತನ ಪ್ರಾತಿನಿಧಿಕ ಪಾತ್ರವಾಗಿ ನಿರೂಪಿತಗೊಂಡಿದೆ. ಶಿಕ್ಷಣದ ಕಾರಣಕ್ಕಾಗಿ ಹೂವಯ್ಯ ಪಡೆದುಕೊಂಡಿದ್ದ ಹೊಸ ತಿಳಿವು ಹಾಗೂ ಅವನಲ್ಲಿದ್ದ ಪರಕೀಯತೆಗಳು ಇದುವರೆವಿಗೂ ಅಖಂಡವಾಗಿಯೇ ಉಳಿದುಕೊಂಡು ಬಂದಿದ್ದ ಕಾನೂರಿನ ಬದುಕಿನ ಕ್ರಮಕ್ಕೆ ಚಲನಶೀಲತೆಯನ್ನು ತಂದುಕೊಡುತ್ತವುದಲ್ಲದೇ ಪ್ರತಿರೋಧವನ್ನು ಒಡ್ಡುತ್ತವೆ.

ಹೂವಯ್ಯನ ಪಾತ್ರವು ಉಳಿದ ಪಾತ್ರಗಳಿಗಿಂತ ಭಿನ್ನವಾಗಿ ಚಿತ್ರಿತಗೊಂಡಿದೆ. ತನ್ನ ಸುತ್ತಲ ಇತರ ಪಾತ್ರಗಳಿಗೆ ಇಲ್ಲದ ಹಲವು ಸಾಧ್ಯತೆಗಳು ಹೂವಯ್ಯನ ಪಾತ್ರದಲ್ಲಿ ಪ್ರಕಟಗೊಳ್ಳುತ್ತವೆ. ಆತನ ಆಧ್ಯಾತ್ಮಿಕ ಮನೋಭಾವ ಕಾನೂರಿಗೆ ಹೊಸದು. ಅವನ ಸುಧಾರಣಾವಾದಿ ಚಿಂತನೆಗಳು ಕಾದಂಬರಿಯುದ್ದಕ್ಕೂ ಹಲವು ಸಂದರ್ಭಗಳಲ್ಲಿ ಪ್ರಕಟಗೊಂಡಿವೆ. ಹೂವಯ್ಯನ ಆಸೆ ಕನಸುಗಳೇನು? ಎನ್ನುವ ಪ್ರಶ್ನೆಯನ್ನು ಕೇಳಿಕೊಂಡರೆ ಭೌತಿಕವಾದ ಸಂಪತ್ತಿನ ಬಗೆಗಿನ ಮೋಹಕ್ಕಿಂತ ಬೌದ್ಧಿಕವಾದ ಜ್ಞಾನದ ಅರ್ಹತೆಯೇ ಅವನಿಗೆ ಬಹುಮುಖ್ಯ ಎನಿಸುತ್ತದೆ.

ಈ ಹಿನ್ನೆಲೆಯಲ್ಲಿ ಓದು ಎಂದರೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಓದು ಎಂದರೆ ಅರಿವು ಎಂಬುದು ಹೂವಯ್ಯನ ಪಾತ್ರ ಚಿತ್ರಣದಿಂದ ಮನದಟ್ಟಾಗುತ್ತದೆ. ಈ ಅರಿವಿನಿಂದಲೇ ಹೂವಯ್ಯ ತನ್ನ ಬದುಕನ್ನು ಮತ್ತು ಸುತ್ತಲಿನ ಪರಿಸರವನ್ನು ಭವ್ಯವಾಗಿರಿಸಲು ಪ್ರಯತ್ನಿಸುತ್ತಾನೆ. ಅದನ್ನು ಈ ಮುಂದಿನ ಕೆಲವು ಪ್ರಸಂಗಗಳ ಮೂಲಕ ಅರ್ಥೈಸಬಹುದು.

**ಹೂವಯ್ಯ**

'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿನ ಎಲ್ಲ ಪಾತ್ರಗಳು ಮುಖ್ಯವಾದವು. ಏಕೆಂದರೆ ಇದು ಮಲೆನಾಡಿನ ಕಥೆ. ಇಲ್ಲಿನ ಪ್ರಪಂಚ ವಿಸ್ತಾರವಾದುದು. ಹುಳು–ಉಪ್ಪಟೆಯೂ ಈ ಪ್ರಪಂಚದ ಸದಸ್ಯ. ಜಡವೂ ಇಲ್ಲಿ ಚೈತನ್ಯ. ಪ್ರಾದೇಶಿಕವಾಗಿ ಮಲೆನಾಡಿನ ಬಾಳಿನ ಕಥೆಯಾದರೂ, ಕಥಾವ್ಯಾಪ್ತಿ ವಿಸ್ತಾರವಾದುದು. ಮೈಸೂರಿನಲ್ಲಿ ಓದುತ್ತಿದ್ದ ಹೂವಯ್ಯ, ರಾಮಯ್ಯರು ರಜೆಗೆಂದು ಕಾನೂರಿನ ಮನೆಗೆ ಮರಳಿದಾಗ ಆ ಮನೆಯ ವರ್ಣನೆ ಹೀಗೆ ಬಂದಿದೆ–

> ಹಳೆಯ ಕಾಲದ ಭೀಮವಾಗಿದ್ದ ಮಂಗಳೂರು ಹೆಂಚಿನ ಮನೆ ಸಹಜ ಸ್ಥಿತಿ ಕಳೆದುಕೊಂಡು ನಿರ್ವರ್ಣವಾಗಿದ್ದವು. ಒಡೆದು ಹಾಳಾಗಿದ್ದ ಹಳೆಯ

ಹೆಂಚುಗಳ ನಡುವೆ ಹೊಸ ಹೆಂಚುಗಳು ಸೇರಿ ಸರ್ವೆ ಸಾಮಾನ್ಯವಾದ ಪ್ರಾಚೀನತೆಯ ನಡುವೆ ಅಪೂರ್ವವೂ ವಿರಳವೂ ಆಗಿರುವ ನವೀನತೆ ತಲೆಹಾಕಿತ್ತು. ಆ ಮನೆಯಲ್ಲಿ ಪ್ರಾಚೀನ ನವೀನಗಳ ಸ್ನೇಹವೋ ಸಮರವೋ ನಡೆಯತೊಡಗಿದ್ದಂತೆ ತೋರುತ್ತಿತ್ತು[2]

ಈ ವರ್ಣನೆ ಮಲೆನಾಡಿನಲ್ಲಿ ಪ್ರಾಚೀನತಮವಾಗಿಯೆ ಉಳಿದಿದ್ದ, ಆಧುನಿಕತೆಯ ಸೋಂಕು ತಟ್ಟದಂತಿದ್ದ ಕಾನೂರಿಗೆ ನವೀನ ಶಿಕ್ಷಣ ಪಡೆದಿದ್ದ ಹೂವಯ್ಯನ ಪ್ರವೇಶದ ವರ್ಣನೆಯಂತೆ ಇದೆ.

ಕಲಿತು ಬಂದ ಹೂವಯ್ಯ ಕಾನೂರಿನಲ್ಲಿಯೆ ನೆಲೆಸಿದ್ದು, ಹಾಗೆಯೇ ಕಾನೂರು ಮತ್ತು ಸುತ್ತಮುತ್ತಲ ಪರಿಸರದಲ್ಲಿ ಹೂವಯ್ಯನ ದೆಸೆಯಿಂದ 'ಪ್ರಾಚೀನ ನವೀನಗಳ ಸ್ನೇಹವೋ, ಸಮರಸವೋ ಏರ್ಪಡುತ್ತಿತ್ತು' ಎಂಬುದು ಅರಿವಾಗುತ್ತದೆ. ಸಾಹಿತ್ಯ, ವಿಜ್ಞಾನ, ತತ್ವಶಾಸ್ತ್ರ, ಮನಃಶಾಸ್ತ್ರ ಇತ್ಯಾದಿಗಳ ಅಧ್ಯಯನ ಮಾಡಿದ್ದ ಹೂವಯ್ಯ ಕಾನೂರಿನಲ್ಲಿಯೇ ನೆಲೆಸಿದ. ಚಂದ್ರಯ್ಯಗೌಡರಿಂದ ಇನ್ನು ಮುಂದೆ ತನ್ನ ಓದು ನಿಲ್ಲಿಸಬೇಕಾಯಿತಾದರೂ ಆತಂಕಗೊಳ್ಳದೆ ಮನೆಯಲ್ಲಿ ಗ್ರಂಥಗಳನ್ನೋದಬಹುದೆಂಬ ಆಶಾಭಾವ ತಾಳಿದ.

ಕಾನೂರಿನ ಮನೆ ಬಿಟ್ಟು ತಾಯಿ ನಾಗಮ್ಮಳೊಡನೆ ಕೆಳಕಾನೂರಿನಲ್ಲಿ ನೆಲೆಸಿದಾಗ ತಾನು ವಾಸವಿರಬೇಕಾದ ಮನೆಯನ್ನು 'ಕುಟೀರ' (ಆಶ್ರಮ)ದಂತೆ ಮಾರ್ಪಡಿಸಿಕೊಳ್ಳುವಲ್ಲಿ ಹೂವಯ್ಯನ ವ್ಯಕ್ತಿತ್ವವನ್ನು ಗುರುತಿಸಬಹುದು. ಶಿಕ್ಷಿತನಾದ ಹೂವಯ್ಯನಿಂದ ಕಾದಂಬರಿಯ ಇತರ ಪಾತ್ರಗಳು ಭಿನ್ನ ಭಿನ್ನ ಪ್ರಭಾವಕ್ಕೊಳಗಾಗಿವೆ. ಇದರೊಡನೆ ಶೂದ್ರರನ್ನು ಕಂಡು ಮಡಿಮಾಡಿಕೊಳ್ಳುತ್ತಿದ್ದ ವೆಂಕಟಪ್ಪ ಜೋಯಿಸರು, ರಾಮಾಯಣ ಕಥೆಗಳನ್ನು ಹೇಳುತ್ತಿದ್ದ ಸಿಂಗಪ್ಪಗೌಡರೂ ಈತನ ವ್ಯಕ್ತಿತ್ವಕ್ಕೆ ಮಾರು ಹೋಗಿ ಈತನ ಬಗ್ಗೆ ಗೌರವಭಾವ ತಾಳಿದ್ದರು.

ಹೂವಯ್ಯನ ತಾಯಿಯಾದ ಕಾರಣಕ್ಕೆ 'ನಾಗಮ್ಮ'ನಿಗೆ ವಿಶೇಷ ಮಾನ್ಯತೆ ದೊರಕಿತ್ತು. ನಿತ್ಯವು ಜಗಳವಾಡುತ್ತಿದ್ದ ಸುಬ್ಬಮ್ಮ ಈ ಕಾರಣದಿಂದ 'ನಾಗಮ್ಮ'ಳೊಡನೆ ಮರ್ಯಾದೆಯಿಂದ ನಡೆದುಕೊಳ್ಳುವುದು ಇದಕ್ಕೊಂದು ಉದಾಹರಣೆ. ಮಹಾನ್ ಸಾಧಕರ ಚರಿತ್ರೆಗಳನ್ನು ಓದಿದ್ದ ಹೂವಯ್ಯ ತಾನು ಏನಾದರೂ ಸಾಧನೆ ಮಾಡಬೇಕೆಂದುಕೊಳ್ಳುತ್ತಾನೆ. ಆದರೆ, ಪರಿಸ್ಥಿತಿಯ ಒತ್ತಡಗಳಿಂದ ಏನೂ ಮಾಡಲಾಗುವುದಿಲ್ಲವೇನೋ ಎಂದು ಮತ್ತೆ ಮತ್ತೆ ಗೊತ್ತಾಗಿ, ಇಡೀ ವಿಶ್ವದಲ್ಲಿ ತನ್ನ ಸ್ಥಾನ 'ಕ್ಷುದ್ರ'ವಾದುದೆಂದು ಭಾವಿಸುತ್ತಾನೆ. ಆದರೆ ಆ ಕ್ಷುದ್ರತೆಯಲ್ಲಿಯೆ ಏನಾದರು ಮಾಡಬೇಕೆಂದು ಹಂಬಲಿಸುತ್ತಾನೆ. ಕೊನೆಗೆ ಸಂಸಾರದ ಜಂಜಾಟಗಳನ್ನು ತ್ಯಜಿಸಿ ಕಾನೂರಿನಲ್ಲಿ ನೆಲೆಸಿ ಸುತ್ತಲಿನ ಜನರ ನಡುವೆ ವಿಶೇಷ ಮಾನ್ಯತೆ ಗಳಿಸುತ್ತಾನೆ. ಬುದ್ಧನ ಚಿಂತನೆಗಳನ್ನು ಪ್ರತಿಷ್ಠಾಪಿಸಿ ಕಾನೂರಿನಲ್ಲಿ ಹೊಸ ಆಯಾಮ ಸೃಷ್ಟಿಯಾಗುವಂತೆ ಮಾಡುತ್ತಾನೆ.

ಈ ನಡುವಿನ ಹಾದಿ ಹೂವಯ್ಯನಿಗೆ 'ಹೂವಿನ ಹಾಸಿಗೆ'ಯಾಗಿರದೆ, ಸಂಕಷ್ಟಗಳ ಸರಮಾಲೆಯೇ ಆಗುತ್ತದೆ. ಸಂಕಟಗಳನ್ನು ದೃಢವಾಗಿ ಎದುರಿಸುವಲ್ಲಿ ಆತನ ತಿಳಿವು ಸಹಾಯವಾಗುತ್ತದೆ. ತನ್ನ ಸುತ್ತಲಿನ ಪ್ರಕೃತಿಯಲ್ಲಿ ಆರಾಧ್ಯಭಾವ ತಾಳುತ್ತಾನೆ. 'ಭಾವ' ಸಮಾಧಿ ಸ್ಥಿತಿಯಿಂದ ಎಲ್ಲವನ್ನು ಸಮನಾಗಿ ಕಾಣಲು ಆತ ಸಿದ್ಧಗೊಳ್ಳುತ್ತಾನೆ.

ಮಲೆನಾಡಿನ ಹಳ್ಳಿಯ ಎಲ್ಲ ಲಕ್ಷಣಗಳನ್ನೊಳಗೊಂಡಿದ್ದ ಕಾನೂರಿನಲ್ಲಿ ಹೂವಯ್ಯನಿಗೆ ಸಂತಸದ ವಿಷಯವಾಗಿದ್ದುದು ತನ್ನ ತಾಯಿಯ ಸಾನಿಧ್ಯ ಹಾಗೂ ಸುತ್ತಲಿನ ಪ್ರಕೃತಿ. ಸದಾ ಜಗಳ, ಮನಸ್ತಾಪ, ಮಾತ್ಸರ್ಯ, ಕರುಬುತನಗಳಿಂದಲೇ ಇರುತ್ತಿದ್ದ ತನ್ನ ಸುತ್ತಲಿನವರಲ್ಲಿ ಹೂವಯ್ಯ ಬೇರೇನನ್ನೂ ನಿರೀಕ್ಷೆ ಮಾಡದವನಾದ. ಇಂಥ ಕಾನೂರಿನಲ್ಲಿ ಸಂಭ್ರಮದಿಂದ 'ದಯ್ಯದ ಹರಕೆ' ಆಚರಿಸಲು ಎಲ್ಲರೂ ಅಣಿಯಾದಾಗ ಭೂತಕ್ಕಾಗಿ ಮೀಸಲಿದ್ದ ಹೋತವನ್ನು 'ರಕ್ಷಿಸಿ' ಅದಕ್ಕೆ ಬಲೀಂದ್ರನೆಂದು ಹೆಸರಿಸಿದನು. ಈ ಪ್ರಸಂಗದಿಂದ ಹೂವಯ್ಯ ಸಾಮಾನ್ಯರ ಕಣ್ಣಲ್ಲಿ ವಿಚಿತ್ರವಾಗಿ ಕಂಡನು.

ಈ ಸಂದರ್ಭದಲ್ಲಿ ಭಗವದ್ಗೀತೆ ಓದುತ್ತಿದ್ದ ಹೂವಯ್ಯ 'ಹೇ ಭಗವಾನ್' ಈ ಜನರ ಮನಸ್ಸನ್ನು ನಿನ್ನ ಕಡೆಗೆ ತಿರುಗಿಸಲು ನನಗೆ ಶಕ್ತಿಯನ್ನು ಕೃಪೆ ಮಾಡು' ಎಂದು ಮನದಲ್ಲಿಯೇ ಪ್ರಾರ್ಥಿಸಿಕೊಳ್ಳುತ್ತಾನೆ. ಕಳವು ಮಾಡಿದ್ದ ಗಂಗನನ್ನು ಸಾಂತ್ವನಗೊಳಿಸಿ ಅವನಿಗೆ ಬಾಳೆಹಣ್ಣು ಹಂಚಿದ್ದು, ತಪ್ಪೇ ಮಾಡದಿದ್ದ ಭೈರವನ ಜೊತೆಗೆ ಸಭ್ಯವಾಗಿ ನಡೆದುಕೊಂಡು ಮನಗೆ ಹೋಗಿ ಭತ್ತ ಕೊಟ್ಟಿದ್ದ ಸಂದರ್ಭಗಳೆಲ್ಲೆಲ್ಲಾ ಹೂವಯ್ಯ ಮಾನವೀಯವಾಗಿ ನಡೆದುಕೊಳ್ಳುತ್ತಾನೆ.

ಕಾನೂರಿನೊಳಗೆ ಬದುಕಲಾರಂಭಿಸಿ, ತನ್ನ ಸುತ್ತೆಲ್ಲ ತಂತ್ರಗಳು ನಡೆದು, ತನ್ನ ಸಂಕಟವನ್ನು ಯಾರೊಡನೆಯೂ ಹಂಚಿಕೊಳ್ಳಲಾಗದಿದ್ದಾಗ ಪುಸ್ತಕಗಳಿಂದಲೇ ಸಮಾಧಾನ ಪಡೆಯುತ್ತಾನೆ. ಆ ಓದಿನಿಂದಲೇ ತಾನಿರುವ ಸ್ಥಿತಿಯ ಬಗ್ಗೆ ಜಾಗರೂಕನಾಗುತ್ತಾನೆ.

> ಹೂವಯ್ಯನಿಗೆ ಲಜ್ಜೆ, ಶೋಕ, ಜಿಗುಪ್ಸೆ, ಮುನಿಸು, ಆಸೆ ಎಲ್ಲವೂ ಉಂಟಾದವು. ತನ್ನ ಮಹಾತ್ವಾಕಾಂಕ್ಷೆಯ ಜೀವನಾದರ್ಶ ಎಂತಹ ಕೆಸರಿನಲ್ಲಿ ಕಾಲಿಟ್ಟು ಹೂತುಕೊಂಡಿದೆ! ಹೊರಗಡೆಯ ಜಗತ್ತು ಎಂತಹ ಮಹತ್ಕಾರ್ಯಗಳಲ್ಲಿ ತೊಡಗಿರುತ್ತಾರೆ, ಕ್ಷುದ್ರಸಾರದ ಕೋಟಲೆಯಲ್ಲಿ ಸಿಕ್ಕಿ ತನ್ನಾತ್ಮವು ಮಹಾಜಗತ್ತಿನ ಆಮಂತ್ರಣವನ್ನು ತಿರಸ್ಕರಿಸುತ್ತಿದೆ! ಎಂಬುದು ಅವನ ಅಳಲಾಗಿತ್ತು.[೮]

ಈ ಮನಃಸ್ಥಿತಿಯಲ್ಲಿರುವಾಗಲೇ ಒಮ್ಮೆ ಹೂವಯ್ಯ ಕಾಡುದಾರಿಯಲ್ಲಿ ಪರವೂರಿಗೆ ನಡೆದು ಹೋಗುವಾಗ, ಕಗ್ಗಾಡಾದ ಕಾನೂರಿನ ಹಾದಿಯಲ್ಲಿ ಬೈಸಿಕಲ್ಲೊಂದನ್ನು ಬಿಡಲು

ಹೋಗಿ ಯುವಕನೊಬ್ಬ ಜಾರಿಬಿದ್ದ ಘಟನೆ ನಡೆಯಿತು. ಈ ಘಟನೆಯಿಂದ ಹೂವಯ್ಯನ ಮನಸ್ಸು ಮತ್ತಷ್ಟು ಆಲೋಚನಾ ಪರವಾಯಿತು.

> ಯಂತ್ರ ನಾಗರಿಕತೆಗೆ, ಇಂಗ್ಲಿಷು, ಚಾಂಚಲ್ಯ, ಉದ್ಯೋಗಾವೇಶ! ತಾನು ಎಂದೋ ಹಿಂದಿಕ್ಕಿ ಬಂದ ಆ ಪ್ರತಿಗಾಮಿಯಾದ ಪ್ರಪಂಚ ಮತ್ತೆ ಬಹುದೂರದ ಮಲೆನಾಡಿನ ಕೊಂಪೆಯಲ್ಲಿ ತನಗೆ ಕ್ಷಣದರ್ಶನ ಕೊಟ್ಟಂತಾಯ್ತು. ನಿಲ್ಲದೆ ಮುಂಬರಿಯುತ್ತಿರುವ ದಿನದಿನವೂ ಬದಲಾಯಿಸುತ್ತಿರುವ ಹೊರಗಣ ವಿಶಾಲ ಜಗತ್ತಿಗೆ ಪ್ರತಿಮೆಗಳಾದರು ಆ ಬೈಸಿಕಲ್ ಮತ್ತು ಅದರ ಸವಾರ. ಹೂವಯ್ಯನ ಮನಸ್ಸು ಗವಾಕ್ಷದಿಂದೆಂಬಂತೆ ಕಾನೂರು ಮುತ್ತಳ್ಳಿಗಳ ಸಂಕುಚಿತ ಬದುಕಿನಿಂದ ಹೊರಲೋಕದ ಬಿತ್ತರಕ್ಕೆ ಹಾರಿತು. ಪಟ್ಟಣದ ಸಂದಣಿಯಲ್ಲಿ ಗಮನಕ್ಕೆ ಬಾರದ ಬೈಸಿಕಲ್ಲು ಕಾಡುಬೀಡಿನಲ್ಲಿ ವಿಶೇಷಾತಿಥಿಯಾಗಿ ತೋರಿತು[೮]

ಹೊರಪ್ರಪಂಚ ವೇಗವಾಗಿ ಬದಲಾಗುತ್ತಿದ್ದರು ಹೂವಯ್ಯ ಹೊರಗಿನದನ್ನು ಬಿಟ್ಟು ಸ್ಥಳೀಯತೆಯನ್ನು ಅಪ್ಪಿಕೊಂಡಿದ್ದ. ಈ ಸ್ಥಳೀಯವಾದುದನ್ನು ಆಧುನಿಕ ದೃಷ್ಟಿಕೋನದಿಂದ ಮಾರ್ಪಡಿಸಬೇಕೆಂದುಕೊಂಡಿದ್ದ. ಇದು ವಸಾಹತುಶಾಹಿ ಶಿಕ್ಷಣ ಪಡೆದಿದ್ದ ಹೂವಯ್ಯ, ವಸಾಹತುಶಾಹಿಯುಂಟು ಮಾಡುತ್ತಿದ್ದ ಆಘಾತಗಳನ್ನು ಎದುರಿಸಲು ಸಶಕ್ತ ಮಾದರಿಯಂತೆ ನಮಗೆ ತೋರುತ್ತದೆ. ಈ ಹಿನ್ನೆಲೆಯಲ್ಲಿ ಆ ಬೈಸಿಕಲ್ ಸವಾರ ಹೂವಯ್ಯನಿಗೆ ಆಕ್ರಮಣಶೀಲವಾದ ಆಧುನಿಕತೆ ಮಲೆನಾಡಿಗೆ ಕಾಲಿಡುವ ಸೂಚ್ಯವಾಗಿ ಕಾಣುತ್ತಾನೆ. ಹೀಗಾಗಿ ಹೂವಯ್ಯ ತನ್ನ ಬದುಕಿನಲ್ಲಾಗುವ ಆಘಾತಕಾರಿ ಏರುಪೇರುಗಳನ್ನೆಲ್ಲಾ ಸಹಿಸಿಕೊಳ್ಳುತ್ತಾನೆ. ದುರಂತಗಳನ್ನೆಲ್ಲ ಸ್ಥಿತಪ್ರಜ್ಞನಂತೆ ಕಾಣುತ್ತಾನೆ.

ಇದೇ ಹೂವಯ್ಯ ಕಾನೂರಿನಲ್ಲಿ ನೆಲೆಸಿದ ಹತ್ತು ವರ್ಷಗಳ ಅನಂತರ ಅಲ್ಲಿಗೆ ಆಧುನಿಕತೆ ಕಾಲಿರಿಸುತ್ತದೆ. ಇದು 'ಕಾಲ ಮಹಿಮೆ' ಆಗಿದ್ದರು ಕಾನೂರು ಹಾಗೂ ಸುತ್ತಲಿನ ಮುತ್ತಳ್ಳಿ, ಸೀತೆಮನೆ ಮುಂತಾದ ಹಳ್ಳಿಗಳಲ್ಲಿ ಹೂವಯ್ಯ ಹಾಗೂ ಸೀತೆಯರ ಪ್ರಭಾವ ದಟ್ಟವಾಗಿ ಹರಡಿದ್ದು, ಕೆಲಸ ಮಾಡಿತ್ತು. ಅಲ್ಲಿ ಕಳ್ಳಂಗಡಿ ಬದಲು ಆಸ್ಪತ್ರೆ, ಸ್ಕೂಲು, ಪೋಸ್ಟಾಫೀಸುಗಳು, ಅಂಗಡಿಗಳು ಆರಂಭವಾಗಿದ್ದವು. ಹೂವಯ್ಯನ ಕಾರಣದಿಂದ ಕೆಲಸಗಾರರ ಜೀವನ ಸಭ್ಯವಾಗಿತ್ತು. ತಪಸ್ವಿನಿಯಂತಿದ್ದ ಸೀತೆ ಹಾಗೂ ಗುರು ಸಮಾನನಾಗಿದ್ದ ಹೂವಯ್ಯರಿಂದ ಇವರ ಮುಂದಿನ ತಲೆಮಾರಾದ ವಾಸು ಹಾಗೂ ಲಕ್ಷ್ಮಿಯ ಜೀವನ ಸೊಗಸಾಗಿದ್ದುದು ಸೂಚ್ಯವಾಗಿ ಕಾಣತೊಡಗಿತು.

ಒಟ್ಟಿನಲ್ಲಿ ಕಾನೂರು ಮತ್ತು ಹೂವಯ್ಯರ ಚಿತ್ರಣ ಒಂದು ರೀತಿಯಲ್ಲಿ ಆಧುನಿಕ ಭಾರತದ ಚಿತ್ರಣದಂತೆಯೇ ಇದೆ. ಶತಮಾನಗಳಿಂದಲೂ ಆಧುನಿಕತೆಯ ಅರಿವಿಲ್ಲದೆ ಸಾಮ್ರಾಜ್ಯಶಾಹಿಯ ಹಿಡಿತದಲ್ಲಿ ಇದ್ದ ಭಾರತಕ್ಕೆ ಇಂಗ್ಲಿಷ್ ಶಿಕ್ಷಣದಿಂದ ಇಡೀ ಭಾರತೀಯರು

ನಿಧಾನವಾಗಿ ಸುಧಾರಿತಗೊಂಡು ತಮಗೇನುಬೇಕೆಂಬುದನ್ನು ಅರಿಯತೊಡಗುತ್ತಾರೆ. ಆ ವಿವೇಕಕ್ಕೆ ಇಂಗ್ಲಿಷ್ ಶಿಕ್ಷಣ ಕಾರಣವಾಗುತ್ತದೆ. ಈ ಶಿಕ್ಷಣದ ಪ್ರತಿಕೂಲಗಳು ಭಾರತದಾದ್ಯಂತ ಹರಡಿವೆ. ಅದಕ್ಕೆ ಉದಾಹರಣೆಯಾಗಿ 'ರಾಮಯ್ಯ' ನ ಪಾತ್ರವಿದೆ. ಇನ್ನು ಹೂವಯ್ಯನು, ಭಾರತವನ್ನು ಪ್ರಾಚ್ಯ ಆಚರಣೆಗಳಿಂದ ಬಿಡಿಸಿ ಮುಕ್ತಗೊಳಿಸುವತ್ತ ಸಾಗಿದ ರಾಜಾರಾಮ್ ಮೋಹನರಾಯ್‌ರಂತಹ ಸುಧಾರಕರಂತೆಯೇ ಕಾಣುತ್ತಾನೆ.

ಅಂದರೆ ಓದು ಎಂದರೇನು, ಓದಿನ ಪ್ರಯೋಜನಗಳೇನು ಎಂಬ ಪ್ರಶ್ನೆಗಳಿಗೆ 'ಕಾನೂರು ಹೆಗ್ಗಡಿತಿ' ಕಾದಂಬರಿಯ ಹೂವಯ್ಯ ಉತ್ತರವಾಗಿ ದೊರಕುತ್ತಾನೆ. ಈ ನಿಟ್ಟಿನಲ್ಲಿ ಓದು ಎಂದರೆ ಅರಿವು ಹಾಗೂ ಓದಿನ ಪ್ರಯೋಜನವೆಂದರೆ ಮನುಷ್ಯನಲ್ಲಿನ ಸಣ್ಣತನಗಳನ್ನು ಹೋಗಲಾಡಿಸಿ, ಅವನ ವ್ಯಕ್ತಿತ್ವವನ್ನು ಸಂಸ್ಕಾರಗೊಳಿಸುವುದು ಎಂಬುದು ಮನದಟ್ಟಾಗುತ್ತದೆ.

ಮೈಸೂರಿನಲ್ಲಿ ಶಿಕ್ಷಣ ಪಡೆದು ತನ್ನ ಊರಿಗೆ ಹಿಂದಿರುಗುವ ಹೂವಯ್ಯ ಪಡೆದುಕೊಂಡ ಸಂಸ್ಕಾರ ಅವನನ್ನು ಉದಾತ್ತನನ್ನಾಗಿಸಿದೆ, ತನಗೆ ಎದುರಾಗುವ ಹಲವು ಸಂಕಷ್ಟದ ಸಂದರ್ಭದಲ್ಲಿ ಆತ ಸಂಯಮದಿಂದ ವರ್ತಿಸಲು ನೆರವಾಗಿದೆ. ತಾನು ಕಂಡದ್ದನ್ನು, ಕಲಿತದ್ದನ್ನು ತನ್ನವರಿಗೂ ಹಂಚುವ ಪ್ರಯತ್ನ ಮಾಡುತ್ತಾನೆ. ಮತ್ತೊಂದು ಪಾತ್ರವಾದ ರಾಮಯ್ಯನು ಕಲಿತವನಾದರೂ ವೈಯಕ್ತಿಕ ಆಸೆಗಾಗಿ ಮರಳಿ ತನ್ನ ಸಂಪ್ರದಾಯಿಕ ನಂಬಿಕೆಗಳತ್ತಲೇ ನಡೆಯುತ್ತಾನೆ. ಹೂವಯ್ಯ ತಾನು ಪ್ರೀತಿಸಿದ ಸೀತೆ ತನಗೆ ಸಿಕ್ಕುವುದಿಲ್ಲ ಎನ್ನುವುದನ್ನು ತಿಳಿದಾಗಲೂ ಅನೀತಿಯಿಂದ ನಡೆದುಕೊಳ್ಳುವುದಿಲ್ಲ. ತನ್ನ ಕುಟುಂಬದ ಹಲವು ಮೂಢನಂಬಿಕೆಗಳನ್ನು ತೊಡೆದಾಕುವ ಪ್ರಯತ್ನ ಮಾಡುತ್ತಾನೆ.

> ಮಲೆನಾಡಿನಲ್ಲಿ ಹುಟ್ಟಿ ಬೆಳೆದ ಹೂವಯ್ಯ ಉನ್ನತ ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ತೆರಳುತ್ತಾನೆ. ಹೊಸ ಹೊಸ ವಿಚಾರಗಳನ್ನು ತೆಗೆದುಕೊಳ್ಳುತ್ತಾನೆ. ಅವನ ಭಾವ ಜಗತ್ತೂ, ಬೌದ್ಧಿಕ ಜಗತ್ತೂ ವಿಸ್ತೃತಗೊಳ್ಳುತ್ತದೆ. ಹೊಸ ಮನುಷ್ಯನೇ ಆಗುತ್ತಾನೆ. ಆದರೆ ಅವನು ಮೈಸೂರಿನಲ್ಲಿಯೇ ಉಳಿದು ಬಿಡುವುದಿಲ್ಲ. ತನ್ನ ಹಳ್ಳಿಗೆ ವಾಪಸ್ಸಾಗುತ್ತಾನೆ. ಹೊಸ ಪ್ರಜ್ಞೆಯೊಂದಿಗೆ ತನ್ನ ಪರಿಸರಕ್ಕೆ ಮರಳುವ ಹೂವಯ್ಯ ಯಾವತ್ತು ಸಾಂಪ್ರದಾಯಿಕ ಬದುಕನ್ನು ಮತ್ತೆ ಬಾಳಲಾರ. ಹಾಗೆಂದು ಆ ಪರಿಸರಕ್ಕೆ ಹೊರತಾದ ತೀರಾ ಆಧುನಿಕವಾದ ಜೀವನ ಕ್ರಮವೊಂದನ್ನು ಬಯಸಲಾರ. ಇವೆರಡಕ್ಕಿಂತಲೂ ಭಿನ್ನವಾದ ತೃತೀಯ ಪರ್ಯಾಯವೊಂದನ್ನು ರೂಪಿಸಿಕೊಳ್ಳುವ, ಆ ಮೂಲಕ ಆ ಪರಿಸರಕ್ಕೆ ಕೊಂಚ ಪರಕೀಯನಾದರೂ ತನ್ನ ಸುತ್ತಲ ಬದುಕನ್ನು ಪ್ರಭಾವಿಸುವ ಪ್ರಕ್ರಿಯೆಯನ್ನು ಕುವೆಂಪು ಅವರ ಕೃತಿ ಶೋಧಿಸುತ್ತದೆ.[೧೦]

ಎಂದು ಅಭಿಪ್ರಾಯಪಡುವ ಟಿ ಪಿ ಅಶೋಕ ಅವರು ಹೊಸ ಶಿಕ್ಷಣ ಕ್ರಮ ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಉಂಟುಮಾಡಿರುವ ಪರಿಣಾಮಗಳನ್ನು ವಿವರಿಸುತ್ತಾರೆ.

> ಹೊರಗಿನ ಸಂಪರ್ಕವು ತೀರಾ ಕಡಿಮೆ ಇರುವ ಮಲೆನಾಡಿನ ಕೊಂಪೆಯಲ್ಲಿ ಹುಟ್ಟಿದ ಹೂವಯ್ಯನಿಗೆ ಅಪರೂಪದ ಅವಕಾಶವು ಸಿಕ್ಕು, ಮೈಸೂರಿನ ತನಕವೂ ಹೋಗಿ ಆಧುನಿಕ ವಿದ್ಯಾಭ್ಯಾಸವನ್ನು ಪಡೆದ. ಅಲ್ಲಿ, ಆ ಹೊಸ ವಿದ್ಯಾಭ್ಯಾಸದ ಮೂಲಕ ಪಾಶ್ಚಿಮಾತ್ಯ ವಿಚಾರ ನಾಗರಿಕತೆಗೆ ತೆರೆದುಕೊಂಡ ಅವುಗಳಿಂದ ಪ್ರಭಾವಿತನಾದ.[೧೧]

ಎನ್ನುವ ಕೆ ವಿ ಸುಬ್ಬಣ್ಣನವರ ಮಾತುಗಳು ಹೂವಯ್ಯನ ಮೇಲಾದ ಇಂಗ್ಲಿಷ್ ಶಿಕ್ಷಣದ ಪ್ರಭಾವವನ್ನು ಗುರುತಿಸುತ್ತವೆ. ಕುವೆಂಪು ಸಾಹಿತ್ಯ ಭಾರತೀಯ ವರ್ಣ ವ್ಯವಸ್ಥೆಯ ತಾರತಮ್ಯ ಮತ್ತು ಇಲ್ಲಿನ ಪುರೋಹಿತಶಾಹಿಯನ್ನು ಖಂಡಿಸಿರುವುದನ್ನು ಈಗಾಗಲೇ ಕನ್ನಡ ವಿಮರ್ಶೆ ಗುರುತಿಸಿದೆ. ಕುವೆಂಪು ಅವರು ಬರವಣಿಗೆಗೆ ತೊಡಗುವ ಕಾಲಕ್ಕಾಗಲೇ ಭಾರತೀಯರ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದ್ದ ಬ್ರಿಟಿಷ್ ವಸಾಹತುಶಾಹಿಯನ್ನು ವಿರೋಧಿಸಿದ್ದಾರೆ. ಅವರ ಬರಹದಲ್ಲಿ ಈ ಬಗೆಯ ಅನ್ಯ ಭಾಷಾ ಪ್ರಭುತ್ವವನ್ನು ವಿರೋಧಿಸಿದ್ದಾರೆ.

ವಸಾಹತುಶಾಹಿ ನೀತಿಯು ಭಾರತದ ಬ್ರಿಟಿಷ್ ಆಡಳಿತಕ್ಕೆ ಹಾಗೂ ಇಲ್ಲಿನ ಪ್ರಾಂತ್ಯಗಳ ಆಳರಸರ ನಿಯಂತ್ರಣಕ್ಕೆ ಮಾತ್ರ ಸೀಮಿತಗೊಂಡಿರಲಿಲ್ಲ. ಅದು ಭಾರತೀಯರ ಬದುಕಿನ ಎಲ್ಲ ಸಂಗತಿಗಳಲ್ಲೂ ಪ್ರಭಾವಿಸಿತು. ಇಲ್ಲಿನ ಧಾರ್ಮಿಕ ನಂಬಿಕೆಗಳನ್ನು ಪಲ್ಲಟಿಸುವ ಕ್ರಿಯೆಯಲ್ಲಿ ತೊಡಗಿತು. ಹಿಂದೂ ಧರ್ಮದ ಕಂದಾಚಾರ ಮತ್ತು ಮೂಢನಂಬಿಕೆಗಳನ್ನು ಎತ್ತಿ ತೋರಿಸುವ ಕೆಲಸ ಮಾಡಿತು. ನಾಟಿ ಔಷಧಗಳ ಜಾಗವನ್ನು 'ಮೆಡಿಸನ್' ಆಕ್ರಮಿಸಿತು. ಹೀಗೆ ವಸಾಹತುಶಾಹಿ ಚಿಂತನೆಯು ಸ್ಥಳೀಯರ ಬದುಕಿನ ಮೇಲೆ ತನ್ನ ಒತ್ತಾಸೆಗಳನ್ನು ಹೇರಲಾರಂಭಿಸಿತು. ಹೀಗೆ ಪರಕೀಯ ಚಿಂತನಾ ಕ್ರಮಕ್ಕೆ ಹಾಗೂ ಅದರ ಪ್ರಭಾವಕ್ಕೆ ಒಳಗಾದ ದೇಶಿಯರು ಪರಂಪರಾಗತವಾಗಿ ಬಂದ 'ತಮ್ಮತನವನ್ನು' ಕಳೆದುಕೊಳ್ಳುವ ಭೀತಿಯಿಂದ ಮತ್ತು 'ಹೊಸತನ್ನು' ಸ್ವೀಕರಿಸಲೇಬೇಕಾದ ಸಂದಿಗ್ಧತೆಗಳನ್ನು ಎದುರಿಸುವಂತಾಯಿತು. ಈ ಬಗೆಯ ಹೊಸ ಚಿಂತನಾ ಕ್ರಮದಲ್ಲಿ 'ಇಂಗ್ಲಿಷ್ ಶಿಕ್ಷಣ'ವೂ ಒಂದು.

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕೂಲಿಮಠಗಳ ಜಾಗದಲ್ಲಿ 'ಸ್ಕೂಲು' ಬಂದು ನೆಲೆಗೊಂಡಿದ್ದನ್ನು ಈಗಾಗಲೇ ಗಮನಿಸಲಾಗಿದೆ. ಇದೊಂದು ಕ್ರಾಂತಿಕಾರಕ ಬದಲಾವಣೆ. ಇಂತಹ ಬದಲಾವಣೆಗೆ ಭಾರತೀಯ ಮಟ್ಟದಲ್ಲಿ ರಾಜ ರಾಮ ಮೋಹನರಾಯ್‌ರಂತಹ ಮುತ್ಸದ್ಧಿಗಳು ಒತ್ತಾಯ ಹೇರಿದ್ದನ್ನು ಈಗಾಗಲೇ

ಚರ್ಚಿಸಲಾಗಿದೆ. ಕ್ರೈಸ್ತ ಪಾದ್ರಿಗಳಿಂದ ಆರಂಭಗೊಂಡ 'ಸ್ಕೂಲು'ಗಳು ಮಲೆನಾಡಿನ ಬದುಕಿಗೆ ಹೊರ ಪ್ರಪಂಚಕ್ಕೆ ತೆರೆದುಕೊಂಡ ಹೊಸ ದಾರಿಯಾಗಿ ಪರಿಣಮಿಸಿತು. ಹೀಗೆ ಮತಾಂತರದ ಉದ್ದೇಶವನ್ನು ಮುಂದುಮಾಡಿಕೊಂಡು ಈ ಶಾಲೆಗಳು ಮಲೆನಾಡಿನಲ್ಲಿ ಆರಂಭವಾಗುತ್ತವೆ. ಅದಕ್ಕೂ ಮಿಗಿಲಾಗಿ ಈ ಭಾಗದ ಮಕ್ಕಳಿಗೆ ಶಿಕ್ಷಣ ದೊರೆತು ಅವರು ನವ ನಾಗರಿಕರಾಗಲು ಈ ಸ್ಕೂಲುಗಳು ನೆರವಾಗುತ್ತವೆ.

ಪಾದ್ರಿಗಳು ಕಟ್ಟಿಸಿದ ಸ್ಕೂಲುಗಳು ಮುಂದೆ ಹೂವಯ್ಯ ಮತ್ತು ರಾಮಯ್ಯರಂತಹ ಮಲೆನಾಡಿನ ಯುವಕರು ಉನ್ನತ ಶಿಕ್ಷಣ ಪಡೆದುಕೊಳ್ಳಲು ಕಾರಣವಾದ ಬಗೆಯನ್ನು ನಾವು ಅರಿಯಬಹುದಾಗಿದೆ. ಈ ಸಂಗತಿಗಳ ಮೂಲಕ ಹೊಸತನಕ್ಕೆ ತೆರೆದುಕೊಳ್ಳುತ್ತಿದ್ದ ಮಲೆನಾಡಿಗೆ ಜೀವರತ್ನಯ್ಯ 'ಬೈಸಿಕಲ್ಲಿನಂತ' ಯಂತ್ರವನ್ನು ಪರಿಚಯಿಸುತ್ತಾನೆ. ಕಾಲಾನಂತರದಲ್ಲಿ ಮಲೆನಾಡಿನವನೇ ಆದ ಹೂವಯ್ಯ ಆಧುನಿಕತೆಯ ಪ್ರತೀಕದಂತೆ ಮತ್ತೆ ತನ್ನ ಪರಿಸರಕ್ಕೆ ಮರಳುವುದು ಹಾಗೂ ಅಲ್ಲಿನ ಹಲವರನ್ನು ಪ್ರಭಾವಿಸುವುದನ್ನು ಕಾಣಬಹುದು. ಕಾನೂರನ್ನು ಪ್ರವೇಶಿಸುತ್ತಿರುವ ಹೊಸ ವಿಚಾರಗಳನ್ನು ಕಾದಂಬರಿಯ ಪಾತ್ರಗಳಲ್ಲಿ ಒಂದಾದ ಹೂವಯ್ಯ ಕುತೂಹಲದಿಂದ ಗ್ರಹಿಸುತ್ತಾನೆ. ಕಾನೂರಿನ ಸಂಕಟಗಳೊಂದಿಗೆ ಭಾರತೀಯ ಸ್ವರಾಜ್ಯ ಸಂಪಾದನೆಯ ಪ್ರಯತ್ನದ ಸಂಕಟಗಳು, ರಾಷ್ಟ್ರನಾಯಕರ ಆಂದೋಲನಕಾರರ ಉಪನ್ಯಾಸಗಳು, ಬ್ರಿಟಿಷರ ದಬ್ಬಾಳಿಕೆಯ ನಡತೆಗಳು, ದಕ್ಷಿಣಾ ಆಫ್ರಿಕಾದಲ್ಲಿ ಭಾರತೀಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರಗಳು, ಮುಖಂಡರ ದಸ್ತಗಿರಿಗಳು ಇವೆಲ್ಲವೂ ಹೂವಯ್ಯನ ಅಂತರಂಗವನ್ನು ಕಲಕುತ್ತವೆ.

ನಗರದಲ್ಲಿ ವಿದ್ಯೆಯನ್ನು ಪಡೆದು ತನ್ನ ಹಳ್ಳಿಗೆ ಮರಳುವ ಹೂವಯ್ಯ ತನ್ನ ಸುತ್ತಲಿನ ಪರಿಸರವನ್ನು ಸುಧಾರಿಸುವ ಪ್ರಯತ್ನದಲ್ಲಿ ತೊಡಗುತ್ತಾನೆ. ಜೀವರತ್ನಯ್ಯನು ತರಬಯಸುವ ಬದಲಾವಣೆಗೂ ಹೂವಯ್ಯ ಆಶಿಸುವ ಸುಧಾರಣೆಗೂ ವ್ಯತ್ಯಾಸವಿದೆ. ಪಾದ್ರಿ ಜೀವರತ್ನಯ್ಯ ಸಾಧ್ಯವಾದಷ್ಟು ಜನರನ್ನು ಹಿಂದೂ ಧರ್ಮದಿಂದ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸಬೇಕೆಂದು ಬಯಸುತ್ತಾನೆ. ಈ ಚಿಂತನೆಯ ಹಿಂದೆ ತನ್ನ ಸ್ಥಾನದಲ್ಲಿ ಉನ್ನತ ಹುದ್ದೆಗೇರಬಹುದಾದ ಸ್ವಾರ್ಥಪರ ಚಿಂತನೆಯೂ ಸೇರಿಕೊಂಡಿದೆ.

ಹೂವಯ್ಯನ ಸಂದರ್ಭ ಬೇರೆ ತೆರನಾದುದು. ಮಲೆನಾಡಿನಿಂದ ಹೊರ ಹೋಗಿ ಅಕ್ಷರ ಕಲಿತುಕೊಂಡು ಅದರಿಂದ ದೊರೆಯಬಹುದಾದ ಸಂಸ್ಕಾರವನ್ನು ರೂಢಿಸಿಕೊಂಡು ಮತ್ತೆ ಮಲೆನಾಡಿಗೆ ಮರಳುವ ಹೂವಯ್ಯನು ತನ್ನಂತೆ ತನ್ನ ಸುತ್ತಲಿನವರು ಉನ್ನತವಾದ ಚಿಂತನೆಗಳನ್ನು ಬೆಳೆಸಿಕೊಳ್ಳಬೇಕೆಂದು ಬಯಸುತ್ತಾನೆ. ಕಾದಂಬರಿಯ ಕಥನವು 'ಕಾನೂರಿನ ಮನೆಯ ಕಥೆಯಾದರೂ' ಶೀರ್ಷಿಕೆ 'ಕಾನೂರು ಹೆಗ್ಗಡಿತಿ' ಎಂದಿದ್ದರೂ ಹಲವು ಬಾರಿ ಹೂವಯ್ಯ ಕಾದಂಬರಿಯ ಕೇಂದ್ರ ಎನಿಸುತ್ತಾನೆ.

ಹೂವಯ್ಯನ ವ್ಯಕ್ತಿತ್ವ ಕಾದಂಬರಿಯಲ್ಲಿ ಉನ್ನತವಾಗಿ ಚಿತ್ರಿತಗೊಂಡಿದೆ. ಮಲೆನಾಡಿನಿಂದ ಹೋದವನಾದರೂ ಮರಳಿ ಬಂದಾಗ ಗಂಭೀರವಾದ ವ್ಯಕ್ತಿಯಂತೆ

ಕಾಣಿಸುತ್ತಾನೆ. ಕಾನೂರಿನ ಚಂದ್ರೇಗೌಡರಿಗೆ ಒಳಗೊಳಗೆ ಅಸಹನೆಯಿದ್ದರೂ ಹೂವಯ್ಯನ ಬಗ್ಗೆ ಮೆಚ್ಚುಗೆಯೂ ಇರುತ್ತದೆ. ಇನ್ನುಳಿದಂತೆ ಕಾನೂರಿನ ಎಲ್ಲರಿಗೂ ಹೂವಯ್ಯನ ವ್ಯಕ್ತಿತ್ವ ಆಪ್ಯಾಯಮಾನ ಎನಿಸುತ್ತದೆ. ಈ ಬಗೆಯ ವ್ಯಕ್ತಿತ್ವ ಅವನ ಓದಿನ ದೆಸೆಯಿಂದ ಅವನಿಗೆ ಪ್ರಾಪ್ತವಾದ ಬಗೆಯನ್ನು ಕಾದಂಬರಿಯ ಹಲವು ಸಂದರ್ಭಗಳಿಂದ ಅರ್ಥಮಾಡಿಕೊಳ್ಳಬಹುದಾಗಿದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ 'ಓದು ಬರಹ ಯಾಕೆ ಬೇಕು' ಎಂದು ಕೇಳುವ ಪ್ರಶ್ನೆಗೆ ಹೂವಯ್ಯ ಉತ್ತರದ ರೂಪವಾಗಿದ್ದಾನೆ.

ಓದಿನಿಂದಲೇ ಹೂವಯ್ಯನ ಒಟ್ಟು ವ್ಯಕ್ತಿತ್ವ ರೂಪುಗೊಂಡದ್ದು ಎಂದು ಹೇಳುವಾಗಲೇ ರಾಮಯ್ಯನ ಪಾತ್ರ ಎದುರಾಗುತ್ತದೆ. ಕಾದಂಬರಿಯಲ್ಲಿ ದುರಂತ ನಾಯಕನೆನಿಸುವ ರಾಮಯ್ಯ ಶಿಕ್ಷಣದಿಂದ ಸತ್ವ ಪಡೆಯಲಾರದ ವೈಫಲ್ಯಕ್ಕೆ ಉದಾಹರಣೆಯಾಗಿದ್ದಾನೆ. ಸುಬ್ಬಮ್ಮ ಹೂವಯ್ಯನ ವ್ಯಕ್ತಿತ್ವಕ್ಕೆ ಮಾರು ಹೋದವಳು. ಒಂದು ವೇಳೆ ಮನೆ ಹಿಸ್ಸೆಯಾಗದೆ, ಹೂವಯ್ಯ ಕೆಳಕಾನೂರಿಗೆ ಹೋಗದಿದ್ದರೆ ಕಾನೂರಿನ ಮನೆಯ ದುರಂತಗಳು ನಡೆಯುತ್ತಿರಲಿಲ್ಲವೇನೊ ಎಂದುಕೊಳ್ಳಬಹುದಾಗಿದೆ. ತನಗೆ ಎದುರಾಗುವ ಸಂಕಷ್ಟಗಳಿಗೆ ಹೂವಯ್ಯ ತನಗೆ ತಾನೇ ಪರಿಹಾರ ತಂದುಕೊಂಡು ಸಮಾಧಾನ ಕಂಡುಕೊಳ್ಳುತ್ತಾನೆ.

**ಹೂವಯ್ಯ ಮತ್ತು ರಾಮಯ್ಯ**

ರಾಮಯ್ಯನು ಹೂವಯ್ಯನ ಸಹೋದರ. ಇಬ್ಬರೂ ಮೈಸೂರಿನಲ್ಲಿ ಶಿಕ್ಷಣ ಪಡೆದವರು. ರಾಮಯ್ಯನ ತಂದೆ ಚಂದ್ರೇಗೌಡರ (ಹೂವಯ್ಯನ ಚಿಕ್ಕಪ್ಪ) ಅಣತಿ ಮೇರೆಗೆ ಕಾನೂರಿಗೆ ರಜೆಗೆಂದು ಮರಳಿದ ಇವರಿಬ್ಬರು ಪರಿಸ್ಥಿತಿಯ ಒತ್ತಡದಿಂದ ಕಾನೂರಿನಲ್ಲಿಯೇ ಉಳಿದುಕೊಳ್ಳುತ್ತಾರೆ. ರಾಮಯ್ಯ ತನಗಿಂತ ಹಿರಿಯನಾದ ಹೂವಯ್ಯನಷ್ಟು ದೃಢ ವ್ಯಕ್ತಿತ್ವದವನಾಗಿರಲಿಲ್ಲ. ಆರಂಭದ ಅಧ್ಯಾಯದಲ್ಲಿಯೇ ಕಾದಂಬರಿಕಾರರು ರಾಮಯ್ಯನ ಪಾತ್ರ ಪರಿಚಯಿಸುವಲ್ಲಿ ಅವನಲ್ಲಿರುವ ಅಸ್ಥಿರ ವ್ಯಕ್ತಿತ್ವವನ್ನು ತಿಳಿಸಿದ್ದಾರೆ.

ಇಂಥ ರಾಮಯ್ಯ ತನ್ನ ವ್ಯಕ್ತಿತ್ವವನ್ನು ಮರೆಯುವಷ್ಟು ಹೂವಯ್ಯನ ಪ್ರಭಾವಕ್ಕೆ ಒಳಗಾಗಿದ್ದಾನೆ. ಏಕೆಂದರೆ ರಾಮ್ಯಯನಿಗೆ ದಕ್ಕದಿರುವ ಓದು, ತಿಳಿವಳಿಕೆ ಹೂವಯ್ಯನದಾದ್ದರಿಂದ ಅಣ್ಣನ ನಿರ್ಧಾರಗಳೇ ಸರಿ ಎನಿಸುತ್ತಿದ್ದ ರಾಮಯ್ಯನಿಗೆ 'ಸೀತೆ'ಯನ್ನು ಮದುವೆಯಾಗುವ ವಿಷಯದಲ್ಲಿ 'ಆಲೋಚನಾ ಶಕ್ತಿ'ಯೆ ಇಲ್ಲದಂತಾಗಿ ವಿವೇಕರಹಿತವಾಗಿ ನಡೆದುಕೊಳ್ಳುತ್ತಾನೆ. ಸರಿಯಾದ ನಿರ್ಣಯಗಳಿಗೆ ಬಾರದೆ, ಸೂಕ್ಷ್ಮವಾಗಿ ವಿವೇಚಿಸಿದೆ ತನ್ನ ತಂದೆ, ಸೀತೆ ಎಲ್ಲರನ್ನು ಕಳೆದುಕೊಳ್ಳುತ್ತ ಕೊನೆಗೆ ತನ್ನನು ತಾನೇ ಕೊಂದುಕೊಳ್ಳುತ್ತಾನೆ. ಪರಿಸ್ಥಿತಿಯನ್ನು ಎದುರಿಸಲಾರದೆ ಈತ ತೆಗೆದುಕೊಂಡ ನಿರ್ಧಾರ 'ಹೇಡಿತನ'ವಾಗಿ ಕಾಣಿಸುತ್ತದೆ. ಆದರೆ ಇದಕ್ಕೆ ಕಾರಣವನ್ನು ಹುಡುಕಿದರೆ, ಆತನ ಅರೆ-ಬರೆಯ ಓದು ಅಥವಾ ಓದಿನ ಮೂಲಕ ಬರಬೇಕಿದ್ದ ಜಾಗೃತಿಯ ಕೊರತೆ ಆತನ ದುರಂತಕ್ಕೆ ಕಾರಣವೆನಿಸುತ್ತದೆ. ರಾಮಯ್ಯನ ಈ ಪಾತ್ರದ ಮೂಲಕ ಓದಿನ ಅಥವಾ ವಸಾಹತುಶಾಹಿ ಶಿಕ್ಷಣದ ವಿಫಲತೆಯನ್ನು ನಾವು ಕಾಣಬಹುದು. ವಸಾಹತು ಶಿಕ್ಷಣದ ಫಲವೆ ಆದ ಹೂವಯ್ಯ ಮತ್ತು ರಾಮಯ್ಯರನ್ನು

ಮುಖಾಮುಖಿಯಾಗಿಸಿದಾಗ ಒಂದೇ ನಾಣ್ಯದ ಎರಡು ಮುಖಗಳಂತೆ ಶಿಕ್ಷಣದ ಫಲ ಮತ್ತೆ ವಿಫಲತೆಗಳ ಪ್ರತಿಫಲನ ಗೋಚರವಾಗುತ್ತದೆ. ಈ ಮೂಲಕ ಕಾದಂಬರಿಯಲ್ಲಿ ಸಮಕಾಲೀನವಾದ ಬದುಕಿಗೂ, ಓದಿಗೂ ಮೂಡಿರುವ ಕಂದಕದ ಬಗೆಗಿನ ವಿಚಾರ ಗುಪ್ತಗಾಮಿನಿಯಾಗಿ ಹರಿದಿದೆ.

**ಹೂವಯ್ಯ ಮತ್ತು ಸೀತೆ**

ಹೂವಯ್ಯ ಮತ್ತು ಸೀತೆಯರ ನಡುವಿನ ಗೆಳೆತನ ಬಾಲ್ಯಕಾಲದ್ದು. ಸೀತೆಗೆ ಇತರ ಮಕ್ಕಳ ಬಳಗಕ್ಕಿಂತ 'ಹೂವಯ್ಯ'ನ ಜೊತೆಗೆ ಹೆಚ್ಚಿನ ಒಲವಿತ್ತು. ಯೌವನದಲ್ಲಿ ಎಂದೋ ಗೋಡೆ ಮೇಲೆ ಬರೆದಿದ್ದ 'ಹೂವಯ್ಯ ಬಾವನನ್ನೆ ಮದುವೆಯಾಗ್ತೆನೆ' ಎಂಬ ಮಾತು ಹೂವಯ್ಯನಲ್ಲಿಯು ಹೊಸ ಭಾವ ಮೂಡಲು ಕಾರಣವಾಗುತ್ತದೆ. ಬಾಲ್ಯ ಸಹಜವಾಗಿ ಆಡಿಕೊಂಡು ಸದಾ ಜೊತೆಯಾಗಿರುತ್ತಿದ್ದ ಹೂವಯ್ಯ ಸೀತೆಯರ ಸಂಬಂಧ ಪ್ರಾಯಕ್ಕೆ ಬಂದಾಗ ಹೊಸ ಸ್ವರೂಪ ಪಡೆದುಕೊಳ್ಳಲಾರಂಭಿಸುತ್ತದೆ. ಅದು ಒಲವಿನ ಸೆಲೆಯಲ್ಲಿ ಪರಸ್ಪರ ಒಂದಾಗುವ ಬಯಕೆಯಾಗುತ್ತದೆ.

ಹೂವಯ್ಯನ ವ್ಯಕ್ತಿತ್ವಕ್ಕೆ ಸೀತೆ ಮಾರುಹೋಗಿದ್ದಳು. ಹೂವಯ್ಯನ ನಾಗರಿಕ ನಡವಳಿಕೆ ಸೀತೆಗೆ ಆತನ ಮೇಲಿನ ಪ್ರೀತಿಯೊಟ್ಟಿಗೆ ಅಪಾರವಾದ ಗೌರವ ಭಾವ ಮೂಡುವಂತೆ ಮಾಡಿತ್ತು. ಓದು, ಬರಹ ಕಲಿತಿದ್ದ ಸೀತೆಗೆ ಹೂವಯ್ಯನ ಓದು ಅದ್ಭುತದಂತೆಯೇ ಭಾಸವಾಗಿತ್ತು. ಹೂವಯ್ಯನು ಸೀತೆಗೆ ಪುಸ್ತಕ, ಆಧ್ಯಾತ್ಮ, ಪ್ರಾರ್ಥನೆ, ಸೃಷ್ಟಿ ಮೊದಲಾದ ವಿಷಯಗಳ ಬಗ್ಗೆ ತಿಳಿಸುತ್ತಿದ್ದನು. ಆಕೆಗೆ ಹಲವು ಆದರ್ಶಮಯವಾದ ಪುರಾಣ ಕಥೆಗಳನ್ನು ಹೇಳಿದ್ದನು. ಹೀಗೆ ಹೇಳುವಾಗ ಹೂವಯ್ಯ 'ನಾನು ಹೇಳಿಕೊಡುತ್ತೇನೆ, ಆ ಮೇಲೆ ನಿನ್ನ ದೃಷ್ಟಿ ಬದಲಾಯಿಸುತ್ತದೆ. ನಿನ್ನ ಆತ್ಮವೇ ಬೇರೆಯಾಗುತ್ತದೆ. ಜಗತ್ತೆಲ್ಲ ಆನಂದಮಯವಾಗುತ್ತದೆ. ದುಃಖವೂ ಕೂಡ ಮಧುರವಾಗುತ್ತದೆ'. ಎಂದು ವಿವರಿಸುತ್ತಿದ್ದನು. ಇಂಥ ವಿಚಾರಗಳನ್ನು ಕೇಳುತ್ತಾ ಕೇಳುತ್ತಾ ಸಹಾನುಭೂತಿಯಿಂದ ಆಕೆಯ ಭಾವವೂ, ಕಲ್ಪನೆಯೂ ಉತ್ಕರ್ಷವಾಗತೊಡಗಿದವು. ಬುದ್ಧಿಯಿಂದ ತಿಳಿಯಲಾರದ್ದು ಭಾವಕ್ಕೆ ಗೋಚರವಾಗಿ ಆಕೆಯ ಹೃದಯದಲ್ಲಿ ಯಾವುದೋ ಒಂದು ಮಹಾ ಪರಿವರ್ತನೆಗೆ ಕಾರಣವಾಯಿತು. ಒಳ್ಳೆಯ ಮಾತು, ಆಲೋಚನೆ, ನಡತೆ, ಪ್ರಾರ್ಥನೆಗಳಿಂದ ನಮ್ಮ ಆತ್ಮ ಪೋಷಣೆಗೊಳ್ಳುತ್ತದೆ ಎಂದು ಹೂವಯ್ಯ ಹೇಳುವಾಗ ಸೀತೆಯು 'ಸೂಕ್ಷ್ಮಮನಸ್ಸಿನ ಕುಮಾರಿಯಾಗಿ' ಹೂವಯ್ಯನಿಗೆ ಸಮಾನ ಮನಸ್ಕಳಾಗುವ ಹಂಬಲ ತೋರಿದಳು. ಹೀಗಾಗಿ ಹೂವಯ್ಯನ ಸಂಪರ್ಕಗಳಲ್ಲಿ ಸಿಲುಕಿದ ಅನಂತರ ಸೀತೆ ಮೊದಲಿನ ಹಳಹಳಿಕೆಯ ಹುಡುಗಿಯಾಗದೆ ಸುಸಂಸ್ಕೃತಳಾಗಿದ್ದಳು. ಹೂವಯ್ಯನ ಸಾನಿಧ್ಯದಿಂದ 'ಆಕೆಯಲ್ಲಿದ್ದ ಗ್ರಾಮ್ಯ ಜೀವನಕ್ಕೆ ಸಹಜವಾಗಿದ್ದ ಕೆಲವು ಸ್ಥೂಲಾಂಶಗಳು ಸೂಕ್ಷ್ಮವೂ ಶುಭ್ರವೂ ಆಗಿದ್ದವು. ಆಕೆಯ ಮನೋರಂಗದಲ್ಲಿ ಉತ್ತಮ ಆಲೋಚನೆಗಳು ಮೊಳೆತು ಉತ್ತಮತರವಾದ ಭಾವಗಳು ಮೂಡಿ ಹೊಸ ಮಳೆಯ ನೀರು ಬಂದ ಹೊಳೆಯ ತೆರೆಗಳಂತೆ ಜಾಗೃತವಾಗಿದ್ದವು.

ಅಂದರೆ ಹೂವಯ್ಯ ಆಕೆಗೆ ವಿನೂತನವಾದ ವಿಷಯಗಳನ್ನು ತಿಳಿಸಿದ್ದನು. ಹೊಸ ಭಾವಗಳನ್ನು ನೀಡಿದ್ದನು. ಮುಗ್ಧೆಯಾದ ಸೀತೆಗೆ ಹೂವಯ್ಯನ ಮಾತು, ಸಾಂತ್ವನ, ಧೈರ್ಯ 'ನೀನೂ ಉನ್ನತ ಚೇತನವಾಗಬಲ್ಲೆ' ಎಂದು ನೀಡಿದ ಭರವಸೆ ಇವೆಲ್ಲವುಗಳಿಂದ ಅವಳಿಗೆ ಅರಿವಾಗದಂತೆ ಅವಳ ಮಾನಸಿಕ ಸ್ಥಿತಿಯಲ್ಲಿ ಮಹತ್ತರ ಬದಲಾವಣೆಗಳಾದವು. ಇದರ ಪರಿಣಾಮದಿಂದ ಸೀತೆ ಮೊದಲಿನ ಮುಗ್ಧ ಹೆಣ್ಣಾಗಿರದೆ ತನ್ನ ತಂದೆ ತಾಯಿ ನೋಡಿದ ಯಾವ ಗಂಡನ್ನಾದರು ಎದುರಿಸುತ್ತಿದ್ದಳು. ಅಂದರೆ ಹೂವಯ್ಯನ ಸಹವಾಸದಿಂದ ತನಗೇನು ಬೇಕು ಎಂಬುದನ್ನು ಕುರಿತು ಆಲೋಚಿಸಬಲ್ಲವಳಾಗಿದ್ದಳು.

ರಾಮಯ್ಯನೊಂದಿಗೆ ತನ್ನ ಮದುವೆ ನಿಶ್ಚಿತವಾದಾಗ ಅದರಿಂದ ತಪ್ಪಿಸಿಕೊಳ್ಳುವ ಪ್ರಯತ್ನವನ್ನು ಮಾಡಿದಳು. ಹೂವಯ್ಯನಲ್ಲಿ ರಕ್ಷಣೆ ಕೋರಿದಳು. ಹೂವಯ್ಯನಿಂದ ಪಡೆದ ಸಂಸ್ಕಾರದಿಂದ ತನ್ನ ಭವಿಷ್ಯ ನಿರ್ಧರಿಸುವ ತಿಳಿವಳಿಕೆ ಸೀತೆಗೆ ಮೂಡಿತ್ತು. ಅದು ಹೂವಯ್ಯನಿಗೆ ಅಡ್ಡಲಾಗಿತ್ತು. ಅಂದರೆ ಸಣ್ಣತನದ ಹಾದಿಯಲ್ಲಿ ತಪ್ಪುಗಳನ್ನೆಸಗಿ ಸೀತೆಯನ್ನು ಪಡೆಯುವ ಕೆಲಸಕ್ಕೆ ಹೂವಯ್ಯ ಮುಂದಾಗುವುದಿಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕು. ಆದರೆ ಹೂವಯ್ಯನಲ್ಲಿ ಸೀತೆ ತನಗೆ ಬೇಕೇ ಬೇಕು ಎಂಬ ಹಂಬಲ ಮಾತ್ರ ಇತ್ತು. ಸೀತೆ ತನ್ನ ಬಾಳಲ್ಲಿ ಏರು ಪೇರುಗಳಾದರೂ, ಅಂತ್ಯಕ್ಕೆ ತಪಸ್ವಿನಿಯ ಬಾಳನ್ನು, ಹೂವಯ್ಯನ ಬಾಳ ಗೆಳತಿಯಾಗುಳಿದುಕೊಂಡು ಬದುಕುವುದು ಗಮನಸೆಳೆಯುತ್ತದೆ.

**ಹೂವಯ್ಯ ಮತ್ತು ಸುಬ್ಬಮ್ಮ**

ಕಾನೂರಿನ 'ಹೆಗ್ಗಡಿತಿ'ಯಾಗುವ ನೆಲ್ಲಹಳ್ಳಿಯ ಸುಬ್ಬಮ್ಮಳ ಪಾತ್ರ ಕಾದಂಬರಿಯಲ್ಲಿ ಮುಖ್ಯವಾದುದಾಗಿದೆ. ಸ್ತ್ರೀ ಸಹಜ ಆಸೆಗಳನ್ನೊಂದಿದ್ದ ನೆಲ್ಲಹಳ್ಳಿಯ ಸುಬ್ಬಮ್ಮ ನಯ ವಿನಯಗಳಿರದ ಅಸಂಸ್ಕೃತ ಹೆಣ್ಣು. ಎಳೆ ಹುಡುಗಿಯಾಗಿದ್ದ ಈಕೆಗೆ ಮುದುಕನಾದ ಚಂದ್ರಯ್ಯಗೌಡನನ್ನು ವರಿಸುವುದು ಸಂಕಟದ ವಿಷಯವಾಗಿರಲಿಲ್ಲ. ಅವಳ ದಾರಿಗೆ ಅದು ಸುಕೃತವೆ ಆಗಿತ್ತು. ಬಡಕುಟುಂಬದಲ್ಲಿ ತನ್ನ ಜೀವ ತೇಯ್ದು ಬದುಕುತ್ತಿದ್ದವಳು ಕಾನೂರು ಮನೆಯನ್ನು ಸೇರಿದ್ದು, ಸಂತಸವನ್ನೆ ತಂದಿತ್ತು. ಕಾನೂರು ಮನೆಯಲ್ಲಿ ನಾಗಮ್ಮ ಮತ್ತು ಪುಟ್ಟಮ್ಮರೊಡನೆ ನಿತ್ಯವು ಜಗಳವಾಡುವ, ಚಂದ್ರಯ್ಯಗೌಡರಿಂದ ವಿನಾಕಾರಣ ಏಟು ತಿನ್ನುವ ಪ್ರಸಂಗಗಳಿಂದ ಸುಬ್ಬಮ್ಮಳ ಒರಟುತನದ ಪರಿಚಯವಾಗುತ್ತದೆ. ಹೀಗೆ ಒರಟಾದರೂ ಎಳೆಯಳಾಗಿದ್ದಳು ಎಂಬುದು ಗಮನಾರ್ಹ. ಈ ಎಳೆತನ ಆಕೆಯಲ್ಲಿ ಮುಗ್ಧತೆಯನ್ನು ಉಳಿಸಿತ್ತು. ಇದಕ್ಕೆ ಸಾಕ್ಷಿ 'ನೂರು ರೂಪಾಯಿ ಪ್ರಸಂಗ'. ತನಗೇನು ಬೇಕೆಂದು ಅರಿಯದವಳಾದ ಸುಬ್ಬಮ್ಮ ಯಾರ ಮನಗೆಲ್ಲುವಲ್ಲಿಯೂ ಸಫಲಳಾಗುವುದಿಲ್ಲ. ಚಂದ್ರಯ್ಯಗೌಡರಿಗೆ ಅವಳ ಬಗೆಗಿನ ಪ್ರೇಮಕ್ಕಿಂತ ಕಾಮ ಭಾವವೇ ಹೆಚ್ಚಿತ್ತು.

ಹೂವಯ್ಯ ಮತ್ತು ರಾಮಯ್ಯರು ಕಾನೂರಿನ ಮನೆಯನ್ನು ಪ್ರವೇಶಿಸಿದಾಗ ತಿಳಿಯಾದ ವಾತಾವರಣ ಸೃಷ್ಟಿಯಾಗತೊಡಗುತ್ತದೆ. ಅನಾಗರಿಕವಾಗಿ ವರ್ತಿಸುತ್ತಿದ್ದ ಸುಬ್ಬಮ್ಮ

ಹೂವಯ್ಯನನ್ನು ನೋಡಿ, ಅವನ ನಡವಳಿಕೆ ಕಂಡು ತನ್ನೊಳಗೆ ಸಂಕೋಚಿತಳಾಗುತ್ತಾಳೆ. ಜೊತೆಗೆ ತನ್ನ ವರ್ತನೆಯನ್ನು ತಿದ್ದಿಕೊಳ್ಳಲಾರಂಭಿಸುತ್ತಾಳೆ. ಅಪಾರ ಓದಿನ, ಗಂಭೀರ ಭಾವದ ಹೂವಯ್ಯನಲ್ಲಿ ಗುರುವನ್ನು ಕಾಣುತ್ತಾಳೆ. ನಾಗಮ್ಮಳು ಹೂವಯ್ಯನ ತಾಯಿಯಾದುದರಿಂದ ಅಕೆಯೊಡನೆ ಯಾವುದೇ ನಿಂದೆ, ಜಗಳ, ಅಪಮಾನಗಳನ್ನು ಮಾಡದೆ ಗೌರವದಿಂದ ನಡೆದುಕೊಳ್ಳತೊಡಗುತ್ತಾಳೆ. ಸುಬ್ಬಮ್ಮನಲ್ಲಿ ಉಂಟಾದ ಈ ಬದಲಾವಣೆಯಿಂದ ನಿತ್ಯವು ಜಗಳವಾಗುತ್ತಿದ್ದ ಕಾನೂರಿನ ಮನೆಯಲ್ಲಿ ಹೊಂದಾಣಿಕೆ ಮೂಡತೊಡಗುತ್ತದೆ. ಆದ್ದರಿಂದ ಕಾದಂಬರಿಕಾರರು 'ಸುಬ್ಬಮ್ಮನ ಹೃದಯ ಪರಿವರ್ತನೆ ಹೂವಯ್ಯನ ವ್ಯಕ್ತಿತ್ವ ರಚಿಸಿದ ಒಂದು ಪವಾಡ' ಎಂದು ವರ್ಣಿಸಿರುವುದು ಅತಿಶಯೋಕ್ತಿಯೆನಿಸಲಾರದು.

ಹೂವಯ್ಯ ಕಾನೂರಿನ ಮನೆಯಲ್ಲಿಯೇ ಇದ್ದಿದ್ದರೆ, ನಿರಂತರವಾಗಿ ಅವನ ಸನ್ನಡತೆಗೆ ಎದುರಿದ್ದರೆ ಸುಬ್ಬಮ್ಮ ಸೀತೆಯಂತೆಯೇ ವಿವೇಚನಾಶೀಲತೆ ಪಡೆಯುತ್ತಿದ್ದಳೇನೋ? ಆದರೆ ಮನೆ ಪಾಲಾದ ಕಾರಣದಿಂದ ಹೂವಯ್ಯ ಕಾನೂರು ಬಿಟ್ಟು ಕೆಳಕಾನೂರಿನಲ್ಲಿ ನೆಲೆಸಿದ ಮೇಲೆ ಸುಬ್ಬಮ್ಮಳ ವ್ಯಕ್ತಿತ್ವ ಬೇರೊಂದು ಹಾದಿಯನ್ನೆ ಹಿಡಿಯತೊಡಗುತ್ತದೆ. ಸೇರಗಾರರ ಜೊತೆಗಾತಿಯಾದ ಗಂಗೆಯ ಸಹವಾಸವನ್ನು ಮಾಡುತ್ತಾಳೆ. ಇದರಿಂದ ಸುಬ್ಬಮ್ಮಳ ಪರಿಸ್ಥಿತಿ 'ಅಸಂಸ್ಕೃತಿಯು ಕುಸಂಸ್ಕೃತಿಯ ಬಲೆಗೆ ಮೆಲ್ಲಮೆಲ್ಲನೆ ತನಗರಿಯದಂತೆ ಬೀಳುತ್ತಿತ್ತು' ಎಂಬಂತಾಯಿತು. ಚಂದ್ರಯ್ಯಗೌಡನು ಹಾಸಿಗೆ ಹಿಡಿದಾಗ ಮಗುವಿನಂತೆ ಅವರನ್ನು ಪಾಲಿಸಿದ ಈಕೆ ಅನಂತರ ಅಂಧಕಾರದಲ್ಲಿಯೇ ಮುಳುಗಿದಳು.

ಧಿಡೀರನೆ ಒದಗಿಬಂದ ಹೆಗ್ಗಡಿತಿ ಸ್ಥಾನವನ್ನು ನಿಭಾಯಿಸುವ ಸಾಮರ್ಥ್ಯ ಸುಬ್ಬಮ್ಮಳಲ್ಲಿ ಇರಲಿಲ್ಲ. ಹಣ, ಅಧಿಕಾರ, ಸ್ವಾತಂತ್ರ್ಯಗಳೆಲ್ಲವೂ ಲಭಿಸಿದೊಡನೆ ಅದನ್ನು ಸ್ವೇಚ್ಛೆಯಾಗಿ ಬಳಸಿದಳು. ಈಕೆಯಲ್ಲಿ ಕಾಡು ಭಾವಗಳು ಉದಯವಾಗಿ ಈಕೆ ಕಾಡುರಾಣಿಯಂತಾದಳು. ರಾಮಯ್ಯನ ಅದೃಢತೆ ಸುಬ್ಬಮ್ಮಳಿಗೆ 'ಹೆಗ್ಗಡಿತಿ' ಪಟ್ಟ ನೀಡಿತು. ಈ ಸ್ಥಾನದಲ್ಲಿದ್ದ ಸುಬ್ಬಮ್ಮ ವಿವೇಚನಾರಹಿತವಾಗಿ ನಡೆದುಕೊಂಡು ಅಧಃಪತನಕ್ಕೆ ಗುರಿಯಾಗಿ ಹೃದಯಾವಿದ್ರಾವಕವಾಗಿ ಮರಣವನ್ನಪ್ಪಿದಳು. ಕಾದಂಬರಿಯಲ್ಲಿನ ಕಾಡುವ ಎರಡು ಸ್ತ್ರೀಪಾತ್ರಗಳಾಗಿ ಸುಬ್ಬಮ್ಮ ಮತ್ತು ಸೀತೆ ಉಳಿಯುತ್ತಾರೆ. ಕೋಮಲೆಯಾದ ಸೀತೆ ಕಾಠಿಣ್ಯವನ್ನು ಸಹಿಸದವಳು. ಈಕೆ ಹೂವಯ್ಯನ ಸಂಸರ್ಗದಿಂದ ಶುಭ್ರ ವ್ಯಕ್ತಿತ್ವವನ್ನು ಹೊಂದುತ್ತಾಳೆ. ತನಗೇನು ಬೇಕೋ ಅದನ್ನು ಅರಸಿ ಬೇಡವಾದದ್ದನ್ನು ತ್ಯಜಿಸುವ ಸಾಹಸಿಯಾಗುತ್ತಾಳೆ. ಆದರೆ ಕಾಡುರಾಣಿಯಾದ ಸುಬ್ಬಮ್ಮ ಸ್ವೇಚ್ಛೆಯಿಂದ ಬದುಕುತ್ತಾಳೆ. ತನಗೇನು ಬೇಕೆಂಬುದರ ಅರಿವೆ ಇವಳಿಗಿರುವುದಿಲ್ಲ. ಈಕೆಯು ಹೂವಯ್ಯನ ಕಾರಣದಿಂದ ಬದಲಾದಂತೆ ಕಾಣುತ್ತಾಳೆ. ಆದರೆ ಅದು ಅಷ್ಟೆ ಕ್ಷಣಿಕವಾಗುಳಿಯುತ್ತದೆ.

## ಹೂವಯ್ಯ ಮತ್ತು ಚಂದ್ರಯ್ಯಗೌಡ

ಚಂದ್ರಯ್ಯಗೌಡ ಮತ್ತು ಹೂವಯ್ಯನ ನಡುವಣ ಬಾಂಧವ್ಯ ಅಷ್ಟೇನು ಸೊಗಸಾಗಿರಲಿಲ್ಲ. ಹೆಚ್ಚು ಓದಬೇಕೆಂಬ ಹಂಬಲದ ಹೂವಯ್ಯನಿಗೆ, ಚಂದ್ರಯ್ಯಗೌಡರ 'ಮನೆಪಾಲು' ಮಾಡಬೇಕೆಂಬ ನಿರ್ಣಯವೆ ತೊಡಕಾಗುತ್ತದೆ.

ವಂಶಪಾರಂಪರ್ಯವಾಗಿದ್ದ ಆಸ್ತಿಗೆ, ತಾನೊಂದಿಷ್ಟನ್ನು ಸೇರಿಸಿ, ಒಕ್ಕಲಿಗರಿಗೆ ಬಡ್ಡಿಗೆ ಸಾಲ ನೀಡುತ್ತ, ಕಳ್ಳ ನಾಟ ಕಡಿಸಿ ವ್ಯವಹರಿಸುತ್ತ ಕೆಲಸಗಾರರನ್ನು, ಮನೆಯವರನ್ನು ಹತೋಟಿಯಲ್ಲಿಡಲು ಪ್ರಯತ್ನಿಸುತ್ತಿದ್ದ ಚಂದ್ರೇಗೌಡರದು ದರ್ಪದ ವ್ಯಕ್ತಿತ್ವ. ಹೂವಯ್ಯ, ನಾಗಮ್ಮರನ್ನು ಬೇರೆ ಇರಿಸಿ, ರಾಮಯ್ಯನಿಗೆ 'ಸೀತೆ'ಯೊಡನೆ ವಿವಾಹ ಮಾಡಿಸುವುದು ಇವರ ಧ್ಯೇಯವಾಗಿತ್ತು. ಕುತಂತ್ರಗಳಿಂದ ಇದನ್ನು ನೆರವೇರಿಸಿಯೇ ಬಿಟ್ಟರು. ಆದರೆ ಈ ಎಲ್ಲ ಕಾರ್ಯಗಳನ್ನು ಮಾಡುವಾಗ 'ಹೂವಯ್ಯ'ನೊಡನೆ ಮುಖಾಮುಖಿಯಾಗಲೇಬೇಕಿತ್ತು.

ಒರಟಾದ ದರ್ಪ ತೋರುತ್ತಿದ್ದ ಚಂದ್ರಯ್ಯಗೌಡರು, ಮಾನವೀಯವಾಗಿದ್ದ, ವಿನಯವಂತನು, ದೃಢಮನಸ್ಕನು ಆಗಿದ್ದ ಹೂವಯ್ಯನು ಎದುರು ಬಂದಾಗ ಅವನನ್ನು ಎದುರಿಸಲಾರದೆ ಮತ್ತಷ್ಟು ಉಗ್ರರಾಗುತ್ತಿದ್ದರು. ಈ ಉಗ್ರತೆ ದ್ವೇಷದ ರೂಪವನ್ನು ತಾಳಿತು. ಚಂದ್ರಯ್ಯ ಸ್ಥಾಪಿಸಿಕೊಂಡಿದ್ದ ಯಜಮಾನಿಕೆಯೊಳಗೆ ಹೂವಯ್ಯ ಪ್ರವೇಶ ಮಾಡಿದ್ದು, ಈ ದ್ವೇಷದ ಬೆಂಕಿಗೆ ತುಪ್ಪ ಸುರಿದಂತಾಯಿತು.

ಚಂದ್ರಯ್ಯಗೌಡರಿಗೆ ಹೂವಯ್ಯನೆಂದರೆ ಗೌರವ ಭಾವನೆ ಇತ್ತು. ಶಿಕ್ಷಣ ಇಲ್ಲದಿದ್ದರೂ ಲೋಕಜ್ಞಾನವಿದ್ದ ಚಂದ್ರಯ್ಯಗೌಡರ ಮೇಲೆಯೇ ಹೂವಯ್ಯನ ಪ್ರಭಾವ ಗಾಢವಾಗಿತ್ತು. ಚಂದ್ರಯ್ಯಗೌಡರು ಹಾಸಿಗೆ ಹಿಡಿದಾಗ ಹೂವಯ್ಯನ ಬಗ್ಗೆ ಅವರು ತೋರಿದ ನಡವಳಿಕೆ ಸ್ವತಃ ಹೂವಯ್ಯನಿಗೇ ಆಶ್ಚರ್ಯವನ್ನು ತಂದಿತ್ತು. 'ಹೂವಯ್ಯ, ಹೋಗಿ ಬರುತ್ತೇನೆ ಎಂದು ಮೇಲೆದ್ದಾಗ ಚಂದ್ರಯ್ಯಗೌಡರು ತಮ್ಮೆರಡು ಕೈಗಳನ್ನು ಹಣೆಗಿಟ್ಟು ನಮಸ್ಕಾರ ಮಾಡಿ ಬಿಟ್ಟರು! ಹೂವಯ್ಯನಿಗೆ ಅದನ್ನು ನೋಡಿ ಬೆಪ್ಪು ಹೊಡೆದಂತಾಗಿ ತಾನೂ ನಮಸ್ಕಾರ ಮಾಡಿ ಅವರನ್ನು ಬೀಳ್ಕೊಟ್ಟನು?' ಈ ಮಾತುಗಳಿಂದ ಚಂದ್ರಯ್ಯಗೌಡರು ತಮ್ಮ ಹಠಮಾರಿತನ ಬಿಟ್ಟು ಹೂವಯ್ಯನ ಬಗ್ಗೆ ಸೌಮ್ಯವಾಗಿದ್ದದ್ದು, ಗೌರವಿಸತೊಡಗಿದ್ದು ತಿಳಿಯುತ್ತದೆ. ಇದಕ್ಕೆ ಹೂವಯ್ಯನ ವ್ಯಕ್ತಿತ್ವವೆ ಕಾರಣವಾಗುವುದು ವಿಶೇಷವೆನಿಸುತ್ತದೆ.

ಈ ರೀತಿಯಲ್ಲಿ 'ಕಾನೂರು ಹೆಗ್ಗಡಿತಿ' ಕಾದಂಬರಿಯು ಮಲೆನಾಡಿನ ಬದುಕಿನ ಕಥನವಾದರೂ ಭಾರತೀಯ ಪರಿಸರಕ್ಕೆ ವಸಾಹತುಶಾಹಿಯಿಂದ ಉಂಟಾದ ಪರಿಣಾಮಗಳಿಗೆ ತೋರಿದ ಪ್ರತಿಕ್ರಿಯೆಯಾಗಿಯೂ ನಿರೂಪಿತಗೊಂಡಿದೆ. ಕಾದಂಬರಿಯ ಕಥನ ದುರಂತಗಳ, ಅವಸಾನಗಳ ಕತೆ ಎನಿಸಿದರೂ ಕುಗ್ರಾಮದ ಕುಟುಂಬವೊಂದರಲ್ಲಿ ಕಲಿತ ಹೂವಯ್ಯ ತನ್ನ ಬದುಕಿನಲ್ಲಿ ತಾನು ತೆಗೆದುಕೊಳ್ಳುವ ನಿರ್ಧಾರಗಳಿಂದ ಎಲ್ಲರ

ಗೌರವವನ್ನು ಗಳಿಸುವುದು ಮುಖ್ಯವಾಗುತ್ತದೆ. ಕಾದಂಬರಿಯ ಸನ್ನಿವೇಶದಲ್ಲಿ, ಹೂವಯ್ಯನ ಪಾತ್ರ ಪೋಷಣೆಯಲ್ಲಿ ಕಾದಂಬರಿಕಾರರಿಗೆ ವಸಾಹತು ಶಿಕ್ಷಣದ ಬಗೆಗೆ ಅಭಿಮಾನವಿದೆ. ಅದರಿಂದ ದೊರೆತ ಲೋಕಜ್ಞಾನದ ಬಗೆಗೆ ತೃಪ್ತಿಯಿದೆ. 'ಓದು' ನೌಕರಿಯನ್ನು ಪಡೆಯಲಿಕ್ಕಾಗಿ ಎನ್ನುವ ಸಾರ್ವತ್ರಿಕ ನಂಬಿಕೆಯನ್ನು ಮೀರಿದ ಚಿಂತನೆ ಕುವೆಂಪು ಅವರದು. 'ಓದು' ಮನುಷ್ಯನು ತನ್ನ ಬದುಕನ್ನು ಆನಂದಮಯಗೊಳಿಸಿಕೊಳ್ಳುವ ಸಾಧನ ಎಂಬುದನ್ನು ಹೂವಯ್ಯನ ಪಾತ್ರದ ಮೂಲಕ ವಿವರಿಸಿದ್ದಾರೆ.

ಮೈಸೂರಿನಿಂದ ಮರಳಿ ಕಾನೂರಿಗೆ ಬರುವ ಹೂವಯ್ಯನಿಗೆ ತಾನು ಚಿಕ್ಕವಯಸ್ಸಿನಲ್ಲಿ ನೋಡಿ, ಆಡಿ, ಬೆಳೆದ ಪರಿಸರವನ್ನು ಹೊಸ ಚಿಂತನೆಗಳಿಂದ ಗ್ರಹಿಸಲು ಸಾಧ್ಯವಾಗಿದೆ. ಪರಿಸರದಲ್ಲಿ ತನ್ಮಯತೆಯನ್ನು ಸಾಧಿಸಿದ್ದಾನೆ. ಇದೆಲ್ಲಾ ಅವನಿಗೆ ಓದಿನಿಂದಲೇ ದೊರೆತ ಸಂಸ್ಕಾರ ಅಥವಾ ತಿಳುವಳಿಕೆ ಎಂಬುದನ್ನು ಗುರುತಿಸಬಹುದಾಗಿದೆ.

ಕುವೆಂಪು ಅವರು ಕಾದಂಬರಿಯಲ್ಲಿ ವ್ಯಕ್ತಪಡಿಸಿರುವ ಚಿಂತನಕ್ರಮ ಹಾಗೂ ತಾವು ರೂಪಿಸಿದ ಪಾತ್ರಗಳ ಹಿನ್ನೆಲೆಯಲ್ಲಿ ಅವರು ನೀಡುತ್ತಿರುವ ಪ್ರತಿಕ್ರಿಯೆ ಹಾಗೂ ಅವರು ಆತ್ಮಕಥನದಲ್ಲಿ ತಮ್ಮ ವಿದ್ಯಾಭ್ಯಾಸದ ಬಗೆಗೆ ಹೇಳಿಕೊಂಡಿರುವ ಮಾತುಗಳು ಇವೆಲ್ಲವುಗಳ ಹಿನ್ನೆಲೆಯಲ್ಲಿ ಬ್ರಿಟಿಷರು ಜಾರಿಗೆ ತಂದ ಶಿಕ್ಷಣ ಕ್ರಮ ಹಾಗೂ ಅದು ಭಾರತೀಯ ಪರಿಸರದಲ್ಲಿ ತರುವ ಬದಲಾವಣೆಗಳ ಬಗೆಗೆ ಕುವೆಂಪು ಅವರಿಗೆ ಆಶಾದಾಯಕವಾದ ಮನೋಭಾವವಿದ್ದುದನ್ನು ಗಮನಿಸಬಹುದು.

ವಸಾಹತು ಶಿಕ್ಷಣ ಜಾರಿಯಾದ ಮಹತ್ವದ ಸಂಗತಿಯಿಂದಾಗಿ ಭಾರತೀಯ ಸಮಾಜದ ಎಲ್ಲ ವರ್ಗದ ಜನರಿಗೆ ಅಕ್ಷರ ಕಲಿಯುವ ಅವಕಾಶಗಳು – ದೊರೆತವು. ಇದು ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಆದ ಬಹುದೊಡ್ಡ ಬದಲಾವಣೆ. ಆದರೆ ಕಾಲ ಬದಲಾದಂತೆ ಇಂಗ್ಲಿಷ್ ಶಿಕ್ಷಣದಿಂದಾಗಿ ಭಾರತೀಯ ಮತ್ತು ದೇಶೀಯ ಭಾಷೆಗಳು ಅವಜ್ಞೆಗೆ ಒಳಗಾದವು. ಇಂಗ್ಲಿಷ್ ಕಲಿಯುವ ವ್ಯವಸ್ಥೆಯಲ್ಲಿ ತರತಮಗಳು ಉಂಟಾದವು. ಈ ರೀತಿಯ ಪರಿಣಾಮಗಳ ಬಗೆಗೂ ಕುವೆಂಪು ಗಾಢವಾಗಿ ಚಿಂತನೆ ನಡೆಸಿದ್ದಾರೆ. ಈ ಬಗೆಯ ವಿಚಾರವಾದವು ಅವರ ವೈಚಾರಿಕ ಬರಹಗಳಲ್ಲಿ ವ್ಯಕ್ತಗೊಂಡಿವೆ. ಶಿಕ್ಷಣ ಕುರಿತಂತ ಹಲವು ಲೇಖನಗಳಲ್ಲಿ ಅವರು ಭಾರತೀಯ ಪರಿಸರಕ್ಕೆ ಅದರಲ್ಲೂ ಪ್ರಾದೇಶಿಕ ಭಾಷೆಗಳನ್ನು ಹೊಂದಿರುವ ರಾಜ್ಯಗಳಿಗೆ ಬೇಕಾದ ಶಿಕ್ಷಣ ಕ್ರಮದ ಬಗ್ಗೆ ವಿವರಿಸಿದ್ದಾರೆ. ಆದುದರಿಂದ ಕುವೆಂಪು ಅವರ ಎರಡು ಕಾದಂಬರಿಗಳಲ್ಲಿನ ಶಿಕ್ಷಣ ಚಿಂತನೆಗಳು ಹಾಗೂ ಅವರ ವೈಚಾರಿಕ ಬರಹಗಳಲ್ಲಿನ ವಿಚಾರಗಳನ್ನು ಸಮೀಕರಿಸುವ ಪ್ರಯತ್ನ ಮಾಡಲಾಗಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮಲೆನಾಡಿಗೆ ಇಂಗ್ಲಿಷ್ ಶಿಕ್ಷಣ ಕಾಲಿಟ್ಟ ಬಗೆಯನ್ನು ಕೌತಕದಿಂದ ಕಟ್ಟಿಕೊಡುವ ಕುವೆಂಪು, 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಅಂತಹ ಶಿಕ್ಷಣದ ಫಲಾನುಭವಿಯಾದ ಹೂವಯ್ಯನ ಸ್ವಭಾವವನ್ನು

ವಿವರಿಸುತ್ತಾರೆ. ಒಂದು ಕಾಲಕ್ಕೆ ಇಂಗ್ಲಿಷ್ ಶಿಕ್ಷಣದಿಂದ ಒದಗುವ ಅನುಕೂಲತೆಗಳನ್ನು ಸ್ವಾಗತಿಸುವ ಕುವೆಂಪು ಅನಂತರದಲ್ಲಿ ಅದರಿಂದ ಉಂಟಾದ ಕ್ಷೋಭೆಯನ್ನು ವಿವರಿಸುತ್ತಾರೆ. 'ನಮಗೆ ಬೇಕಾಗಿರುವ ಇಂಗ್ಲಿಷ್' ಲೇಖನದಲ್ಲಿ ಹಲವು ಪ್ರಾದೇಶಿಕ ಭಾಷೆಗಳನ್ನು ಹೊಂದಿರುವ ಭಾರತದಂತಹ ಒಕ್ಕೂಟ ವ್ಯವಸ್ಥೆ ಇಂಗ್ಲೀಷ್ ಭಾಷೆಯನ್ನು ಯಾವ ಸ್ವರೂಪದಲ್ಲಿ ಒಳಗೊಳ್ಳಬೇಕು ಎನ್ನುವ ಕುರಿತು ಚರ್ಚೆ ಮಂಡಿಸಿದ್ದಾರೆ. ಇಂಗ್ಲಿಷ್ ಭಾಷೆಯ ಯೋಗ್ಯತೆ, ಅದರಿಂದ ಒದಗುವ ಪ್ರಜ್ಞಾ ವೈಶಾಲ್ಯ, ಅದು ನಮ್ಮಲ್ಲಿ ಪ್ರಚೋದಿಸುವ ಬುದ್ಧಿ, ಅದರಿಂದ ನಮಗೆ ಮುಂದೆ ಎಂದೆಂದಿಗೂ ಲಭಿಸಲಿರುವ ಸಂಪರ್ಕ ಸಹಾಯ ಮೊದಲಾದ ಕಾರಣಗಳಿಗಾಗಿ ಆ ಭಾಷೆಯ ಅಗತ್ಯ ನಮಗಿದೆ ಎಂದಿದ್ದಾರೆ. ಅಲ್ಲದೇ ಅದು ಯಾವ ರೂಪದಲ್ಲಿ? ಯಾವ ಪ್ರಮಾಣದಲ್ಲಿ? ಯಾರಿಗೆ? ಏತಕ್ಕೆ? ಮತ್ತು ಯಾವ ಯಾವ ಉದ್ದೇಶಗಳಿಗೆ ನಮಗೆ ಬೇಕು ಎನ್ನುವ ಚಿಂತನೆಯನ್ನು ನಮ್ಮ ಮುಂದಿಡುತ್ತಾರೆ.

**೫.೨ ಶಿವರಾಮ ಕಾರಂತರ ಆಯ್ದ ಕಾದಂಬರಿಗಳು**

ಬದುಕನ್ನೇ ಪಾಠಶಾಲೆಯನ್ನಾಗಿಸಿಕೊಂಡ ಶಿವರಾಮ ಕಾರಂತರು ನಿರಂತರ ಪ್ರಯೋಗಗಳಲ್ಲಿ ತೊಡಗಿಕೊಂಡ ಸಮಾಜವಿಜ್ಞಾನಿ. ಗಾಂಧೀಜಿಯವರ ಕರೆಗೆ ಓಗೊಟ್ಟು ಆಗ ತಾನೇ ಪ್ರವೇಶ ಪಡೆದಿದ್ದ ಕಾಲೇಜನ್ನು ತೊರೆದು ಸ್ವಾತಂತ್ರ್ಯ ಸಂಗ್ರಾಮದಲ್ಲಿ ತೊಡಗಿದವರು. ಸ್ವಪ್ರತಿಭೆಯಿಂದಲೇ ಹಲವು ಬಗೆಯ ಜ್ಞಾನ ಶಿಸ್ತುಗಳಲ್ಲಿ ಆಸಕ್ತಿ ಬೆಳೆಸಿಕೊಂಡರು. ತಮ್ಮ ಬರವಣಿಗೆಯಿಂದ ಸುತ್ತಣ ಬದುಕನ್ನು ಕ್ರಿಯಾಶೀಲಗೊಳಿಸಿದರು. ಇವರು ಸಾಹಿತಿ ಮಾತ್ರವಲ್ಲದೆ ಸಂಸ್ಕೃತಿ ಚಿಂತಕರಾಗಿ, ಕಲಾ ವಿಮರ್ಶಕರಾಗಿ, ಶಿಕ್ಷಣ ತಜ್ಞರಾಗಿ ಒಂದು ವಿಶ್ವವಿದ್ಯಾಲಯದೆತ್ತರಕ್ಕೆ ಬೆಳೆದರು. ರವೀಂದ್ರನಾಥ ಠಾಕೂರರಂತೆಯೆ ಶಿಕ್ಷಣ, ಶಿಕ್ಷಣ ವ್ಯವಸ್ಥೆ ಹಾಗೂ ಶಿಕ್ಷಣ ಪದ್ಧತಿಯಲ್ಲಿನ ದೋಷಗಳ ನಿವಾರಣೆಯ ಬಗ್ಗೆ ಹೊಸ ಚಿಂತನೆಗಳನ್ನು ನೀಡಿದರು. ಮಕ್ಕಳ ಶಿಕ್ಷಣದ ಬಗ್ಗೆ ವಿಫುಲ ಪ್ರಯೋಗಗಳನ್ನು ನಡೆಸಿದರು. 'ನಮ್ಮ ಶಿಕ್ಷಣ ಪದ್ಧತಿಯ ಸಮಸ್ಯೆಗಳೂ ಭವಿಷ್ಯವೂ', 'ಮನೋದೇಹಿಯಾದ ಮಾನವ', 'ಶಿಕ್ಷಣ ಪದ್ಧತಿ ಸಾರ್ಥಕವಾಗಲು' ಎಂಬ ಕೃತಿಗಳಲ್ಲಿ ಹಾಗೂ 'ಶಿಕ್ಷಣ ಕ್ರಮದಲ್ಲಿ ಆಧುನಿಕ ಸಾಧನಗಳು', 'ಶಿಕ್ಷಣ ಮಾಧ್ಯಮ', 'ಇಂದಿನ ಶಿಕ್ಷಣ ಶಿಕ್ಷಣವಲ್ಲ, ಶಿಶುಹತ್ಯೆ'. 'ಶಿಕ್ಷಣ ಯಾವುದಕ್ಕಾಗಿ', 'ಶಿಕ್ಷಣ ವಿವೇಚನೆ', 'ಶಿಕ್ಷಣ ಶಿಕ್ಷೆಯಾಗಬಾರದು', 'ಶಿಕ್ಷಣದ ಸಮಸ್ಯೆಗಳು' – ಈ ಲೇಖನಗಳಲ್ಲಿ ಶಿಕ್ಷಣದ ಅವಶ್ಯಕತೆ, ಶಾಲಾ ಕಲಿಕೆಯಲ್ಲಿನ ಸಾರ್ಥಕತೆ, ಪಠ್ಯ ಮತ್ತು ಪಠ್ಯೇತರ ಕಲಿಕೆ, ಮಕ್ಕಳಿಗೆ ಆಸಕ್ತಿದಾಯಕ ಪಠ್ಯ ರೂಪಿಸುವುದು, ಜ್ಞಾನಾಭಿವೃದ್ಧಿಯ ಅವಶ್ಯಕತೆ, ಮನಸ್ಸಿನ ಸಂತೋಷಕ್ಕೆ ಪ್ರೇರಣೆಗಳು, ಶಿಕ್ಷಕ ಹುದ್ದೆಯ ಸಾರ್ಥಕತೆ, ಬಲವಂತದ ಶಿಕ್ಷಣ, ಬುದ್ಧಿ ಮತ್ತು ಭಾವಕ್ಕೆ ಆಹಾರವನ್ನು ಒದಗಿಸಲಾರದ ಶಿಕ್ಷಣ ಮೊದಲಾದ ಸಂಗತಿಗಳನ್ನು ಕುರಿತಂತೆ ಜಿಜ್ಞಾಸೆ ನಡೆಸಿದ್ದಾರೆ.

ನನ್ನ ವಿದ್ಯಾಭ್ಯಾಸ ಮತ್ತು ನನಗಿಂತ ಹೆಚ್ಚಿನ ಅದೃಷ್ಟಶಾಲಿಗಳಾಗಿ ಇಂದಿನ ಶಾಲಾ ಕಾಲೇಜುಗಳಲ್ಲಿ ಶಿಕ್ಷಣ ಪಡೆದ ಲಕ್ಷಗಟ್ಟಲೆ ಜನಗಳ ವಿದ್ಯಾಭ್ಯಾಸ ಪ್ರಯೋಜನಕಾರಿಯಾಗಿದೆ ಅಥವಾ ಆಗಿಲ್ಲ ಎಂಬುದನ್ನು ನೆನೆದರೆ ಸೋಜಿಗವಾಗುತ್ತದೆ.[೧೨]

ಎಂದು ಕಾರಂತರು ತಮ್ಮ ಕಾಲದ ಭಾರತದ ಶಿಕ್ಷಣ ಪದ್ಧತಿಯನ್ನು ನೆನಪಿಸಿಕೊಳ್ಳುತ್ತಾರೆ. ಆ ಕಾಲದಲ್ಲಿ ಎರಡು ಬಗೆಯಲ್ಲಿ ಶಿಕ್ಷಣ ನೀಡಲಾಗುತಿತ್ತು. ಆಹಾರ ಸಂಪಾದನೆಯ ದೃಷ್ಠಿಯಿಂದ ಕೊಡುತಿದ್ದ ವೃತ್ತಿ ಶಿಕ್ಷಣ ಒಂದು ಬಗೆಯದು. ಅದು ಕೃಷಿ, ಕಸುಬುದಾರಿಕೆಗಳಿಗೆ ಸಂಬಂಧಿಸಿದ್ದು. ಆ ಕೆಲಸಗಳನ್ನು ಕಿರಿಯರು ಹಿರಿಯರಿಂದ ಆಯಾಯ ವೃತ್ತಿನಿರತ ಗುರುಗಳಿಂದ ನೋಡಿ, ಮಾಡಿ ಕಲಿಯುತಿದ್ದರು. ಮತ್ತೊಂದು ಬೌದ್ಧಿಕವಾದ ಶಿಕ್ಷಣ. ಓದು, ಬರಹ, ಒಂದಷ್ಟು ಗಣಿತಗಳನ್ನು ನಾಲ್ಕೈದು ವರ್ಷಗಳಲ್ಲಿ ಹೇಳಿ ಮುಗಿಸುತಿದ್ದರು. ಆಗ ಸ್ಮರಣ ಶಕ್ತಿಗೆ ಹೆಚ್ಚಿನ ಮನ್ನಣೆ ನೀಡಲಾಗುತ್ತಿತ್ತು. ಅಂದರೆ ಕಂಠಪಾಠ ಮಾಡುವ ಪ್ರಧಾನ ಪದ್ಧತಿ ರೂಢಿಯಲ್ಲಿತ್ತು. ವ್ಯಾಕರಣ, ಶಬ್ದಕೋಶ ಹಾಗೂ ವಿವಿಧ ಶಾಸ್ತ್ರಗಳನ್ನು ಉರುಹೊಡೆದು ಕಲಿಯಲಾಗುತ್ತಿತ್ತು. ಈ ಪದ್ಧತಿಯಲ್ಲಿ ವಿದ್ಯಾರ್ಥಿಯ ಅಭಿರುಚಿ ಮನೋಧರ್ಮಗಳಿಗೆ ಮಹತ್ವವೇ ಇರಲಿಲ್ಲ ಎಂಬುದನ್ನು ಶಿವರಾಮ ಕಾರಂತರು ಗುರುತಿಸಿದ್ದಾರೆ. ಆಧುನಿಕತೆಯ ಈ ಕಾಲಮಾನದಲ್ಲಿಯೂ ಸ್ಮರಣೆ ಉಳಿಯುವುದು, ಅಳಿಯುವುದು ವ್ಯಕ್ತಿಯ ಮನಸ್ಸಿಗೂ ವಿಷಯಕ್ಕೂ ಇರುವ ಸ್ನೇಹ ಸಂಬಂಧ, ಅಭಿರುಚಿ, ಮಾನಸಿಕ ತೃಷೆ – ಇವುಗಳಿಗೆ ಸಂಬಂಧಪಟ್ಟಿದೆ ಎಂಬುದನ್ನು ಗಣನೆಗೆ ತೆಗೆದುಕೊಳ್ಳುತ್ತಿಲ್ಲ. ನಮ್ಮ ಶಿಕ್ಷಣದ ಫಲಾಫಲಗಳನ್ನು ತೂಗುವ ಪರೀಕ್ಷೆಗಳೆಂಬ ಕಂದಕಗಳು ವಿದ್ಯಾರ್ಥಿಗಳ ನೆನಪಿನ ಶಕ್ತಿಯನ್ನಷ್ಟೆ ಅಳೆಯಬಲ್ಲವು ಎಂದು ಶಿಕ್ಷಣ ಮತ್ತು ಪರೀಕ್ಷೆಯ ಪದ್ಧತಿ ಬಗ್ಗೆ ಬೇಸರ ವ್ಯಕ್ತಪಡಿಸಿದ್ದಾರೆ. ಇದಕ್ಕೆ ಪರಿಹಾರವನ್ನು ಸೂಚಿಸಿದ್ದಾರೆ.

ನಮ್ಮ ಶಿಕ್ಷಣ ವಿಧಾನದಲ್ಲಿ ಮನಸ್ಸು ಮತ್ತು ವಯಸ್ಸು ಎರಡಕ್ಕೂ ಸ್ಥಾನವಿಲ್ಲ. ಅವರ ಅಭಿರುಚಿಗಳೇನು, ಅನಿಸಿಕೆಗಳೇನು, ಬಯಕೆಗಳೇನು, ಆಸಕ್ತಿಗಳೇನು, ಅನುಭವಗಳ ಮಿತಿ ಏನು, ಅವುಗಳ ಇತಿಮಿತಿಗಳೊಳಗೆ ಯಾವ ಯಾವ ವಿಷಯಗಳನ್ನು ಎಷ್ಟೆಷ್ಟು ಹೇಳಬಹುದು, ಅವುಗಳ ವಿಷಯದಲ್ಲಿ ಅವರ ಮನಸ್ಸನ್ನು ಒಲಿಯುವಂತೆ ಯಾವ ವಿಧದಲ್ಲಿ ಅದನ್ನು ಹೇಳಬೇಕು – ಎಂಬೆಲ್ಲ ಪ್ರಶ್ನೆಗಳು ನಮ್ಮ ನಾಡಿನಲ್ಲಿ ಶಿಕ್ಷಣದ ಹೊಣೆ ಹೊತ್ತವರನ್ನು ಬಾಧಿಸಿದ್ದರೆ ಇಂತಹ ಪರಿಸ್ಥಿತಿ ಉಂಟಾಗುತ್ತಿರಲಿಲ್ಲ[೧೩] ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಈ ಮೂಲಕ ಸರ್ಕಾರ, ಶಿಕ್ಷಣ ಸಂಸ್ಥೆಗಳು, ಶಿಕ್ಷಕ ವರ್ಗ, ಶಿಕ್ಷಣ ತಜ್ಞರು ಎನಿಸಿಕೊಂಡವರಲ್ಲಿ ಶಿಕ್ಷಣ ವ್ಯವಸ್ಥೆಯ ಬಗ್ಗೆ ಗಂಭೀರವಾದ ಚಿಂತನೆಗಳು ನಡೆಯಬೇಕು ಎಂಬುದನ್ನು ಪ್ರತಿಪಾದಿಸಿದ್ದಾರೆ. ಯಾವ ಮಾನದಂಡದ ಹಿನ್ನಲೆಯಲ್ಲಿ ಶಿಕ್ಷಣ

ಪದ್ಧತಿಗಳನ್ನು ರೂಪಿಸಲಾಗುತ್ತಿದೆ ಎನ್ನುವುದಕ್ಕೆ ನಿಖರವಾದ ಉತ್ತರ ದೊರೆಯುವುದಿಲ್ಲ. ಇಂತಹ ಸಂದಿಗ್ಧ ಸ್ಥಿತಿಯಲ್ಲಿ 'ಮಗುವಿಗೊಂದು ಭಾವ ಜೀವನವಿದೆ ಎಂದೆಣಿಸಿ ನಮ್ಮ ಶಿಕ್ಷಣವನ್ನು ರೂಪಿಸಿದ್ದೇವೆಯೆ?' ಎಂದು ಪ್ರಶ್ನಿಸುತ್ತಾರೆ.

ಶಿಕ್ಷಣ ಸ್ಥಿತಿಯನ್ನು ಗಮನಿಸಿರುವ ಕಾರಂತರು ನಮ್ಮ ಶಿಕ್ಷಣ ಕ್ರಮದ ಮುಖ್ಯ ಲಕ್ಷಣ ವಿದ್ಯಾರ್ಥಿಗಳ ತಲೆಯಲ್ಲಿ ಹಿರಿಯರು ಸಂಗ್ರಹಿಸಿಟ್ಟಿರುವ ಜ್ಞಾನ ಭಂಡಾರವನ್ನು ತುರುಕಿಸುವ ಪ್ರಯತ್ನ. ಈ ಪ್ರಯತ್ನದಲ್ಲಿ ಅವರಿಗೆ ಜುಗುಪ್ಸೆ ಬರಿಸುವ ಎಲ್ಲ ಕೆಲಸಗಳನ್ನೂ ಮಾಡುತ್ತಿದ್ದೇವೆ. ಹಾಗೆಂದೇ ಮುಂದೆ ಅವರು ಕಾಲೇಜನ್ನು ಬಿಟ್ಟ ಬಳಿಕ, ಪುಸ್ತಕ ಸನ್ಯಾಸದ ದೀಕ್ಷೆ ತೊಡುತ್ತಾರೆನ್ನುವುದರ ಮೂಲಕ ಶಿಕ್ಷಣದ ಪರಿಣಾಮವನ್ನು ಗುರುತಿಸಿದ್ದಾರೆ.

ಶಾಲಾ ಬೋಧನೆಯ ನಿರರ್ಥಕತೆಯನ್ನು ಕುರಿತು ಹೇಳುವ ಕಾರಂತರು ಆದಿವಾಸಿಗಳ ಮಕ್ಕಳು ತಮ್ಮ ಎಂಟನೇ ವಯಸ್ಸಿಗೆ ಆಹಾರ ಸಂಪಾದನೆಯ ಕೆಲಸವನ್ನು ಸಾಧಿಸುತ್ತಾರೆ. ಆದರೆ ನಾಗರಿಕತೆ ಎಂದು ಕರೆಸಿಕೊಳ್ಳುವ ಇಂದಿನ ತರುಣರು ಇಪ್ಪತ್ತು, ಇಪ್ಪತ್ತೈದನೇ ವಯಸ್ಸಿನವರೆಗೆ ಪರರ ಪೋಷಣೆಯಲ್ಲಿ ಬದುಕುತ್ತಾರೆ. ಅದಕ್ಕೆ ಅವರು ಕಲಿತ ಶಿಕ್ಷಣದಿಂದ ಯಾವ ಬಗೆಯ ಪರಿಹಾರವು ದೊರೆಯದರ ಬಗ್ಗೆ ಆತಂಕ ವ್ಯಕ್ತಪಡಿಸಿದ್ದಾರೆ. ಅಲ್ಲದೇ ತಮ್ಮ ಬದುಕಿನ ಅನುಭವವನ್ನು ಆಧಾರವಾಗಿಸಿಕೊಂಡು ತರಗತಿ ಕಲಿಕೆಯಲ್ಲಿನ ನಿರರ್ಥಕತೆಯನ್ನು ವಿವರಿಸಿದ್ದಾರೆ.

> ನೂರರಲ್ಲಿ ೮೦ರಷ್ಟು ಪಿರಿಯಡ್‌ಗಳಲ್ಲಿ ನಡೆದ ಪಾಠ ಪ್ರವಚನದ ಒಂದು ವಸ್ತುವೂ ಇಂದು ನನ್ನ ನೆನಪಿನಲ್ಲಿಲ್ಲ. ಪ್ರಾಥಮಿಕ ಶಾಲೆಯಲ್ಲಿ ೫ ವರ್ಷ, ಹಾಯ್‌ಸ್ಕೂಲಿನಲ್ಲಿ ೮ ವರ್ಷ ಹೀಗೆ ೧೩ ವರ್ಷಗಳ ಅವಧಿಯಲ್ಲಿ ನಾನು ನಡೆಯಿಸಿದ ಕಲಿಕೆ ಅಜ್ಞಾತವಾಯಿತೇಕೆ? ಯಾವುದಾದರೂ ಬೃಹತ್ ಕಾರಣವಿಲ್ಲದೆ ಇಷ್ಟೊಂದು ಆಯುಷ್ಯ ಮುಂದೆ ಕೈಗೆ ಸಿಗದ ರೀತಿಯಲ್ಲಿ ಕಳಚಿಹೋಯಿತಲ್ಲ ಎಂಬುದನ್ನು ನೆನೆಯುವಾಗ ನನಗೆ ಬಲು ಆಶ್ಚರ್ಯವಾಗುತ್ತದೆ.[೧೪]

ಇವತ್ತಿನ ವ್ಯವಸ್ಥೆಯಲ್ಲಿ ಕಲಿತ ನೂರಕ್ಕೆ ೮೦ರಷ್ಟು ಮಂದಿಯ ಅನುಭವವು ಇದೆ ತೆರನಾದುದು. ಇದರಿಂದಾಗಿಯೇ ಶಿಕ್ಷಣ ಎನ್ನುವುದು ಕಲಿಯುವಾತನ ಮನಸ್ಸನ್ನು ಅರಳುವಂತೆ ಮಾಡಿ ಅವನ ಬುದ್ಧಿಶಕ್ತಿಯನ್ನು ಪ್ರಚೋದಿಸಿ ಆತ ತನ್ನ ಪರಿಸರದೊಡನೆ ಹೊಂದಿಕೊಳ್ಳಬಲ್ಲ ಸಾಮರ್ಥ್ಯವನ್ನು ನೀಡುವಲ್ಲಿ ಸೋಲುತ್ತಿದೆ. ಯಾಕೆಂದರೆ ಜ್ಞಾನದ ಮೋಹ ವಿದ್ಯಾರ್ಥಿಗಳಲ್ಲಿ ಮೂಡಬೇಕೆಂಬ ಅಭಿಲಾಷೆಯಿಂದ ನಮ್ಮ ಶಿಕ್ಷಣ ಕ್ರಮ ರೂಪುಗೊಂಡಂತೆ ಗೋಚರವಾಗುವುದಿಲ್ಲ. ಶಿಕ್ಷಣ ತಜ್ಞರು ಮತ್ತು ಪಠ್ಯಪುಸ್ತಕ ಸಮಿತಿಯವರು ತಮ್ಮ ನಿಲುವಿಗೆ ಎಟುಕುವ ಒಂದಷ್ಟು ವಿಷಯಗಳನ್ನು ಗೊತ್ತುಮಾಡುತ್ತಾರೆ.

ಬೋಧಕರು ತಮ್ಮ ಎದುರಿಗೆ ಕುಳಿತಿರುವ ವಿದ್ಯಾರ್ಥಿಗಳಿಗೆ ಅದನ್ನು ಬಲವಂತವಾಗಿ ತುರುಕುವ ಪ್ರಯತ್ನ ಮಾಡುತ್ತಾರೆ. 'ಪರೀಕ್ಷೆ' ಎಂದರೆ ಅದೊಂದು ಭೂತ ಎನ್ನುವ ಹಾಗೆ ಅವರಲ್ಲಿ ಚಿತ್ರಿಸಲಾಗಿದೆ. ಪರೀಕ್ಷೆಗೆ ಬೇಕಾದಷ್ಟನ್ನು ಮಾತ್ರ ಅಭ್ಯಾಸ ಮಾಡುವುದರ ಮೂಲಕ ಉತ್ತಮ ಅಂಕಗಳನ್ನು ಪಡೆಯಬಹುದು ಎನ್ನುವ ತಂತ್ರಗಳನ್ನು ವಿದ್ಯಾರ್ಥಿಗಳಿಗೆ ನೀಡಲಾಗುತ್ತಿದೆ. ಇದರಿಂದಾಗಿ ಬಾಲ್ಯ, ತಾರುಣ್ಯಗಳಲ್ಲಿ ಯಾವುದೇ ವಿಷಯದ ಬಗ್ಗೆ ಅಭಿರುಚಿಯನ್ನು ಬೆಳೆಸದ ಶಿಕ್ಷಣ ಶಿಕ್ಷೆಯ ರೂಪವನ್ನು ತಾಳುತ್ತದೆ. ಈ ಸ್ಥಿತಿಯಲ್ಲಿ ಸಾವಿರಕ್ಕೆ ಹತ್ತು ಮಂದಿಯಾದರೂ ತಾವು ಪಡೆದ ಶಿಕ್ಷಣದ ದೆಸೆಯಿಂದ ಜ್ಞಾನಿಗಳಾಗುವುದು ದುಸ್ತರವಾಗುತ್ತಿದೆ. ಇದಕ್ಕೆ ಪರಿಹಾರ ಸೂಚಿಸುವ ಕಾರಂತರು ತಮ್ಮ 'ನಮ್ಮ ಪದ್ಧತಿಯ ಸಮಸ್ಯೆಗಳೂ, ಭವಿಷ್ಯವೂ' ಕೃತಿಯಲ್ಲಿ

> ನಿಜವಾದ ಕಲಿಕೆ ಎಂಬುದು ಉಪಯುಕ್ತವಾದ ಶಾಶ್ವತ ಪ್ರವೃತ್ತಿ. ಅದರಿಂದ ಬುದ್ಧಿಪೂರ್ವಕವಾದ ಕ್ರಿಯೆ ನಡೆಯುತ್ತದೆ. ಮುಂದಿನ ಕಲಿಕೆಗೆ ನೆರವಾಗುತ್ತದೆ. ಅದು ಕಲಿತವನ ಸ್ವಂತ ಅನುಭವದಿಂದ, ಪ್ರೇರಿತವಾಗುವ ಅವಶ್ಯಕತೆಗಳಿಂದ ಮತ್ತು ಆಸಕ್ತಿಗಳ ದೆಸೆಯಿಂದ ಮೂಡಬೇಕು. ಕಲಿಯುವ ವಿಷಯ ಕಲಿಯುವಾತನಿಗೆ ಬೇಕೆನಿಸಿದಾಗ ಮಾತ್ರವೇ ಅದು ಅರ್ಥಬದ್ಧವಾದ ಕಲಿಕೆ ಎನಿಸೀತು. ಅದು ಅವನ ಉಪಯೋಗಕ್ಕೆ ದೊರೆಯುವಂತಿರಬೇಕು. ಅದರಿಂದ ಆಸಕ್ತಿ ಹೆಚ್ಚುವಂತಿರಬೇಕು ; ಅದು ಅವನಿಗೆ ಅರ್ಥವಾಗುವಂತಿರಬೇಕು; ಹಾಗಾಗಿ ಆ ಕಲಿಕೆಯಿಂದ ಅವನಿಗೆ ಸಂತೋಷ ಲಭಿಸುವಂತಿರಬೇಕು ಎನ್ನುತ್ತಾರೆ.[೧೫]

ಇನ್ನು ಕಲಿಸುವವರ ಬಗ್ಗೆ ಹೇಳುವ ಕಾರಂತರು ಹೆಚ್ಚಿನ ಮಂದಿ ಉಪಾಧ್ಯಾಯರು ಒಂದಷ್ಟು ಸಂಗತಿಗಳನ್ನು ಕಂಠಪಾಠ ಮಾಡಿಸಿ, ನಿರ್ದಿಷ್ಟಪಡಿಸಿದ ಅಂಕಗಳನ್ನು ಪಡೆದುಕೊಂಡರೆ ಸಾಕು ಎನ್ನುವ ಸ್ಥಿತಿಯಲ್ಲಿದ್ದಾರೆ ಎನ್ನುತ್ತಾರೆ. ಇವತ್ತಿನ ನಮ್ಮ ವ್ಯವಸ್ಥೆಯಲ್ಲಿಯೂ ಇದಕ್ಕಿಂತ ಭಿನ್ನವಾದ ವಾತಾವರಣವೇನೂ ಸೃಷ್ಟಿಯಾಗಿಲ್ಲ. ಇದೆಲ್ಲದರಿಂದಾಗಿ ಶಿಕ್ಷಣ ಕ್ರಮ, ಕರಿಕ್ಯುಲಂ, ಪಠ್ಯಪುಸ್ತಕಗಳು, ಪರೀಕ್ಷೆಗಳು, ಪರೀಕ್ಷಾ ಅವಧಿಯನ್ನು ಮುಂದೂಡಲು ಚಳವಳಿಗಳು, ಮಾರ್ಕ್ಸ್‌ಗಾಗಿ ಹೋರಾಟಗಳು ನಡೆಯುವುದನ್ನು ಗಮನಿಸಬಹುದಾಗಿದೆ. ಕಾರಂತರು ಗುರುತಿಸುವಂತೆ ವಿದ್ಯಾಸಂಸ್ಥೆಗಳಿಗೆ ಬರುವ ಬಹುಸಂಖ್ಯಾತರು ಜ್ಞಾನದ ತೃಷೆಯಿಂದ ಬರುತಿಲ್ಲ; ಓದು ಅವರಿಗೆ ಸಂತೋಷದ ಸಂಗತಿಯಲ್ಲ ಎಂಬುದು ಸ್ಪಷ್ಟವಾಗುತ್ತದೆ.

ವಿದ್ಯಾರ್ಥಿಗಳು ಬಯಸುವ ನೌಕರಿಗಳನ್ನು ನೀವು ಕೊಡುವಿರಾದರೆ, ಈ ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳಿಂದ ಬಹು ದೂರದಲ್ಲಿ ನಿಲ್ಲುತ್ತೇವೆ ಎಂಬ ಭರವಸೆಯನ್ನು ಅವರು ನಿಮಗೆ ನೀಡುತ್ತಾರೆ ಎನ್ನುವ ಕಟು ಸತ್ಯ ಇಂದಿನ ಶಿಕ್ಷಣ ಕ್ಷೇತ್ರದ ಬಗ್ಗೆ, ಶಿಕ್ಷಣ ಪದ್ಧತಿಯ ಬಗ್ಗೆ ಚರ್ಚಿಸಬೇಕಾದ ಅನಿವಾರ್ಯವನ್ನು ಸೃಷ್ಟಿಸುತ್ತದೆ. ದೇಶಾದ್ಯಂತ ಇಂದು

ನೂರಾರು ವಿಶ್ವವಿದ್ಯಾಲಯಗಳಿಂದ ಹೊರ ಬರುತ್ತಿರುವ ಲಕ್ಷಾಂತರ ಪದವೀಧರರು ಮುಂದೆ ಯಾವ ಬಗೆಯಲ್ಲಿ ತಮ್ಮ ಬದುಕಿನಲ್ಲಿ ತಾವು ಕಲಿತ ಶಿಕ್ಷಣವನ್ನು ಸಮರ್ಪಕವಾಗಿ ದುಡಿಸಿಕೊಳ್ಳುತ್ತಿದ್ದಾರೆ ಎಂಬುದು ಯಕ್ಷ ಪ್ರಶ್ನೆಯಾಗಿದೆ. ಇದನ್ನೆಲ್ಲ ಗಮನಿಸಿರುವ ಕಾರಂತರು 'ಪುಸ್ತಕಗಳನ್ನು ಕೈಯಲ್ಲಿ ಹಿಡಿದೆ ಹತ್ತು ಹನ್ನೆರಡು ವರ್ಷ ಕಳೆದವರು ಸಹ ತಾವು ಓದಿ ಕಲಿತ ಶಾಸ್ತ್ರಗಳ ವಿಷಯದಲ್ಲಿ ಯಾವುದಾದರೂ ಪುಸ್ತಕಗಳನ್ನು ಓದುತ್ತಿದ್ದಾರೆಯೆ? ಇಂದು ಪ್ರತಿಯೊಂದು ಜ್ಞಾನ ಕ್ಷೇತ್ರದಲ್ಲಿ ನಡೆಯುತ್ತಿರುವ ಸಂಶೋಧನೆಗಳಲ್ಲಿ, ಅಪಾರವಾದ ಬೆಳವಣಿಗೆಯನ್ನು ಕಾಣುತ್ತಿದ್ದೇವೆ. ಅಂಥ ಪ್ರಗತಿಯನ್ನ ಕುರಿತ ಕುತೂಹಲ, ಎಲ್ಲ ವಿಷಯಗಳಲ್ಲೂ ಬೇಡ. ನಾವು ಐಚ್ಛಿಕವಾಗಿ ಆರಿಸಿಕೊಂಡ ಕ್ಷೇತ್ರದ ವಿದ್ಯಾಪಾರಂಗತರಲ್ಲಿ ಶೇಕಡಾ ಎಷ್ಟು ಮಂದಿ ಅಂಥ ಕ್ಷೇತ್ರಗಳಲ್ಲಿ ತೃಷೆ, ಕುತೂಹಲ, ಸಂಪರ್ಕ ಇರಿಸಿಕೊಂಡದ್ದು ಕಾಣಿಸುತ್ತದೆ' ಎಂದು ಪ್ರಶ್ನಿಸುತ್ತಾರೆ. ವಸಾಹತು ಶಿಕ್ಷಣದ ಪರಿಣಾಮವಾಗಿ ಶಿಕ್ಷಣದ ಕಲಿಕಾ ಕ್ರಮ, ಶಿಕ್ಷಣದ ಮೌಲ್ಯ, ಶಿಕ್ಷಣದ ಪ್ರಯೋಜನಗಳೆಲ್ಲವೂ ಭಾರತೀಯ ಪರಿಸರದಲ್ಲಿ ಅಪಮೌಲ್ಯಗೊಂಡಿರುವುದನ್ನು ತಮ್ಮ ವೈಚಾರಿಕ ಬರಹಗಳಲ್ಲಿ ಗುರುತಿಸಿರುವ ಕಾರಂತರು ತಮ್ಮ ಅನೇಕ ಸೃಜನಶೀಲ ಕೃತಿಗಳಲ್ಲೂ ಹಲವು ಪಾತ್ರಗಳ ಮೂಲಕ ಅದರ ಪರಿಣಾಮಗಳನ್ನು ಕಟ್ಟಿಕೊಟ್ಟಿದ್ದಾರೆ.

ಇಪ್ಪತ್ತನೇ ಶತಮಾನದ ಆರಂಭ ಭಾರತದ ರಾಜಕೀಯ ಹಾಗೂ ಸಾಂಸ್ಕೃತಿಕ ಚರಿತ್ರೆಯಲ್ಲಿ ಸಂಕ್ರಮಣ ಕಾಲ. ರಾಜಕೀಯವಾಗಿ ದೇಶಕ್ಕೆ ಸ್ವಾತಂತ್ರ್ಯ ಬೇಕೆಂಬ ಹೋರಾಟ ತೀವ್ರವಾಗಿತ್ತು. ಇಂಗ್ಲಿಷ್ ಭಾಷೆ ಮತ್ತು ಸಂಸ್ಕೃತಿ ಭಾರತೀಯ ಸಾಂಪ್ರದಾಯಿಕ ಮನಸುಗಳಲ್ಲಿ ಸಂಚಲನ ಮೂಡಿಸಿತ್ತು. ಕರ್ನಾಟಕದ ಈಗಿನ ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳು ೧೭೯೯ ರಲ್ಲಿ ಟಿಪ್ಪುವಿನ ಪತನದ ಅನಂತರ ಮದ್ರಾಸ್ ರೆಸಿಡೆನ್ಸಿಯ ಆಡಳಿತಕ್ಕೆ ಒಳಪಟ್ಟ ಮೊದಲ ಜಿಲ್ಲೆಗಳಾಗಿದ್ದವು. ೧೮೩೪ ರಲ್ಲಿಯೇ 'ಬಾಸೆಲ್ ಮಿಷನ್' ಶಿಕ್ಷಣ, ಧರ್ಮ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ತನ್ನ ಚಟುವಟಿಕೆಗಳನ್ನು ಆರಂಭಿಸಿತ್ತು. ಇದಾದ ನೂರು ವರ್ಷಗಳಲ್ಲಿ ಕರಾವಳಿ ಪ್ರಾಂತ್ಯದಲ್ಲಾದ ವಸಾಹತು ಆಡಳಿತ ಹಾಗೂ ಶಿಕ್ಷಣದ ಪರಿಣಾಮಗಳನ್ನು ಕಾರಂತರು ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅವರ 'ಮರಳಿ ಮಣ್ಣಿಗೆ', 'ಬೆಟ್ಟದ ಜೀವ', 'ಸರಸಮ್ಮನ ಸಮಾಧಿ', 'ಮೂಕಜ್ಜಿಯ ಕನಸುಗಳು' ಕಾದಂಬರಿಗಳಲ್ಲಿ ಶಿಕ್ಷಣವನ್ನು ಕುರಿತ ಅವರ ಆಲೋಚನೆಗಳು ಪಾತ್ರಗಳಾಗಿ ಮೈದಳೆದಿರುವುದನ್ನು ನಿರ್ವಚಿಸಲಾಗಿದೆ.

ಕನ್ನಡ ಕಾದಂಬರಿ ಜಗತ್ತು ನಿಖರವಾದ ರೂಪ ತಾಳುತ್ತಿದ್ದ ಸಂದರ್ಭದಲ್ಲಿ ಅದನ್ನು ತಮ್ಮ ಸಾಹಿತ್ಯಾಭಿವ್ಯಕ್ತಿಯ ಪ್ರಖರ ಮಾಧ್ಯಮವಾಗಿ ಬಳಸಿಕೊಂಡ ಕಾರಂತರು ಅನೇಕ ಕಾದಂಬರಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಮರಳಿ ಮಣ್ಣಿಗೆ' ಕಾರಂತರಿಗೆ ಹೆಚ್ಚಿನ ಮಾನ್ಯತೆಯನ್ನು ತಂದುಕೊಟ್ಟ ಕೃತಿಯಾಗಿದೆ. ಈ 'ಮರಳಿ ಮಣ್ಣಿಗೆ' ಕಾದಂಬರಿಯ ಹಿನ್ನೆಲೆಯನ್ನು ಕಾರಂತರು ಹೀಗೆ ವಿವರಿಸಿದ್ದಾರೆ:

> ಎರಡನೆಯ ತಲೆಮಾರಿನಲ್ಲಿ, ಜನಕ್ಕೆ ಇಂಗ್ಲಿಷ್ ವಿದ್ಯಾಭ್ಯಾಸದ ಗಾಳಿ ಬೀಸುತ್ತದೆ. ಒಂದು ಗುಂಪು ಹಳ್ಳಿಯನ್ನು ಬಿಟ್ಟು, ಪರವೂರುಗಳನ್ನು ಸೇರಿ, ಹೋಟೆಲುಗಳನ್ನು ನಡೆಯಿಸಿ, ಊರಿಗೆ ಹಣ ತರತೊಡಗುತ್ತದೆ. ಇನ್ನೊಂದು ಕಡೆ, ಲಚ್ಚನಂತಹ ವ್ಯಕ್ತಿಗಳು ಪೇಟೆಯ ಮೋಹಕ್ಕೆ ಬಲಿಬಿದ್ದು, ಹೊಸ ಆವರಣದಲ್ಲಿ ತಲೆಕೆಡಿಸಿಕೊಳ್ಳುತ್ತಾರೆ. ಮೂರನೆಯ ತಲೆಮಾರಿನಲ್ಲಿ ಜನಕ್ಕೆ ಇಂಗ್ಲಿಷ್ ವಿದ್ಯಾಭ್ಯಾಸ ತೀರ ಸಾಮಾನ್ಯವಾಗುತ್ತದೆ. ನಿರುದ್ಯೋಗದ ಪ್ರಶ್ನೆ ಬೆಳೆಯುತ್ತದೆ, ದೇಶದಲ್ಲಿ ಅಶಾಂತಿ ತಲೆದೋರುತ್ತದೆ[೧೬]

ಕರಾವಳಿಯ ಬ್ರಾಹ್ಮಣ ಕುಟುಂಬದ ಮೂರು ತಲೆಮಾರುಗಳ ಕತೆಯನ್ನು ಹೇಳುತ್ತಾ ಕಾರಂತರು ವಸಾಹತು ಶಿಕ್ಷಣದ ಪರಿಣಾಮಗಳನ್ನು ಕುರಿತು ಚರ್ಚಿಸಿದ್ದಾರೆ. ತಮ್ಮ ಮಗನಿಗೆ ವೈದಿಕ ವೃತ್ತಿಗೆ ಬದಲಾಗಿ ಇಂಗ್ಲಿಷ್ ಶಿಕ್ಷಣ ಕೊಡಿಸಬೇಕೆಂಬ ರಾಮ ಐತಾಳರ ಅಭಿಲಾಷೆಯ ಫಲವಾಗಿ ಬಿ ಎಲ್ ಓದುವ ಲಚ್ಚ ನಗರದ ಮೋಹಕ್ಕೆ ಸಿಕ್ಕಿ ಬದುಕನ್ನು ನಾಶಮಾಡಿಕೊಳ್ಳುತ್ತಾನೆ. ಲಚ್ಚನ ಮಗ ರಾಮ ವಿದ್ಯಾವಂತನಾದರೂ ತನಗೆ ತಕ್ಕುದಾದ ಕೆಲಸ ಸಿಗದೆ ಪರಿತಪಿಸುತ್ತಾನೆ. ಬೆಂಗಳೂರು, ಮೈಸೂರು, ಮದ್ರಾಸ್, ಬಾಂಬೆ ಎಲ್ಲಿಯೂ ನೆಲೆ ಸಿಗದೆ ಕೋಡಿಯಾಲಕ್ಕೆ ಬಂದು ನೆಲೆಸುತ್ತಾನೆ. ಐತಾಳರ ತಂಗಿ ಸರಸ್ವತಿಗೆ, ಲಚ್ಚನಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸುವುದು ಜಾತಿ ಕೆಡಿಸಿಕೊಂಡಂತೆ. ಮಠದ ಶಂಕರ ಐಗಳು ಇಂಗ್ಲಿಷ್ ಶಾಲೆ ಎಲ್ಲ ಜಾತಿಯ ಹುಡುಗರಿಗು ಅವಕಾಶ ಕೊಟ್ಟು ಸನಾತನ ಧರ್ಮದ ಪಾವಿತ್ರ್ಯತೆಗೆ ಭಂಗ ತರುತ್ತದೆ ಎಂದು ಪರಿತಪಿಸುತ್ತಾರೆ. ಹೀಗೆ ಶಂಕರ ಐಗಳು, ಸರಸ್ವತಿ, 'ಸರಸಮ್ಮನ ಸಮಾಧಿ' ಕಾದಂಬರಿಯ ಅಣ್ಣಪ್ಪ ಕಮ್ತಿಯ ತಾಯಿ, 'ಮೂಕಜ್ಜಿಯ ಕನಸುಗಳು' ಕೃತಿಯ ಸೀತೆ ಈ ಪಾತ್ರಗಳಿಗೆ ಇಂಗ್ಲಿಷ್ ಶಿಕ್ಷಣವು ವಿದ್ಯಾಭ್ಯಾಸದ ಕ್ರಮ ಮಾತ್ರವಾಗಿರದೆ ಹಿಂದೂ ಧರ್ಮದ ವಿರೋಧಿಯಂತೆ ಕಾಣಿಸುತ್ತದೆ.

ವಸಾಹತು ಶಿಕ್ಷಣ ಉಂಟುಮಾಡಿದ ಪರಿಣಾಮಗಳಲ್ಲಿ ವರ್ಣವ್ಯವಸ್ಥೆಯ ಪಲ್ಲಟ ಮೊದಲನೆಯದು. ಸಮಾಜದ ಎಲ್ಲ ವರ್ಗದ ಜನರಿಗು ಶಿಕ್ಷಣ ದೊರೆಯುವುದಕ್ಕೆ ಇದು ನಾಂದಿಯಾಯಿತು. ಮಠದ ಕಲಿಕೆಗೆ ಪರ್ಯಾಯವಾಗಿ ರೂಪುಗೊಂಡ ಶಾಲೆಗಳು ಭಾರತೀಯ ಸಮಾಜದ ಸಾಂಪ್ರದಾಯಿಕ ಚೌಕಟ್ಟನ್ನು ಛಿದ್ರಮಾಡಿದವು. ಈ ಬಗೆಯ ಆಧುನಿಕತೆ, ನವೀನ ರೀತಿಯ ಶಿಕ್ಷಣ ಲಚ್ಚನಂತಹವರ ಬದುಕಿಗೆ ಎರವಾಗುತ್ತದೆ.

> ಸರ್ಕಾರದವರು ಇದೇ ರೀತಿ ಇನ್ನು ಹತ್ತು ವರ್ಷ ಶಾಲೆ ನಡೆಸಿದ್ದಾದರೆ ನಾಳೆ ನೇಗಿಲು ನೊಗ ಹಿಡಿಯಲಿಕ್ಕೆ ಕೆಳಗಿನವರು ಯಾರ್‍ಯಾರು ಬರಲಾರರು ಆಮೇಲೆ ಬ್ರಾಹ್ಮಣರೆ ಹೂಡಲಿಕ್ಕೆ ಹೊರಟರಾಯಿತು[೧೭]

ಶಂಕರ ಐಗಳ ಈ ಮಾತು ವಸಾಹತು ಶಿಕ್ಷಣದ ಬಗೆಗಿನ ಆತಂಕವನ್ನು ತಿಳಿಸುತ್ತದೆ. ತಮ್ಮ ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸಬೇಕು, ಅದರಿಂದ ಸಮಾಜದಲ್ಲಿ

ಗೌರವ ಹೆಚ್ಚಾಗುತ್ತದೆ. ಅವರು ವಕೀಲರಾಗಿಯೊ, ತಹಶೀಲ್ದಾರರಾಗಿಯೊ ರಾಶಿ ರಾಶಿ ಹಣವನ್ನು ಸಂಪಾದಿಸುತ್ತಾರೆ ಎನ್ನುವ ಕನವರಿಕೆಯಲ್ಲಿ ತೊಡಗಿದ್ದವರು ಐಗಳ ಮಠವನ್ನು ತಿರಸ್ಕರಿಸಿ ಇಂಗ್ಲಿಷ್ ಶಾಲೆಗೆ ಆಕರ್ಷಿತರಾಗುತ್ತಾರೆ. 'ಮರಳಿ ಮಣ್ಣಿಗೆ' ಕಾದಂಬರಿಯ ರಾಮ ಐತಾಳರು, ಮಾದಪ್ಪಯ್ಯ, 'ಬೆಟ್ಟದ ಜೀವ'ದ ಗೋಪಾಲಯ್ಯ ಇಂಥ ಮೋಹಕ್ಕೆ ತುತ್ತಾದವರು. ಮಗನನ್ನು ಶಾಲೆಗೆ ಕಳುಹಿಸುವ ಐತಾಳರಿಗೆ ಶಾಲೆಯ ಬೆಂಚು, ಕುರ್ಚಿ, ಬೋರ್ಡ್‌ಗಳನ್ನು ಕಂಡು ತಮ್ಮ ಮಗ ಇಲ್ಲಿ ಓದಿದ್ದೇ ಆದರೆ ಮುನಿಸಿಪಿಯನ್ನು ಪೂರೈಸುತ್ತಾನೆಂಬ ಭರವಸೆ ಹುಟ್ಟುತ್ತದೆ. ಇದರಿಂದಾಗಿ ಐಗಳಿಂದ 'ಮಗನನ್ನು ಶಾಲೆಗೆ ಸೇರಿಸಿ ಜಾತಿ ಕೆಡಿಸಿಕೊಂಡರು' ಎಂಬ ಅಪವಾದವನ್ನು ಕೇಳಬೇಕಾಗುತ್ತದೆ. ತಮ್ಮ ಮಗನಿಗೆ ವೈದಿಕ ವೃತ್ತಿಗೆ ಬದಲಾಗಿ ಇಂಗ್ಲಿಷ್ ಶಿಕ್ಷಣ ಕೊಡಿಸಬೇಕೆಂಬ ರಾಮಐತಾಳರ ಅಭಿಲಾಷೆಯ ಫಲವಾಗಿ ಬಿ ಎಲ್ ಓದುವ ಲಚ್ಚ ನಗರದ ಮೋಹಕ್ಕೆ ಸಿಕ್ಕಿ ಬದುಕನ್ನು ನಾಶಮಾಡಿಕೊಳ್ಳುತ್ತಾನೆ. ಹೀಗೆ ಬದಲಾದ ಕಾಲಮಾನಗಳಲ್ಲಿನ ಇಂಗ್ಲಿಷ್ ಶಿಕ್ಷಣದ ಪರಿಣಾಮಗಳನ್ನು ಚಿತ್ರಿಸಲಾಗಿದೆ.

➢ **ವಸಾಹತು ಶಿಕ್ಷಣದ ನಿರಾಕರಣೆ**

ಈ ಕಾದಂಬರಿಗಳಲ್ಲಿ ಬರುವ ಬಹುತೇಕ ಸ್ತ್ರೀ ಪಾತ್ರಗಳು ಇಂಗ್ಲಿಷ್ ಕಲಿಯುವುದನ್ನು ನಿರಾಕರಿಸುತ್ತವೆ. 'ಸರಸಮ್ಮನ ಸಮಾಧಿ'ಯ ಅಣ್ಣಪ್ಪ ಕಮ್ತಿಯ ತಾಯಿ, 'ಮೂಕಜ್ಜಿಯ ಕನಸುಗಳು' ಕೃತಿಯ ಸೀತೆ, 'ಮರಳಿ ಮಣ್ಣಿಗೆ'ಯ ಸರಸ್ವತಿ ಇವರೆಲ್ಲರಿಗೆ ಇಂಗ್ಲಿಷ್ ಕಲಿಯುವುದು ಸಂಪ್ರದಾಯವನ್ನು ಮೀರಿದಂತೆ, ಹಣ ಪೋಲು ಮಾಡಿದಂತೆ, ಜಾತಿ ಕೆಡಿಸಿಕೊಂಡಂತೆ ಎಂಬ ನಂಬಿಕೆಯನ್ನುಳ್ಳವರಾಗಿದ್ದಾರೆ.

> ನಿನ್ನ ಈ ಬೀಸಣಿಗೆಯೊಟ್ಟಿಗೆ ಕೂತು ಇಂಗ್ಲಿಷ್ ಪೇಪರ್ ಓದು. ಅಂಗಡಿಯನ್ನು ಹುಲಿ ತಿನ್ನಲಿ. ಆ ಮೇಲೆ ಏನಾದೀತೆಂದು ನೋಡಿಕೊಳ್ಳುವ, ಇಂಗ್ಲಿಷ್ ಓದಿಯೆ ದೇವಯ್ಯ ಪ್ರಭು (ಸುನಾಲಿನಿಯ ತಂದೆ) ದಿವಾಳಿ ಎದ್ದದ್ದು[೧೮]

ಎನ್ನುವ ಅಣ್ಣಪ್ಪ ಕಮ್ತಿಯ ತಾಯಿಯ ಮಾತುಗಳು, ಭಾರತೀಯ ಸಂಪ್ರದಾಯಕತೆಯ ವಿರುದ್ಧ ನಿಂತ ವಸಾಹತುಶಾಹಿಯ ಸಂಘರ್ಷವನ್ನು ಅನಾವರಣಗೊಳಿಸುತ್ತದೆ. 'ಸರಸಮ್ಮನ ಸಮಾಧಿ'ಯ ಅಣ್ಣಪ್ಪ ಕಮ್ತಿ, ತಾನು ಓದಿಕೊಂಡಿರುವ ಹೆಣ್ಣನ್ನು ಮದುವೆಯಾಗಿದ್ದೇನೆ ಎನ್ನುವ ಮನೋವೇದನೆಯಿಂದ ತೊಳಲುತ್ತಾನೆ. ಸುನಾಲಿನಿಗೆ ತನ್ನ ಓದು, ತನ್ನ ದಾಂಪತ್ಯ ಬದುಕಿನ ವಿರಸಕ್ಕೆ ಕಾರಣವಾದುದರ ಬಗ್ಗೆ ವ್ಯಥೆ ಇದೆ. ನಾಗವೇಣಿಗೆ ತನ್ನನ್ನು ಮದುವೆಯಾಗುವ ಗಂಡು ಇಂಗ್ಲಿಷ್ ಓದಿದ್ದಾನೆ ಎಂಬುದು ತಿಳಿದು ಭಯವಾಗುತ್ತದೆ. 'ಮೂಕಜ್ಜಿಯ ಕನಸುಗಳು' ಕೃತಿಯ ಸೀತೆ ತನ್ನ ಮೈದುನ ನಾರಾಯಣನ ಹೆಂಡತಿ, ಓದಿನಿಂದಾಗಿಯೆ ಲಜ್ಜೆಗೇಡಿಯಾಗಿರುವುದು ಎಂದು ನಿರ್ಧರಿಸುತ್ತಾಳೆ. ಈ ಎಲ್ಲ

ಪಾತ್ರಗಳು ಇಂಗ್ಲಿಷ್ ಶಿಕ್ಷಣದ ಬಗ್ಗೆ ಭಯ, ಆತಂಕ, ತಿರಸ್ಕಾರದ ಭಾವನೆಗಳನ್ನು ತಳೆಯುತ್ತವೆ. ಇದು ಆರಂಭದಲ್ಲಿ ಕರ್ನಾಟಕದ ಕರಾವಳಿ ಪ್ರಾಂತ್ಯದ ಒಂದು ವರ್ಗದ ಜನ ಇಂಗ್ಲಿಷ್ ಶಿಕ್ಷಣಕ್ಕೆ ತೋರಿಸಿದ ಪ್ರತಿಕ್ರಿಯೆಯಾಗಿ ಕಂಡುಬರುತ್ತದೆ.

➢ **ವಸಾಹತು ಶಿಕ್ಷಣ ಪದ್ಧತಿಯ ಬಗೆಗಿನ ಜಿಜ್ಞಾಸೆ**

ಕಾರಂತರು ತಮ್ಮ ಆತ್ಮಕತೆಯಲ್ಲಿ ತಾನು ಶಾಲೆಯಲ್ಲಿ ಕಲಿತದ್ದಕ್ಕಿಂತ ಅನುಭವದಲ್ಲಿ ಕಲಿತದ್ದೆ ಹೆಚ್ಚು ಎಂದು ಹೇಳಿಕೊಂಡಿದ್ದಾರೆ. ಪರೀಕ್ಷೆಗಳೆಂಬ ಕಂದಕಗಳು ವಿದ್ಯಾರ್ಥಿಗಳ ನೆನಪಿನ ಶಕ್ತಿಯನ್ನಷ್ಟೆ ಅಳೆಯಬಲ್ಲವು ಎಂಬ ನಿಲುವು ತಾಳಿದ್ದಾರೆ. ಇದರಿಂದಾಗಿ ಹಿರಿಯರು ಸಂಗ್ರಹಿಸಿಟ್ಟಿರುವ ಜ್ಞಾನ ಭಂಡಾರವನ್ನು ತುರುಕುವ ಪ್ರಯತ್ನ ಮಾಡಿ ವಿದ್ಯಾರ್ಥಿಗಳನ್ನು ಜುಗುಪ್ಸೆಗೊಳಿಸುತ್ತಿದ್ದೇವೆ ಎನ್ನುತ್ತಾರೆ.

> ನಾನು ಓದಿಕೊಂಡು ಪರೀಕ್ಷೆ ಪಾಸಾದುದು ಮಾಮೂಲಿ ಕ್ರಮಗಳಿಂದ, ಜ್ಞಾಪಕ ಶಕ್ತಿ ಸ್ವಲ್ಪ ಗಟ್ಟಿಯಾಗಿ ಇದ್ದುದರಿಂದ – ಬೇಕಾದ್ದಿರಲಿ, ಬೇಡವಾದ್ದಿರಲಿ ಓದಿದುದರಲ್ಲಿ ಹತ್ತರಲ್ಲಿ ಐದರಷ್ಟು ನನ್ನ ತಲೆಯಲ್ಲಿ ಉಳಿದುಕೊಳ್ಳುತ್ತದೆ. ಹೀಗಾಗಿ ಪರೀಕ್ಷೆಯಲ್ಲಿ ಪಾಸಾಗುವುದರಲ್ಲಿ ಕಷ್ಟ ಕಾಣಿಸಲಿಲ್ಲ[೧೯]

'ಮೂಕಜ್ಜಿಯ ಕನಸುಗಳು' ಕೃತಿಯ ಸುಬ್ಬರಾಯನ ಪಾತ್ರವು ಕೂಡ ಇದೇ ಬಗೆಯ ಮನಃಸ್ಥಿತಿಯನ್ನು ಹೊಂದಿದೆ. ಶಿಕ್ಷಣ ಕಲಿಯುವಾತನ ಮನಸ್ಸನ್ನು ಅರಳುವಂತೆ ಮಾಡಿ ಅವನ ಬುದ್ಧಿಶಕ್ತಿಯನ್ನು ಪ್ರಚೋದಿಸಿ ಆತ ತನ್ನ ಪರಿಸರದೊಂದಿಗೆ ಹೊಂದಿಕೊಳ್ಳಬಲ್ಲ ಸಾಮರ್ಥ್ಯವನ್ನು ನೀಡುವಲ್ಲಿ ಸೋಲುತ್ತಿದೆ. ಏಕೆಂದರೆ ಜ್ಞಾನದ ಮೋಹ ವಿದ್ಯಾರ್ಥಿಗಳಲ್ಲಿ ಹುಟ್ಟಬೇಕೆಂಬ ಅಭಿಲಾಷೆಯಿಂದ ಶಿಕ್ಷಣ ಕ್ರಮ ರೂಪುಗೊಂಡಿಲ್ಲ. ಹಾಗಾಗಿಯೆ ಸುಬ್ಬರಾಯನ ಗೆಳೆಯ ಜನಾರ್ಧನನಿಗೆ ತನ್ನ ಪರಿಸರದಲ್ಲಿ ಬದುಕುವುದು ಇಷ್ಟವಾಗದ ಸಂಗತಿ. ಓದಿದವರು ಹಳ್ಳಿಗಳಲ್ಲಿ ಇದ್ದುಕೊಂಡು ಗೊಡ್ಡರಲ್ಲಿ ಗೊಡ್ಡರಾಗಿರಬಾರದೆಂಬುದು ಆತನ ಸಿದ್ಧಾಂತ. ಮೂಡೂರಿನ ಹೊರಗಿನ ಜಗತ್ತಿಗೆ ಹಂಬಲಿಸುವ ಆತ, ತನ್ನ ಊರಿನ ಒಳ ಜಗತ್ತನ್ನು ಕಾಣಲಾರದವನಾಗಿರುತ್ತಾನೆ.

ವೇದ, ಉಪನಿಷತ್ತು, ಭಗವದ್ಗೀತೆ, ಯೋಗ, ವೈರಾಗ್ಯಗಳ ಬಗ್ಗೆ ಗಂಟೆಗಟ್ಟಲೆ ಮಾತನಾಡುವ 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಅನಂತರಾಯ ಸಲಿಂಗ ರತಿಯಲ್ಲಿ ತೊಡಗಿ ಗೇಲಿಗೊಳಗಾಗುತ್ತಾನೆ. 'ಬೆಟ್ಟದ ಜೀವ' ಕಾದಂಬರಿಯ ಗೋಪಾಲಯ್ಯನಿಗೆ ತನ್ನ ಮಗ ಇಂಗ್ಲಿಷ್ ಕಲಿತದ್ದೆ ಆತ ತಮ್ಮಿಂದ ದೂರವಾಗಲು ಕಾರಣವಿರಬಹುದಾ? ಎಂಬ ಅನುಮಾನ ಮೂಡುತ್ತದೆ. ಹೀಗೆ ಕಾದಂಬರಿಯಲ್ಲಿ ಹಲವು ಪಾತ್ರಗಳು ವಸಾಹತು ಶಿಕ್ಷಣದಿಂದ ಉಂಟಾಗುತ್ತಿರುವ ಪರಿಣಾಮಗಳನ್ನು ಕುರಿತು ಚರ್ಚಿಸುತ್ತವೆ.

ಏನು ಅವನಿಗೆ ಓದು ಬರಹ ಅತಿಯಾಗಿ ಹೀಗೆಲ್ಲ ಆದನೋ ಅಥವಾ ಅದು ಸಹವಾಸದ ದೋಷವೊ? ಅಂತು ಇವರು ಈ ಮೂಲೆಯಲ್ಲಿ ಮನುಷ್ಯರಿಲ್ಲದ ಸಂದಿನಲ್ಲಿದ್ದುಕೊಂಡು ಅವನದೇ ತಪಸ್ಸಿನಲ್ಲಿ ದಿನ ಬೆಳಗು ಮಾಡುತ್ತಿದ್ದಾರೆ. ಅವನಿಗೆ ಯಾಕೋ ಈ ಊರೇ ಹಿಡಿಸಲಿಲ್ಲ. ಪೇಟೆಯ ರುಚಿ ಹಿಡಿದವರಿಗೆ ಹಾಗೆಯೆ ಎಂದು ನಮ್ಮವರು ಹೇಳುತ್ತಾರೆ[೨೦]

ಎನ್ನುವ 'ಬೆಟ್ಟದಜೀವ'ದ ಶಂಕರಮ್ಮನ ಮಾತುಗಳು ಅಕ್ಷರ ಕಲಿತು ತಮ್ಮಿಂದ ಅಜ್ಞಾತವಾಗಿ ಉಳಿದ ಮಗ ಶಂಭುವಿನ ವರ್ತನೆಯನ್ನು ವಿವರಿಸುತ್ತವೆ. 'ಮರಳಿ ಮಣ್ಣಿಗೆ' ಕಾದಂಬರಿಯ ಲಚ್ಚ, 'ಸರಸಮ್ಮನ ಸಮಾಧಿ'ಯ ಜನ್ನ ಓದು ಕಲಿತು ಹಳ್ಳಿ ಬಿಟ್ಟು ಪಟ್ಟಣದ ಬದುಕನ್ನರಸಿಕೊಂಡು ಹೊರಟವರು. ಇವರೆಲ್ಲ ತಮ್ಮ ಮೂಲ ನೆಲೆಯಿಂದ ಬಿಡಿಸಿಕೊಂಡು ಬಂದರೂ ಹೊಸ ನೆಲದಲ್ಲಿ ಬೇರುಬಿಡಲಾರದ ಮನಃಸ್ಥಿತಿಯಲ್ಲಿ ತೊಳಲಾಡುತ್ತಾರೆ. 'ಮರಳಿ ಮಣ್ಣಿಗೆ' ಕಾದಂಬರಿಯ ಅಂತ್ಯದಲ್ಲಿ ಮೊಗೇರ ಚನ್ನ 'ನಮ್ಮ ಗಂಡು ಹ್ಯಾಂಗೆ ಓದುವುದಕ್ಕೆ? ಮನೆಯಲ್ಲಿ ಏನೇನು ಬರೆಯುವುದಿಲ್ಲ, ಓದುವುದಿಲ್ಲ. ಒಂದು ರುಜು ಹಾಕುವುದಕ್ಕೆ ಬಂದರೆ ಸಾಕು. ನನಗೆ ಬರಹವಿಲ್ಲದೆ ಎಷ್ಟು ಪಚೀತಿ ನೋಡಿ' ಎಂದಾಗ ಐತಾಳರ ಮೊಮ್ಮಗ ರಾಮ 'ಅದೇ ಬಾರದಿದ್ದರೆ ಒಳ್ಳೆಯದು ಚೆನ್ನ, ನನ್ನಪ್ಪನಿಗೆ ಅದು ಬಂದೇ ಅಜ್ಜನ ಆಸ್ತಿ ಉಡುಪಿಯ ಸಾಹುಕಾರನಿಗಾಯಿತು' ಎನ್ನುತ್ತಾನೆ. ಹೀಗೆ ಕಾರಂತರು ತಮ್ಮ ಕಾದಂಬರಿಗಳಲ್ಲಿ ಇಂಗ್ಲಿಷ್ ಶಿಕ್ಷಣದ ಸ್ವೀಕಾರ ಹಾಗೂ ನಿರಾಕರಣೆಯನ್ನು ಮೂರು ತಲೆಮಾರುಗಳ ಮೂಲಕ ಗ್ರಹಿಸಲೆತ್ನಿಸಿದ್ದಾರೆ; ವಿಶ್ಲೇಷಣೆಗೆ ಒಳಗು ಮಾಡಿದ್ದಾರೆ. ಈ ನಾಲ್ಕು ಕಾದಂಬರಿಗಳ ವಸ್ತು, ಸಂವಿಧಾನ, ಧೋರಣೆಗಳು ಒಂದಕ್ಕಿಂತ ಒಂದು ಭಿನ್ನವಾಗಿವೆ. ಕಾರಂತರ ಚಿಂತನೆಗಳನ್ನು ಗಮನಿಸಿದರೆ ಅವರಿಗೆ ಶಾಲೆಯ ಕಲಿಕೆಗಿಂತ ಬದುಕಿನ ಅನುಭವಗಳ ಕಲಿಕೆ ದೊಡ್ಡದು ಎನಿಸುತ್ತದೆ. ಇದನ್ನು ಅವರ ಕಾದಂಬರಿಯ ಮೂಕಜ್ಜಿ, ಗೋಪಾಲಯ್ಯ, ಸರಸ್ವತಿ, ನಾಗವೇಣಿ – ಈ ಬಗೆಯ ಪಾತ್ರಗಳು ನಿರೂಪಿಸುತ್ತವೆ.

➢ **ಕಾರಂತರ ಕಾದಂಬರಿಗಳು : ವಸಾಹತು ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆ**

'ಮರಳಿ ಮಣ್ಣಿಗೆ' ಕಾದಂಬರಿಯ ರಾಮ ಐತಾಳರಿಗೆ ತಮ್ಮ ಮಗನಿಗೆ ಯಾವ ಬಗೆಯ ಶಿಕ್ಷಣ ಕೊಡಿಸಬೇಕೆಂಬ ಜಿಜ್ಞಾಸೆ ಉಂಟಾಗುತ್ತದೆ. ತಮ್ಮ ಮಗನನ್ನು ಸರ್ಕಾರಿ ಶಾಲೆಗೆ ಕಳುಹಿಸುವುದರಿಂದ ಯಾವ ಬಗೆಯ ಪ್ರಯೋಜನವೂ ಆಗುವುದಿಲ್ಲ. ಅದರ ಬದಲಿಗೆ ಆತನಿಗೆ ಮನೆಯಲ್ಲಿಯೇ ಅಷ್ಟೋತ್ತರಗಳನ್ನು ಹೇಳಿಕೊಟ್ಟು ಉಪನಯನವಾದ ಅನಂತರ ತನ್ನೊಂದಿಗೆ ಕರೆದೊಯ್ದರೆ ಉಗ್ರ ವೈದಿಕನಾಗುತ್ತಾನೆ ಎನ್ನುವ ಆಲೋಚನೆ ಮಾಡುತ್ತಾರೆ. ಅದರ ಬೆನ್ನಲ್ಲೇ ತನ್ನ ಪರಿಚಯದ ವಾಸುದೇವ ಗುರಿಕಾರರ ಹಿರಿಯ ಮಗ ಕುಂದಾಪುರದಲ್ಲಿ ವಕೀಲಿ ವೃತ್ತಿಗೆ ಓದಿಕೊಂಡು ಬಂದಿದ್ದಾನೆ. ಆತನಲ್ಲಿಗೆ ತಮ್ಮ

ಊರಿನ ಕಕ್ಷಿದಾರರೆಲ್ಲರೂ ಇರುವೆಗಳಂತೆ ಸಾಲಾಗಿ ಹೋಗಿ ರೂಪಾಯಿಗಳನ್ನು ಸುರಿಯುತ್ತಿದ್ದಾರೆ ಎನ್ನುವ ಸಂಗತಿಯನ್ನು ಕೇಳಿರುತ್ತಾರೆ. ಅದು ನೆನಪಾಗುತ್ತಲೇ ರಾಮ ಐತಾಳಗೆ ತನ್ನ ಮಗ ಓದಿ ವಕೀಲನಾಗಬಾರದೇಕೆ? ಎನ್ನುವ ಆಲೋಚನೆ ಬರುತ್ತದೆ. ತನ್ನ ಮಗನು ಇಂಗ್ಲಿಷನ್ನು ಕಲಿತು ವಕೀಲನಾಗಿ ಊರಲ್ಲೆ ಯಾಕೆ ಹಣ ಸಂಪಾದಿಸಬಾರದು? ಎಂದು ತಮ್ಮಲ್ಲೆ ಪ್ರಶ್ನೆ ಮಾಡಿಕೊಂಡು ತಮ್ಮ ಮಗನಿಗೆ ಇಂಗ್ಲಿಷ್ ಶಾಲೆಯಲ್ಲಿ ಶಿಕ್ಷಣ ಕೊಡಿಸಲು ಮುಂದಾಗುತ್ತಾರೆ.

> ಸತ್ಯಭಾಮೆಯೊಂದಿಗೆ ಐತಾಳರು ನಮ್ಮ ಮಗ ವಕೀಲನಾಗಿದ್ದರೆ ಆಗುತ್ತಿತ್ತು. ತಹಸೀಲ್ದಾರನೋ, ಮಣೆಗಾರನೋ, ಸರ್ಕಾರದ ಯಾವುದಾದರೋ ನೌಕರನೋ ಆದರೆ ಸಾಕಿತ್ತು. ಆ ಕೆಲಸದ ಭರಾಮು ಈ ವೈದಿಕೆಗೆ ಬಂದೀತೆ' ಎಂಬ ಆಸೆ ತೋಡಿಕೊಂಡರು. ಆದ್ದರಿಂದ ಐಗಳ ಮಠವೂ ಬೇಡ. ಅಧ್ಯಯನವೂ ಬೇಡ– ಎಂದು ತೀರ್ಮಾನವಾಯಿತು. ಹಾಗಿದ್ದರೆ, ಸರ್ಕಾರಿ ಸಾಲೆಯೇ ಸರಿ– ಎಂದು ತೀರ್ಮಾನಿಸಿದರಂತೆ[೨೧]

ವಸಾಹತು ಶಿಕ್ಷಣ ಭಾರತೀಯ ಪರಿಸರದಲ್ಲಿ ತಂದ ಮೊದಲ ಪರಿಣಾಮವೆಂದರೆ ಅದು ಇಲ್ಲಿನ ಸಾಂಪ್ರದಾಯಿಕ ಶಿಕ್ಷಣಕ್ಕೆ ಸ್ಪರ್ಧೆಯನ್ನು ಒಡ್ಡಿತು. ಕೆಲವೇ ವರ್ಗದವರಿಗೆ ಮೀಸಲಾಗಿದ್ದ ಕಲಿಯುವ ಹಕ್ಕನ್ನು ಎಲ್ಲ ವರ್ಗದವರಿಗೆ ದೊರಕುವಂತೆ ಮಾಡಿತು. ಪೂಜೆ, ಪುನಸ್ಕಾರಗಳಿಗೆ ಮೀಸಲಾಗಿದ್ದ ಶಿಕ್ಷಣ ಕ್ರಮವನ್ನು ಬದಲಾಯಿಸಿತು. ಇಂತಹ ಬದಲಾವಣೆ ಪಾರಂಪರಿಕ ನಂಬಿಕೆಗಳ ಮನಸ್ಸುಗಳಿಗೆ ತಳಮಳವನ್ನು ತಂದಿತು. ಶಿವರಾಮ ಕಾರಂತರು ಈ ಸಂಗತಿಗಳನ್ನು ಹಾಗೂ ಪಾತ್ರಗಳ ಮನೋಭಾವದ ಹಿಂದಿರುವ ಕಠೋರತೆಯನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

> ಐಗಳ ಉಪನ್ಯಾಸವನ್ನು ಕೇಳಿದ ಸರಸೋತಿಗೆ ಬಹಳ ಸಮಯದ ತನಕ ಸರಕಾರಿ ಶಾಲೆಗಳನ್ನು ಕುರಿತಾದ ಜಿಗುಪ್ಸೆಯೇ ಮನಸ್ಸಿನಲ್ಲಿ ಸುಳಿದಾಡುತ್ತಿತ್ತು. ಬ್ರಾಹ್ಮಣರ ಕುಲದಲ್ಲಿ ಹುಟ್ಟಿ, ಸರ್ಕಾರಿ ಶಾಲೆಯಲ್ಲಿ ಪಾಠ ಹೇಳಿಸಿಕೊಳ್ಳುವುದೇ ಎಂಬ ಚಿಂತೆ ಬಲವಾಯಿತು.[೨೨]

ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿ ಸರ್ಕಾರಿ ಶಾಲೆಯಲ್ಲಿ ಕಲಿಯುವುದು ಆ ಕಾಲಕ್ಕೆ ಕೆಡಕು ಎನ್ನುವ ಭಾವನೆ ಬಲವಾಗಿ ಬೇರೂರಿತ್ತು. ಮಿಷನರಿಗಳು ಕ್ರೈಸ್ತ ಧರ್ಮ ಪ್ರಸಾರವನ್ನು ಆರಂಭಿಸಿದ್ದವು. ಅದೇ ಮಿಷನರಿಗಳು ಶಾಲೆಯನ್ನು ಆರಂಭಿಸಿದಾಗ ಅದು ಕೂಡ ಮತಾಂತರದ ಮತ್ತೊಂದು ತಂತ್ರವಾಗಿ ಗೋಚರವಾಯಿತು. ಇದರಿಂದಾಗಿ ಪರಂಪರಾಗತವಾಗಿ ಬಂದ ಸಾಂಪ್ರದಾಯಿಕ ಮೌಲ್ಯಗಳನ್ನು ನಂಬಿಕೊಂಡಿದ್ದವರ ನಂಬಿಕೆಗೆ ಪೆಟ್ಟು ಬಿದ್ದಿತು. ಇಂಗ್ಲಿಷ್ ಶಿಕ್ಷಣದ ಫಲವಾಗಿ ರೂಪುಗೊಂಡ ಶಾಲೆಗಳು ಸಾಂಪ್ರದಾಯಿಕ ಶಿಕ್ಷಣ ಕೇಂದ್ರಗಳಾದ ಮಠಗಳ ಶಿಕ್ಷಣದ ವೈಫಲ್ಯವನ್ನು ತೋರಿಸಿದವು.

ಈ ಕಾಲಮಾನದಲ್ಲಿ ಸಂಪ್ರದಾಯವಾದಿಗಳು ಹಾಗೂ ಆಧುನಿಕತೆಯನ್ನು ಬೆಂಬಲಿಸುವವರ ನಡುವೆ ಸೈದ್ಧಾಂತಿಕ ತಿಕ್ಕಾಟಗಳು ಉಂಟಾದವು.

> ಈ ಇಂಗ್ಲಿಷು ಭ್ರಾಂತು, ವೈದಿಕರಾದ ನಿಮ್ಮನ್ನು ಬಿಡಲಿಲ್ಲವೇ? ಐತಾಳರೇ? ನೀವು ಮನೆಯಲ್ಲಿ ಅವನಿಗೆ ಅಧ್ಯಯನ ಮಾಡಿಸಿದರೂ ಚಿಂತೆಯಿಲ್ಲ, ಬದಲು ಯಾವಾವ ಜಾತಿಯವರು ಸೇರುವ ಸರ್ಕಾರಿ ಶಾಲೆಗೆ ಮಗನನ್ನು ಕಳುಹಿಸುವುದಲ್ಲ. ಅಲ್ಲಿ ಯಾವ ಸುಟ್ಟ ಜಾತಿಯವರು ಬಂದರೂ ಬಂದರೇ, ಈಗ ನಮ್ಮ ಕಾರ್ಕಡದ ಶಾಲೆಯನ್ನು ನೋಡಬಾರದೇ? ಒಬ್ಬ ಮಾಸ್ತರ ಬಂದಿದ್ದಾನಂತೆ–ಸೇರೆಗಾರನೋ ಸೆಟ್ಟಿಗಾರನೋ! ಬ್ರಾಹ್ಮಣರ ಮಕ್ಕಳು ಅವನ ಬೆತ್ತದ ಪೆಟ್ಟನ್ನು ತಿನ್ನಬೇಕು– ಎಂದರೆ ಎಲ್ಲಿಂದೆಲ್ಲಿಗೆ ಬಂದಿತು ಕಾಲಗತಿ! ಎಂದರು[೨೩]

ಶಂಕರ ಐತಾಳರ ಪಾತ್ರದ ಮುಖೇನ ಕಾರಂತರು ಹೇಳಿಸುವ ಮೇಲಿನ ಮಾತುಗಳು ಬ್ರಿಟಿಷ್ ಶಿಕ್ಷಣ ಕ್ರಮ ಮತ್ತು ಸಾಂಪ್ರದಾಯಿಕ ಶಿಕ್ಷಣದ ನಡುವಿನ ಸಂಘರ್ಷವನ್ನು ನಿರೂಪಿಸಿವೆ. ಇಷ್ಟೆಲ್ಲದರ ನಡುವೆಯೂ ರಾಮ ಐತಾಳರು ತಮ್ಮ ಮಗ ಇಂಗ್ಲಿಷ್ ಓದಿ ವಕೀಲನಾಗಿ ಹೆಚ್ಚು ಹಣ ಸಂಪಾದಿಸಲಿ ಎನ್ನುವ ಆಕಾಂಕ್ಷೆಯಿಂದ ಶಾಲೆಗೆ ಸೇರಿಸಿದರು. ಇದರಿಂದಾಗಿ ಶಂಕರ ಐತಾಳರಿಂದ 'ಐತಾಳರು ವೈದಿಕ ಉದ್ಯೋಗವನ್ನು ಬಿಡುವುದೊಂದೇ ಉಳಿದಿತ್ತು. ಶಿವಳ್ಳಿ ಜಾತಿಯಿಂದ ಹುಡುಗಿ ತಂದಾಯಿತು. ಜಾತಿ ಕೆಡಿಸುವ ಶಾಲೆಗೆ ಮಗನನ್ನು ಕಳುಹಿಸಿಯಾಯಿತು' ಎನ್ನುವ ಆಪಾದನೆಯನ್ನು ಕೇಳಬೇಕಾಯಿತು. ಇದಕ್ಕೆಲ್ಲಾ ಕಾರಣ ಆ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿದ್ದ ಇಂಗ್ಲಿಷ್ ಶಿಕ್ಷಣದ ಬಗೆಗಿನ ಲಾಭದ ಆಕಾಂಕ್ಷೆ.

ಆ ಕಾಲದಲ್ಲಿ ಕುಂದಾಪುರ, ಉಡುಪಿ, ಮಂಗಳೂರುಗಳಲ್ಲಿ ಇಂಗ್ಲಿಷ್ ಶಾಲೆಗಳು ದೊಡ್ಡವರ ಮಕ್ಕಳನ್ನು ಸೆಳೆಯುತ್ತಿದ್ದವು. ಎಲ್ಲರೂ ವಕೀಲಿ ತಹಶೀಲಿಕೆಗಳ ಭ್ರಮೆಯಿಂದ ಅಲ್ಲಿಗೆ ಹೋಗಬೇಕೆಂದು ತಮ್ಮ ಮಕ್ಕಳ ವಿಷಯವಾಗಿ ಹಂಬಲಪಡುತ್ತಿದ್ದರು. ರಾಮ ಐತಾಳರ ತಂಗಿ ಸರಸ್ವತಿಗೆ ತನ್ನ ಅಣ್ಣನ ಮಗ ಇಂಗ್ಲಿಷು ಕಲಿತು ಹಾಳಾಗುತ್ತಾನೆ ಎನ್ನುವ ತಳಮಳ. ಅಲ್ಲದೇ ಪುರಾತನವಾಗಿ ಬಂದಿದ್ದ ವೈದಿಕ ಕಾರ್ಯವನ್ನು ಮುನ್ನಡೆಸುವವರು ಯಾರು? ಎನ್ನುವ ಚಿಂತೆ ಕಾಡುತ್ತಿತ್ತು. ಆದರೆ ಲಚ್ಚನ ಬಗ್ಗೆ ದಾಸಪ್ಪಯ್ಯ ಮಾಸ್ತರರು ಹೇಳುವುದು ಭಿನ್ನವಾಗಿದೆ. ಲಚ್ಚನ ಬುದ್ಧಿವಂತಿಕೆಯನ್ನು ಶಾಂತಿ, ಹೋಮ ಮಾಡಿ ಮುಗಿಸುವುದು ಸರಿಯಲ್ಲ ಎನ್ನುತ್ತಾರೆ.

> ಈಗಿನ ಕಾಲದಲ್ಲಿ ಒಂದು ವಕೀಲನೋ, ತಹಶೀಲ್ದಾರನೋ ಆದರೆ ಬರುವ ಡೌಲು, ಗೌರವ ಇನ್ನು ಯಾವುದಕ್ಕೆ ಇದೆ? ಏನಿಲ್ಲ–ಹತ್ತು ವರ್ಷಗಳಲ್ಲಿ ಇಂಗ್ಲಿಷ್ ಕಲಿತದ್ದಾದರೆ ಕನಿಷ್ಠ ನಾಲ್ಕು ಕೋರ್ಜಿ ಹುಟ್ಟುವಳಿ

ಮಾಡಬಹುದು. ಇನ್ನಿನ್ನು ಇದೆ ವೈದಿಕ ವೃತ್ತಿಯ ಬಾಲ ಹಿಡಿದರೆ ಮರ್ಯಾದೆಯೂ ಬರಕ್ಕಿಲ್ಲ[೨೪]

ಹೊಸ ಬಗೆಯ ಶಿಕ್ಷಣ ಕ್ರಮದಿಂದ ಒಟ್ಟು ಬದುಕಿನ ಸ್ವರೂಪವೇ ಬದಲಾವಣೆ ಹೊಂದುತ್ತದೆ ಎಂದು ನಂಬಲಾಗಿತ್ತು. ಇದರ ನಡುವೆಯೇ ಹೊಸತನವನ್ನು ಸರಾಗವಾಗಿ ಸ್ವೀಕರಿಸಲು ಸಾಧ್ಯವಾಗದ ಉಭಯ ಸಂಕಟವೂ ನಿರ್ಮಾಣವಾಯಿತು. ಶೀನಮಯ್ಯರ ಐದನೇ ಮಗ ಲಚ್ಚನ ಓರಿಗೆಯ 'ಒರಟಮಯ್ಯ' ಲಚ್ಚನ ವಿದ್ಯಾಭ್ಯಾಸದ ಕ್ರಮವನ್ನು ಅನುಮಾನದಿಂದ ನೋಡುತ್ತಾನೆ. ಹೊಸಬಗೆಯ ಶಿಕ್ಷಣ ಕ್ರಮದ ಬಗ್ಗೆ ಒರಟನಲ್ಲಿ ಬೇರೆಯದೇ ಮನೋಭಾವ ಬೆಳೆದಿದೆ. ಆ ಮನೋಭಾವನೆಗೆ ಆತನ ಅಪ್ಪ ಮತ್ತು ಶಂಕರ ಐಗಳ ಮಾತುಗಳೇ ಆಧಾರವಾಗಿವೆ.

ಅಪ್ಪಯ್ಯನೇ ಹೇಳುತ್ತಾರೆ. ಮಂತ್ರ ಪಟ ಪಟ ಹೇಳುವ ಹಾಗೆ ಇಂಗ್ಲಿಷು ಅಷ್ಟು ಸುಲಭ ಅಲ್ಲವಂತೆ. ಯಾರೋ ಒಬ್ಬರಂತೆ, ವಕೀಲರಾಗಲು ಇಂಗ್ಲಿಷು ಕಲಿಯಲು ಹೋಗಿ ಹತ್ತು ಹತ್ತು ಸಾರಿ ಕಲಿತು, ಫೈಲು ಆಗಿ ಈಗ ಮನೆಗೆ ಬಂದು ಹೂಟೆ, ಸಾಗುವಳಿ ಮಾಡಿಕೊಂಡಿದ್ದಾರೆ[೨೫]

ಈ ಮಾತುಗಳು ಮುಂದುವರೆದು ಸರ್ಕಾರಿ ಶಾಲೆಗೆ ಹೋದವರಿಗೆ ಜಾತಿಯೇ ಇಲ್ಲವಂತೆ. ನಮ್ಮ ಐಗಳು ಹೇಳುತ್ತಾರೆ. ಅಲ್ಲಿ ಎಲ್ಲ ಕೆಳ ಜಾತಿಯವರೂ ಒಟ್ಟು ಸೇರುತ್ತಾರಂತೆ ಎಂದು ಪ್ರಶ್ನಿಸುವ ಜಿಜ್ಞಾಸೆಯ ಹಂತಕ್ಕೆ ಬೆಳೆದಿದೆ. ಲಕ್ಷ್ಮಿನಾರಾಯಣ ಅಂದರೆ ಲಚ್ಚನ ವಿಷಯದಲ್ಲಿ ರಾಮ ಐತಾಳರ ಕನಸು ನನಸಾಗುವುದಿಲ್ಲ. ಮಗನಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸಿದರೆ ಅವನು ಸರ್ಕಾರದ ಉನ್ನತ ಹುದ್ದೆಯನ್ನು ಪಡೆಯುತ್ತಾನೆ ಅದಲ್ಲದೆ ಅಪಾರವಾದ ಹಣವನ್ನು ಸಂಪಾದನೆ ಮಾಡುತ್ತಾನೆ, ಎನ್ನುವ ಎಣಿಕೆಗಳೆಲ್ಲ ಸುಳ್ಳಾದವು. ಶೀನಮಯ್ಯ 'ಇಂಗ್ಲಿಷ್ ಐತಾಳಾ ಮನೆಯ ಹೆಣ್ಣು ತರಲು ನನಗೆ ಮರಳೇ' ಎಂದು ಅಪಹಾಸ್ಯ ಮಾಡುತ್ತಾನೆ. ಲಚ್ಚನ ವಿಷಯವಾಗಿ ರಾಮ ಐತಾಳರು 'ಈ ಇಂಗ್ಲಿಷ್ ಕಲಿತ ಮಕ್ಕಳು ಇಷ್ಟು ಬೆಪ್ಪಾಗುತ್ತಾರೆ' ಎಂಬುದು ನನಗೆ ಗೊತ್ತಿರಲ್ಲಿಲ್ಲ ಎಂದು ಪಶ್ಚಾತ್ತಾಪ ಪಡುತ್ತಾರೆ.

ಹೆಚ್ಚಿನ ಕಲಿಕೆಗೆಂದು ನಗರಕ್ಕೆ ಹೋಗುವ ಲಚ್ಚ ನಗರದ ಎಲ್ಲ ಬಗೆಯ ಮೋಹಕ್ಕೆ ಒಳಗಾಗುತ್ತಾನೆ. ದುಶ್ಚಟಗಳಿಗೆ ದಾಸನಾಗುತ್ತಾನೆ. ತನ್ನ ತಂದೆ, ಹೆಂಡತಿ, ಮಗುವಿನ ಬಗ್ಗೆ ಯಾವ ಬಗೆಯಲ್ಲೂ ಚಿಂತಿಸುವುದಿಲ್ಲ. ತನ್ನ ಲೋಲುಪ ಜೀವನಕ್ಕೆ ತನ್ನ ತಂದೆ ಸಂಪಾದಿಸಿದ ಆಸ್ತಿಯನ್ನು ಕರಗಿಸುತ್ತಾನೆ.

ಕೋಡಿಯಾಲದಂತಹ ಊರಿಗೆ ದಾಪುಗಾಲಾಕಿ ಬಂದ ಆಧುನಿಕತೆಯು ಉಂಟುಮಾಡಿದ ತಲ್ಲಣ ಅನೇಕ ಬಗೆಯದು. ವಸಾಹತುಶಾಹಿ ಎಲ್ಲವನ್ನು ಪರೀಕ್ಷೆಗೆ ಒಡ್ಡಿತು. ಲಚ್ಚನ ಬದುಕಿನ ದುರ್ಬರತೆಗೆ ಆತನ ನಗರ ಬದುಕಿನ ಮೋಹ

ಕಾರಣವಾಗುತ್ತದೆ. ಪಿತ್ರಾರ್ಜಿತವಾಗಿ ಬಂದಂತಹ ಹಾಗೂ ತನ್ನ ತಂದೆ ವೈದಿಕ ವೃತ್ತಿಯಿಂದ ಮಾಡಿದ ಸಂಪಾದನೆಯ ಬಹು ಭಾಗವನ್ನು ತನ್ನ ಚಟಗಳಿಗೆ ಖಾಲಿ ಮಾಡುತ್ತಾನೆ. ಇದರಿಂದಾಗಿ ಇಂಗ್ಲಿಷ್ ಕಲಿತ ನನ್ನ ಮಗ ಅತಿ ಹೆಚ್ಚು ಸಂಪಾದಿಸುತ್ತಾನೆ ಎನ್ನುವ ಐತಾಳರ ಕನಸು ಭಗ್ನಗೊಳ್ಳುತ್ತದೆ.

ಲಚ್ಚನ ದುರಾವಸ್ಥೆಗೆ ಅವನ ಓದೇ ಕಾರಣವಾಗುವುದು ಶಿಕ್ಷಣ ಕೊಡಿಸುವುದು ಅಪಾಯಕಾರಿ ಎಂಬ ಸೂಚನೆಯಾಗಿದೆ. ಇಂತಹ ಸಂದರ್ಭಗಳಲ್ಲಿ ಎಲ್ಲಿ ತಪ್ಪಾಗಬಹುದು ಎಂಬುದನ್ನು ಹಾಗೂ ಶಿಕ್ಷಣ ನೀಡುವ ಸಂಸ್ಥೆಗಳು ಮತ್ತು ಅಲ್ಲಿ ರೂಪುಗೊಳ್ಳುತ್ತಿರುವ ವಿದ್ಯಾರ್ಥಿವರ್ಗ ಶಿಕ್ಷಿತರಾಗಿ ಹೊರಬರುತ್ತಿರುವಾಗ ಅವರು ಕಲಿತ ಶಿಕ್ಷಣ ಅವರ ಬದುಕಿನಲ್ಲಿ ಹೇಗೆ ನೆರವಾಗಬಹುದು ಎಂಬುದರ ಬಗ್ಗೆ ಕಾರಂತರು ಚಿಂತನೆ ನಡೆಸಿದ್ದಾರೆ.

> ತಾವು ಗಳಿಸಿದ ಪದವಿಯ ಬಲದಿಂದ ಎಂಥ ಕಸುಬನ್ನು ಮಾಡಬಲ್ಲೇವು – ಎಂಬ ತಮ್ಮ ತಿಳಿವಿಗೆ ಒಳಗಾಗದ ತರುಣ ವರ್ಗವೇ ನಮ್ಮ ಶಿಕ್ಷಣ ಸಂಸ್ಥೆಗಳಿಂದ ಹೊರಕ್ಕೆ ಬರುತ್ತಿದ್ದಾರೆ. ವಿದ್ಯಾರ್ಥಿಗಳಿಗೆ ತಂತಮ್ಮ ಹೊಟ್ಟೆಯ ಪ್ರಶ್ನೆಯನ್ನು ಇಂಥದೇ ಬಗೆಯಲ್ಲಿ ಕಳೆಯಬಹುದು ಎಂಬ ಧೈರ್ಯ ಅವರಲಿಲ್ಲ. ಅವರಿಗೆ ಕಾಣಿಸುತ್ತಿರುವ ಹೊಟ್ಟೆಯ ಪಾಡಿನ ಜೀವನದರ್ಶನ ಕುರ್ಚಿಯ ಮೇಲೆ ಕುಳಿತು, ನಾಲ್ಕಾರು ತಾಸು ಕಾಗದದ ಮೇಲೆ ಪೆನ್ನನ್ನು ಆಚೀಚೆ ಓಡಿಸಿ ಗೌರವದಿಂದ ಎಂದರೆ ಆದಷ್ಟು ಕಡಿಮೆ ಶ್ರಮದಿಂದ ಬಾಳ್ವೆಯನ್ನು ಸಾಗಿಸಬಹುದೆಂಬ ಭಾವುಕ ಆದರ್ಶ, ನಮ್ಮ ಶಿಕ್ಷಣ ಸಂಸ್ಥೆಗಳು ಈ ತನಕ ಸಾಧಿಸಿಕೊಂಡು ಬಂದದ್ದು ಅಂಥ ಆದರ್ಶವನ್ನೇ[೨೬]

ಯಾವುದಾದರೂ ಒಂದು ವಿಷಯವೂ ನಮ್ಮ ಭಾವಜೀವಕ್ಕಾಗಲೀ, ಬುದ್ಧಿಜೀವಕ್ಕಾಗಲೀ ಆಹಾರ ಒದಗಿಸುತ್ತಿಲ್ಲ ಎಂಬುದಕ್ಕೆ ನಮ್ಮ ಶಿಕ್ಷಣ ಸಂಸ್ಥೆಗಳು ಕುರುಡುದಾರಿ ಹಿಡಿದಿರುವುದೇ ಪ್ರಬಲವಾದ ಕಾರಣ ಎನ್ನುತ್ತಾರೆ.

ಲಚ್ಚನ ಮಗ ರಾಮ ಶಿಕ್ಷಿತನಾಗುತ್ತಾನೆ. ಆದರೆ ಅವನ ಕಾಲಕ್ಕೆ ಇಂಗ್ಲಿಷ್ ಶಿಕ್ಷಣದ ಭ್ರಮೆ ಕಳಚಿ ಹೋಗಿರುತ್ತದೆ. ರಾಮನಿಗೆ ತಕ್ಕುದಾದ ಕೆಲಸ ದೊರೆಯದೆ ಮತ್ತೆ ಆತ ಕೋಡಿಯಾಲಕ್ಕೆ ಬಂದು ನೆಲೆಸುತ್ತಾನೆ. ಇದು ಕಾನೂರಿನ ಹೂವಯ್ಯನನ್ನು ನೆನಪಿಸುತ್ತದೆ. 'ಮರಳಿ ಮಣ್ಣಿಗೆ' ಕಾದಂಬರಿಯ ರಾಮ ಐತಾಳರಂತೆ 'ಬೆಟ್ಟದ ಜೀವ' ಕಾದಂಬರಿಯ ಗೋಪಾಲಯ್ಯನು ತನ್ನ ಮಗನಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸಬೇಕೆಂದು ಹಂಬಲಿಸಿದನು. ಕಡಿದಾದ ಕಾಡು ಕಡಿದು ಹೊಸ ಬದುಕು ಕಟ್ಟಿಕೊಂಡ ಗೋಪಾಲಯ್ಯನಿಗೆ ತನ್ನ ಮಗ ಓದಿ ಬುದ್ಧಿವಂತನಾಗಿ ನನಗಿಂತಲು ಚೆನ್ನಾಗಿ ಬದುಕಲಿ ಎನ್ನುವ ಬಯಕೆ. ಈ ಕಥನ ನಡೆಯುವ ಕಾಲಕ್ಕೆ ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಕರಾವಳಿ ಪ್ರಾಂತ್ಯಗಳಲ್ಲಿ ಇಂಗ್ಲಿಷ್ ಶಿಕ್ಷಣ ಹೊಸ ಸಂಚಲನವನೇ ಮೂಡಿಸಿತ್ತು.

ಕಳೆದ ಯುದ್ಧವಾದ ಮೇಲೆ, ಅಡಿಕೆಗೆ ಒಳ್ಳೆಯ ಧಾರಣೆ ಬಂದಿತ್ತಲ್ಲ ಆಗ ನಮ್ಮ ಹವ್ಯಕರ ಕುಲಕ್ಕೆನೆ ಇಂಗ್ಲಿಷಿನ ಹುಚ್ಚು ಹಿಡಿಯಿತು. ಈ ಹುಡುಗ ಹುಟ್ಟಿದ್ದು ಅನಂತರ, ಊರು ಮನೆಯವರ ಮಕ್ಕಳು ಅದಾಗಲೇ ಇಂಗ್ಲಿಷು ಓದಲು ಪುತ್ತೂರು, ಮಂಗಳೂರುಗಳ ಕಡೆಗೆ ನೋಡುತ್ತಿದ್ದ ದಿನ. ಅಂತವರ ಮೇಲ್ಪಂಕ್ತಿ ನನಗು ನಾಟಿಕೊಂಡಿತು. ನಾನು ವಿಚಾರಗೆಟ್ಟು ನನ್ನ ಶಂಭುವನ್ನು ಇಂಗ್ಲಿಷು ಶಾಲೆ ಯೊಂದಕ್ಕೆ ಹಾಕಿದೆ.[೨೭]

ಇಂಗ್ಲಿಷ್ ಶಿಕ್ಷಣ ಪಡೆಯುವುದು ಜ್ಞಾನದ ಅರಿವನ್ನು ವಿಸ್ತರಿಸಲಿಕ್ಕೆ ಎನ್ನುವ ಚಿಂತನೆಗಿಂತ ಅಪಾರವಾದ ಹಣ ಸಂಪಾದನೆ ಮಾಡುವುದಕ್ಕೆ ಎನ್ನುವುದನ್ನು ಈ ಕಥಾನಕ ತಿಳಿಸುತ್ತದೆ. ಅಲ್ಲದೇ ಇಂಗ್ಲಿಷ್ ಕಲಿಸುವುದು ಮರ್ಯಾದೆ ಎನ್ನುವ ಅಭಿಪ್ರಾಯವು ಆ ಕಾಲಕ್ಕೆ ಇತ್ತು. 'ನಾನು ವಿಚಾರಗೆಟ್ಟು ನನ್ನ ಶಂಭುವನ್ನ ಇಂಗ್ಲಿಷ್ ಶಾಲೆಯೊಂದಕ್ಕೆ ಹಾಕಿದೆ' ಎನ್ನುವ ಗೋಪಾಲಯ್ಯನ ಮಾತುಗಳಲ್ಲಿ ಪಶ್ಚಾತ್ತಾಪವಿದೆ.

ಕಲಿಯಲು ಪೇಟೆಗೆ ಹೋದ ಶಂಭು ತನ್ನ ಮನೆಯಿಂದಲೇ ದೂರವಾದ. ಅವನು ಮನೆಗೆ ಹೋಗುವುದು ಕಡಿಮೆಯಾಯಿತು. ಅನಂತರ ಮನೆಗೆ ಹೋಗುವುದನ್ನೆ ನಿಲ್ಲಿಸಿದ. ಹೀಗೆ ನಗರ ಬದುಕಿನಲ್ಲಿ ಸೇರಿಕೊಂಡ ಶಂಭು ತನ್ನ ತಾಯಿ ತಂದೆಯನ್ನು ನೋಡಲು ಮನೆಗೆ ಬರುವುದನ್ನೇ ಬಿಟ್ಟ. ಅದರಿಂದಾಗಿ 'ಇಂಗ್ಲಿಷಿನ ಓದಿನಿಂದಲೇ' ತಮ್ಮ ಮಗ ಹೀಗಾದ ಎನ್ನುವುದು ಗೋಪಾಲಯ್ಯ ಶಂಕರಮ್ಮ ದಂಪತಿಗಳ ನಿಲುವು. ಒಂದೆಡೆ ಗೋಪಾಲಯ್ಯ ತನ್ನೊಳಗೆ ಅದಮ್ಯ ಆಸೆಯಿಂದಾಗಿ ಕಾಡು ಕಡಿದು ತೋಟ ಮಾಡಿಕೊಂಡು ಬದುಕಿದರು. ಓದಿದರೆ ತನ್ನ ಮಗ ತನ್ನಂತೆಯೇ ಬೇಸಾಯಗಾರ ಆಗುವುದಿಲ್ಲ ಎನ್ನುವ ತಿಳುವಳಿಕೆಯ ಆಚೆಗೂ ಮಗನಿಗೆ ಶಿಕ್ಷಣ ಕೊಡಿಸಬೇಕೆಂದು ಬಯಸಿದರು. ತಮ್ಮ ನಿರ್ಧಾರಕ್ಕೆ ಅವರು ಕೊಡುವ ಉತ್ತರದಲ್ಲಿ ಅವರ ಸಮುದಾಯ ಸೃಷ್ಟಿಸಿದ ಒತ್ತಡ ಯಾವ ಬಗೆಯದು ಎನ್ನುವುದನ್ನು ತಿಳಿಯಬಹುದು.

ಈಗ ಎಷ್ಟು ಜನ ಬ್ರಾಹ್ಮಣರ ಮಕ್ಕಳು ಇಂಗ್ಲಿಷನ್ನು ಓದಿ ಊರು ಬಿಟ್ಟಿಲ್ಲ! ಅವರೆಲ್ಲರು ತಿರುಗಿ ಗದ್ದೆ ಸಾಗುವಳಿಗೆ ಬಂದಾರೆಂದು ಆಸೆ ಮಾಡುವುದೇ? ನಮ್ಮ ಕಾಲಕ್ಕೆ ಆಸ್ತಿ ಜಮೀನುಗಳಿಗೆ ಒಂದು ಮರ್ಯಾದೆಯಿದ್ದಿತು, ಮಾಡಿದೆವು. ಈಗ ಇಂಗ್ಲಿಷಿಗೆ ಹೆಚ್ಚಿನ ಮರ್ಯಾದೆ, ಕಲಿಸಿದೆವು. ನಿಜ ಒಬ್ಬನೆ ಮಗನಿದ್ದಾಗ ನನ್ನಂತೆ ಅವನು ಬೇಸಾಯಕ್ಕಿರಲಿ, ಇಂಗ್ಲಿಷಿಗೆ ಕಳುಹಿಸಬಾರದ್ದಿತ್ತು ಎಂದು ಕಾಣುತ್ತದೆ ಒಮ್ಮೊಮ್ಮೆ.[೨೮]

ಎನ್ನುವ ಗೋಪಾಲಯ್ಯ ಓದಿ ಮಗ ತಿರುಗಿಬಾರದಿದ್ದಕ್ಕೆ ಚಿಂತೆಗೀಡಾಗುತ್ತಾರೆ.

ಲಚ್ಚನ ಪ್ರತೀಕದ ಮೂಲಕ ಕಾರಂತರು ಆಧುನಿಕತೆಯು ಕೆಡಕೆಂದು ಸೂಚಿಸುತ್ತಿದ್ದಾರೆಯೇ? ಇಲ್ಲ. ಅವನು ಆಧುನಿಕತೆಯ ಕೆಡುಕನ್ನು ಮಾತ್ರ

> ಪ್ರತಿನಿಧಿಸುತ್ತಾನೆ. ಆಧುನಿಕತೆ ವಿಕೃತವಲ್ಲ ಆದರೆ ಅದರಲ್ಲಿ ವಿಕೃತವಾದ ಅನೇಕ ಅಂಶಗಳಿವೆ. ಲಚ್ಚ ಅವುಗಳನ್ನು ಮಾತ್ರ ರೂಢಿಸಿಕೊಳ್ಳುತ್ತಾನೆ. ಒರಟಮಯ್ಯನೂ ಅಷ್ಟೇ. ಆದರೆ ಲಚ್ಚನ ಭಾವ ಸದಾಶಿವ ನಾಗವೇಣಿಯ ತಂಗಿಯ ಗಂಡ ಮಾಧವ ಆಧುನಿಕ ಶಿಕ್ಷಣದ ಉಪಯೋಗಗಳನ್ನು ಪಡೆದು ಗೌರವಯುತ ಜೀವನ ನಡೆಸುತ್ತಿದ್ದಾರೆ. ಶೀನಮಯ್ಯರ ಹಿರಿಯ ಮಕ್ಕಳೂ ಕೂಡಾ. ಇತ್ತ ಮಂದರ್ತಿಯಲ್ಲಿ ರಾಮ ಐತಾಳರ ಮಗಳು ಸುಬ್ಬಮ್ಮನ ಜೀವನ ಹೆಚ್ಚಿನ ಮಹತ್ವಾಕಾಂಕ್ಷೆಯಿಲ್ಲದೆ ಸಾಂಪ್ರದಾಯಿಕ ರೀತಿಯಲ್ಲಿ ಸಾಗುತ್ತದೆ. ಪರಂಪರಾಗತವಾದ ಜೀವನದಲ್ಲಿ ಪಾರೋತಿ, ಸರಸೋತಿ ಗಳಿಸಿದ್ದೇನು? ಆಧುನಿಕತೆಯ ಪ್ರಪಂಚವೊಂದರಲ್ಲಿ ಲಚ್ಚ ಕಳೆದುಕೊಂಡದ್ದೇನು? ಪ್ರಶ್ನೆಗಳು ಬಲು ಜಟಿಲ. ಸರಳ ಉತ್ತರಗಳಿಲ್ಲ.[೨೯]

ರಾಮ ಐತಾಳರ ಮಗ ಲಚ್ಚನಂತೆಯೆ ಶಂಭು ನಗರದ ಬದುಕಿನ ವ್ಯಾಮೋಹದಿಂದ ಬಿಡಿಸಿಕೊಳ್ಳುವುದೇ ಇಲ್ಲ. ತಮ್ಮ ಮಕ್ಕಳು ಓದುವುದರ ಮೂಲಕ ದೊಡ್ಡ ದೊಡ್ಡ ಹುದ್ದೆಗಳನ್ನು ಪಡೆಯಲಿ ಎಂಬ ಹಾರೈಕೆ ತಂದೆ ತಾಯಿಯರದು. ಹಾಗಾಗಿ ಅವರಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸುತ್ತಾರೆ. ಆದರೆ ಅವರ ಮಕ್ಕಳು ಅವರಿಂದ ದೂರವಾಗುತ್ತಾರೆ. ಇಂಗ್ಲಿಷ್ ಶಿಕ್ಷಣದಿಂದಾಗಿ ಹೀಗಾದರು ಎಂದು ಹೇಳುವುದಕ್ಕೆ ಸಾಧ್ಯವಿಲ್ಲವಾದರೂ ಅವರು ಹಾಗಾಗಲಿಕ್ಕೆ ಇಂಗ್ಲಿಷ್ ಶಿಕ್ಷಣ ಕ್ರಮವು ಪ್ರಭಾವಿಸಿರುವುದನ್ನು ಪಾತ್ರಗಳ ಮೂಲಕ ಕಾದಂಬರಿಕಾರರು ಚಿತ್ರಿಸಿದ್ದಾರೆ.

ದಾಂಪತ್ಯ ಜೀವನದ ವಿರಸ, ಅದಕ್ಕೆ ಕಾರಣವಾಗುವ ಸಂಗತಿಗಳು, ಗಂಡ–ಹೆಂಡತಿಯ ನಡುವಿನ ಸಾಮರಸ್ಯದ ಕೊರತೆಯಿಂದ ಉಂಟಾಗುವ ಮನೋಕ್ಲೇಷ ಮೊದಲಾದ ಸಂಗತಿಗಳು 'ಸರಸಮ್ಮನ ಸಮಾಧಿ' ಕಾದಂಬರಿಯಲ್ಲಿ ಚರ್ಚಿತವಾಗಿವೆ. ಈ ಚರ್ಚೆಗಳಲ್ಲಿ ಇಂಗ್ಲಿಷ್ ಶಿಕ್ಷಣ ಕ್ರಮದ ಬಗೆಗಿನ ಜಿಜ್ಞಾಸೆಯೂ ನಡೆದಿದೆ. ಕಾದಂಬರಿಯ ಅಣ್ಣಪ್ಪ ಕಮ್ತಿ ಮದುವೆಯಾದ ಸುನಾಲಿನಿಯು ಇಂಗ್ಲಿಷ್ ಶಿಕ್ಷಣ ಕಲಿತವಳು. ಈ ಸಂಗತಿ ಅವರಿಬ್ಬರ ನಡುವೆ ನಿರಂತರ ಸಂಘರ್ಷಕ್ಕೆ ಕಾರಣವಾಗುತ್ತದೆ. ಸುನಾಲಿನಿ ಅತ್ತೆಯಿಂದ ಮೂದಲಿಕೆಯ ಮಾತುಗಳನ್ನು ಕೇಳಬೇಕಾಗುತ್ತದೆ. ತನ್ನ ಮಗ ಹಾಳಾಗಲಿಕ್ಕೆ ಓದಿರುವ ಸೊಸೆಯನ್ನು ಮದುವೆಯಾದುದೇ ಕಾರಣ ಎನ್ನುವುದು ಅಣ್ಣಪ್ಪ ಕಮ್ತಿಯ ತಾಯಿಯ ನಂಬಿಕೆ.

> ಇಂಗ್ಲೀಷ್ ಓದಿಯೇ ದೇವಪ್ಪ ಪ್ರಭು ದಿವಾಳಿ ತೆಗೆದದ್ದು. ಅಲ್ಲವಾದರೆ ಬಂದರಿನಲ್ಲಿ ಲಕ್ಷಾಂತರ ರೂಪಾಯಿ ವ್ಯಾಪಾರ ಮಾಡುತ್ತಿದ್ದಳು. ಒಂದು ಸಾರಿ ಅಡಿಕೆ ಧಾರಣೆ ಇಳಿದರೆ ಮುಗಿದು ಹೋಗುತ್ತಾರೆಯೋ[೩೦]

ಎನ್ನುವ ಅಣ್ಣಪ್ಪ ಕಮ್ತಿಯ ತಾಯಿಯ ಮಾತುಗಳು ಆ ಕಾಲಕ್ಕೆ ಇಂಗ್ಲಿಷ್ ಕಲಿಯುವುದು ಮೋಜಿನ ಒಂದು ಭಾಗದಂತೆ ತೋರುತ್ತಿದ್ದುದನ್ನು ತಿಳಿಸುತ್ತವೆ.

ಸುನಾಲಿನಿ ತನ್ನ ಗಂಡನ ತಿಳಿವಳಿಕೆ ಕುರಿತು ಯೋಚಿಸುತ್ತಾಳೆ. ವ್ಯಾಪಾರದಲ್ಲಿ ನಿಷ್ಣಾತನಾದ ತನ್ನ ಗಂಡ ದಾಂಪತ್ಯ ಬದುಕಿನಲ್ಲಿ ವಿಫಲನಾದ ಬಗ್ಗೆ ಚಿಂತಿಸುತ್ತಾಳೆ. ಹಾಗೆ ಚಿಂತಿಸುವಾಗ ಯಾವ ಶಾಲೆ ದಾಂಪತ್ಯಕ್ಕೆ ಬೇಕಾದ ಜ್ಞಾನ ಕೊಡುತ್ತದೆ? ಎನ್ನುವ ಪ್ರಶ್ನೆಯನ್ನು ಕೇಳಿಕೊಳ್ಳುತ್ತಾಳೆ. ಕನ್ನಡದ ಆರಂಭದ ಕಾದಂಬರಿಗಳು ಸ್ತ್ರೀ ಶಿಕ್ಷಣ ಕುರಿತ ಚಿಂತನೆಯನ್ನು ಮಾಡಿವೆ. ಕಾರಂತರ ಕಾಲಕ್ಕೆ ಸ್ತ್ರೀ ಕಲಿಯುವುದರಿಂದ ಕೌಟುಂಬಿಕ, ವೈವಾಹಿಕ ಸಂಬಂಧಕ್ಕೆ ತೊಡಕಾಗುತ್ತದೆ ಎನ್ನುವ ಭಾವನೆ ಬೆಳೆದಿರುವುದು ಇದರಿಂದ ತಿಳಿಯುತ್ತದೆ.

ತಮ್ಮ ಇಡೀ ಬದುಕನ್ನು ಪ್ರಯೋಗಗಳಿಗೆ ಒಗ್ಗಿಸಿಕೊಂಡ ಕಾರಂತರು ವಿದ್ಯಾರ್ಥಿಗಳ ಭವಿಷ್ಯದ ಬಗ್ಗೆ ಬಹುವಾಗಿ ಚಿಂತಿಸಿದ್ದಾರೆ. ಒಂದೆಡೆ ಭಾರತದ ಪರಂಪರೆಯಲ್ಲಿ ಸಾಗಿ ಬಂದ ಶಿಕ್ಷಣ ಹಾಗೂ ಅದನ್ನು ಕಲಿಸುವ ಕ್ರಮ ಆಧುನಿಕ ಬದುಕಿನಲ್ಲಿ ನಿರುಪಯುಕ್ತವಾದುದು ಎಂದು ವಿವರಿಸುತ್ತಾರೆ. ಅದರಂತೆಯೇ ಆಧುನಿಕ ಕಾಲದಲ್ಲಿ ನೀಡುತ್ತಿರುವ ಶಿಕ್ಷಣ ಮತ್ತು ಅದರ ವ್ಯವಸ್ಥೆಯ ಬಗೆಗೂ ಚಿಕಿತ್ಸಕ ನೋಟ ಹರಿಸಿದ್ದಾರೆ. 'ವ್ಯಕ್ತಿಯಾದವನು ತಾನು ಮುಂದೆ ನಡೆಸಬೇಕಾದ ವೃತ್ತಿಗೂ ಅದೇ ವ್ಯಕ್ತಿಯ ಮನಃಪ್ರವೃತ್ತಿಗೂ, ಅವನು ಗಳಿಸಿಕೊಂಡ ಶಕ್ತಿಗೂ ಯಾವುದೇ ಸಂಬಂಧವಿಲ್ಲದೆ ಹೋದರೆ, ಶಿಕ್ಷಣ ಎಂಬುದರ ಉದ್ದೇಶವಾದರೂ ಏನು?' ಎಂದು ಪ್ರಶ್ನಿಸುತ್ತಾರೆ. ಈ ಪ್ರಶ್ನೆ ಸರ್ವಕಾಲಿನವಾದುದು. ಕಲಿತ ವಿದ್ಯೆಗೂ ವ್ಯಕ್ತಿ ರೂಢಿಸಿಕೊಂಡ ವೃತ್ತಿಗೂ ಸಂಬಂಧವಿರಬೇಕು. ಇಲ್ಲದಿದ್ದರೆ ಅದು ನಿಷ್ಪ್ರಯೋಜಕ ಎನಿಸುತ್ತದೆ. ಹಾಗಾಗಿ ಕಲಿಸುವ ಕ್ರಮದಲ್ಲಿ ಅಮೂಲಾಗ್ರ ಬದಲಾವಣೆಗಳಾಗಬೇಕೆಂಬ ನಿಲುವು ಕಾರಂತರದಾಗಿದೆ.

ಕಲಿತ ವಿದ್ಯೆಯು ಕಲಿತವನ ಬದುಕಿನಲ್ಲಿ ಪ್ರಯೋಜನಕ್ಕೆ ಬಾರದಿದ್ದರೆ ಅದನ್ನು ಕಲಿಯುವುದಕ್ಕಾಗಿ ವ್ಯಯಿಸಿದ ಆಯಸ್ಸು ವ್ಯರ್ಥ ಎನ್ನುವುದು ಕಾರಂತರ ನಿಲುವು. ಈ ಮಾತಿನ ಹಿನ್ನೆಲೆಯನ್ನು ಗಮನಿಸಿದರೆ ವಿದ್ಯೆಯನ್ನು ಕಲಿತವರು ಅದನ್ನು ತಮ್ಮ ಬದುಕಿನಲ್ಲಿ ಸಾರ್ಥಕಗೊಳಿಸಿಕೊಳ್ಳಬೇಕು.

> ಮನುಷ್ಯನ ದೇಹಶ್ರಮವನ್ನು ಕಡಿಮೆ ಮಾಡಿ, ಅವನ ಹಸಿವನ್ನು ಹಿಂಗಿಸುವುದರ ಜೊತೆಗೆ ವಿರಾಮವನ್ನು ಹೆಚ್ಚಿಸುವುದಕ್ಕೆ ಈ ಕಾಲದಲ್ಲಿ ನಾವು ಪಡೆದು ಬಂದಿರುವ ಜ್ಞಾನ, ತಂತ್ರಜ್ಞಾನ ವಿಫಲವಾಗಿದೆ. ಅವನ್ನೆಲ್ಲ ಹೇಗೆ ಬಳಸಿಕೊಳ್ಳಬಹುದು ಎಂದು ತೋರಿಸಿಕೊಡುವುದು ಶಿಕ್ಷಣದ ಪಾಲಿಗಿರುವ ಒಂದು ಕರ್ತವ್ಯ. ಅದರ ಜತೆಗೆ ಮಾನವನ ವ್ಯಕ್ತಿತ್ವವನ್ನು ಅರಳಿಸುವ ಇತರ ಕೆಲಸಗಳನ್ನು ಶಿಕ್ಷಣ ಮಾಡಬೇಡವೇನು?[೩೧]

ಎನ್ನುವ ಪ್ರಶ್ನೆ ಕಾರಂತರದು. ಅಂತೆಯೇ ವಿದ್ಯೆಯನ್ನು ಕಲಿಸುವವರು ಕಲಿಯುವವನ ಮನೋಧರ್ಮವನ್ನು ಗುರುತಿಸಿ ಕಲಿಸಬೇಕು. ಮುಂದುವರಿದು ಮನುಷ್ಯನ ಬದುಕನ್ನು ಸರಳಗೊಳಿಸುವುದು ಶಿಕ್ಷಣದ ಮುಖ್ಯ ಗುರಿ ಎನ್ನುತ್ತಾರೆ.

ಶಿಕ್ಷಣ ಮಾನವನಿಗೆ ಭೌತಿಕವಾಗಿ ಹಾಗೂ ಬೌದ್ಧಿಕವಾಗಿ ಉಪಯೋಗಕ್ಕೆ ಬರಬೇಕು. ಶಿಕ್ಷಣ ಕ್ರಮವನ್ನು ರೂಪಿಸುವವರು ಈ ಸಂಗತಿಗಳನ್ನು ಪರಿಗಣನೆಗೆ ತೆಗೆದುಕೊಳ್ಳಬೇಕು. ಕಲಿತ ಶಿಕ್ಷಣ ನಿಷ್ಪ್ರಯೋಜಕವಾಗದಂತೆ ತಡೆಯುವುದು ಆ ಶಿಕ್ಷಣ ಕ್ರಮವನ್ನು ರೂಪಿಸುವ ತಜ್ಞರ ಕೆಲಸವಾಗಿದೆ. ಹೀಗೆ ಶಿಕ್ಷಣದ ಉದ್ದೇಶದ ಈಡೇರಿಕೆಗೆ ಪೂರಕವಾಗಿರುವ ಎಲ್ಲ ಬಗೆಯ ಪರಿಕರಗಳು ಹಾಗೂ ಸಾಧನಗಳನ್ನು ಸಮರ್ಪಕವಾಗಿ ಬಳಸಬೇಕಾಗಿದೆ. ಆದರೆ ಈಗ ನೀಡುತ್ತಿರುವ ಶಿಕ್ಷಣ ಈ ಬಗೆಯ ಯಾವ ಆಶಯವನ್ನು ಈಡೇರಿಸುತ್ತಿಲ್ಲ ಎಂದು ಕಾರಂತರು ತಮ್ಮ ಬರಹಗಳಲ್ಲಿ ಕಳವಳ ವ್ಯಕ್ತಪಡಿಸಿದ್ದಾರೆ.

➢ **ಶಾಲಾ ಕಲಿಕೆ**

ಒಂದೆಡೆ ಭಾರತೀಯ ಪರಂಪರೆಯ ಶಿಕ್ಷಣ ಪದ್ಧತಿಯ ನಿರುಪಯುಕ್ತತೆಯನ್ನು ವಿವರಿಸುವ ಕಾರಂತರು ಆಧುನಿಕ ಶಿಕ್ಷಣ ಕ್ರಮದ ಭಾಗವಾಗಿ ರೂಪುಗೊಂಡ ಶಾಲಾ ಕಾಲೇಜುಗಳ ಶಿಕ್ಷಣ ವ್ಯವಸ್ಥೆ ಸೃಷ್ಟಿಸುತ್ತಿರುವ ಭ್ರಮಾಜಗತ್ತನ್ನು ಅನಾವರಣಗೊಳಿಸಿದ್ದಾರೆ. ಅದಕ್ಕಾಗಿ ತಮ್ಮದೇ ಶೈಕ್ಷಣಿಕ ಜೀವನವನ್ನು ನೆನಪಿಸಿಕೊಳ್ಳುವ ಕಾರಂತರು

> ನೂರರಲ್ಲಿ ಎಂಬತ್ತರಷ್ಟು ಪಿರಿಯಡ್ಡುಗಳಲ್ಲಿ ನಡೆದ ಪಾಠ ಪ್ರವಚನದ ಒಂದೇ ಒಂದು ವಸ್ತುವು ಇಂದು ನನ್ನ ನೆನಪಿನಲ್ಲಿಲ್ಲ. ಪ್ರಾಥಮಿಕ ಶಾಲೆಯಲ್ಲಿ ಐದು ವರ್ಷ, ಹೈಸ್ಕೂಲಿನಲ್ಲಿ ಎಂಟು ವರ್ಷ ಹೀಗೆ ಹದಿಮೂರು ವರ್ಷಗಳ ಅವಧಿಯಲ್ಲಿ ನಾನು ನಡೆಯಿಸಿದ ಕಲಿಕೆ ಅಜ್ಞಾತವಾಯಿತೇಕೆ? ಯಾವುದಾದರೂ ಬೃಹತ್ ಕಾರಣವಿಲ್ಲದೆ ಇಷ್ಟೊಂದು ಆಯುಷ್ಯ ಮುಂದೆ ಕೈಗೆ ಸಿಗದ ರೀತಿಯಲ್ಲಿ ಕಳಚಿ ಹೋಯಿತಲ್ಲ ಎಂಬುದನ್ನು ನೆನೆಯುವಾಗ, ನನಗೆ ಬಲು ಆಶ್ಚರ್ಯವಾಗುತ್ತದೆ.[೨]

ಕಾರಂತರ ಈ ಚಿಂತನೆಗಳು ಇಂದಿಗೂ ಪ್ರಸ್ತುತವೆನಿಸಿವೆ. ಶಾಲಾ ಕಲಿಕೆಯಲ್ಲಿನ ಅವಧಿ ಹಾಗೂ ಆ ಅವಧಿಯಲ್ಲಿ ಕಲಿತ ಶಿಕ್ಷಣ, ಮುಂದೆ ಅದರ ಉಪಯೋಗ ಹೆಚ್ಚಿನ ಸಂದರ್ಭದಲ್ಲಿ ಹಾಗೂ ಹೆಚ್ಚು ಜನರ ಬದುಕಿನಲ್ಲಿ ಒಂದಕ್ಕೊಂದು ಸಂಬಂಧಿಸಿದಂತೆ ಕಾಣುವುದಿಲ್ಲ.

ಒಂದಷ್ಟು ವರ್ಷ ಓದುವುದರಿಂದ ಯಾವ ಬಗೆಯ ಪ್ರಯೋಜನವಾಯಿತು ಎಂದು ಅವಲೋಕಿಸಿದರೆ ಸ್ಪಷ್ಟವಾದ ಉತ್ತರ ಸಿಗುವುದಿಲ್ಲ. ಆದಾಗ್ಯೂ ಕೂಡ ಈ ಬಗೆಯ ಜ್ವಲಂತ ಸಂಗತಿಗಳೆಡೆಗೆ ಶಿಕ್ಷಣ ಕ್ರಮವನ್ನು ರೂಪಿಸುವವರು ಗಮನ ಹರಿಸದಿರುವುದು ಸೋಜಿಗವೆನಿಸುತ್ತದೆ. ವಿದ್ಯಾರ್ಥಿಗಳಿಗೆ ನಾವು ಏನನ್ನು ಕಲಿಸುತ್ತೇವೆ ಎಂಬುದರ ಬಗೆಗೂ ಕಾರಂತರು ಚಿಂತಿಸಿದ್ದಾರೆ.

> ನಮ್ಮ ಶಿಕ್ಷಣ ಕ್ರಮದ ಮುಖ್ಯ ಲಕ್ಷಣ ವಿದ್ಯಾರ್ಥಿಗಳ ತಲೆಯಲ್ಲಿ ಹಿರಿಯರು ಸಂಗ್ರಹಿಸಿಟ್ಟಿರುವ ಜ್ಞಾನ ಭಂಡಾರವನ್ನು ತುರುಕಿಸುವ ಪ್ರಯತ್ನ. ಈ

> ಪ್ರಯತ್ನದಲ್ಲಿ ಅವರಿಗೆ ಜಿಗುಪ್ಸೆ ಭರಿಸುವ ಎಲ್ಲ ಕೆಲಸಗಳನ್ನು ಮಾಡುತ್ತಿದ್ದೇವೆ.[೩೩]

ಎಂಬ ಕಾರಂತರ ಮಾತುಗಳು ಇಂದು ನಾವು ವಿದ್ಯಾರ್ಥಿಗಳಿಗೆ ಏನನ್ನು ಕಲಿಸುತ್ತಿದ್ದೇವೆ ಎಂಬ ಬಗೆಗಿನ ಚಿಂತನೆಯಾಗಿ ಕಂಡುಬರುತ್ತವೆ.

ಹಾಗೆಂದೇ ಮುಂದೆ ಅವರು ಕಾಲೇಜನ್ನು ಬಿಟ್ಟ ಬಳಿಕ, ಪುಸ್ತಕ ಸನ್ಯಾಸದ ದೀಕ್ಷೆ ತೊಡುತ್ತಾರೆ. ಒತ್ತಾಯ ಪೂರ್ವಕ ಶಿಕ್ಷಣ ಅಥವಾ ಕಲಿಯುವವನ ಆಸಕ್ತಿಯನ್ನು ಕೇಂದ್ರವಾಗಿಸಿಕೊಳ್ಳದೆ ಕಲಿಸುವ ಕ್ರಮದ ಪರಿಣಾಮಗಳ ಬಗ್ಗೆ ಕಾರಂತರು ಗಮನಾರ್ಹವಾದ ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತಾರೆ. ಶಿಕ್ಷಣದಿಂದ ಮಾನವನ ಏಳಿಗೆ, ಅಭಿವೃದ್ಧಿ ಸಾಧ್ಯ ಎನ್ನುವುದು ಈವರೆಗಿನ ಎಲ್ಲ ಚಿಂತಕರ ಅಭಿಮತ. ಆದರೆ ಇಂತಹ ಶಿಕ್ಷಣ ಕಲಿಕೆಗೆ ಮುಂದಾಗುವ ವಿದ್ಯಾರ್ಥಿ ಇದರಿಂದ ವಿಮುಖವಾಗುವುದಕ್ಕೆ ಕಾರಣಗಳೇನು? ಎನ್ನುವುದನ್ನು ನಾವಿಂದು ಗುರುತಿಸಬೇಕಾಗಿದೆ. ಈ ಎಲ್ಲ ಸಂಗತಿಗಳ ಹಿಂದಿರುವ ಬಹುಮುಖ್ಯ ಅಂಶವೆಂದರೆ 'ಶಿಕ್ಷಣ' ಕಲಿಯುವವನ ಆಸಕ್ತಿಯನ್ನು ಅವಲಂಬಿಸಬೇಕೇ ಹೊರತು, ಕಲಿಸುವವರ ಒತ್ತಾಯವನ್ನಲ್ಲ ಎಂಬುದಾಗಿದೆ.

ಈ ರೀತಿಯ ವಿಚಾರಗಳ ಕುರಿತು ಕಾರಂತರು ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಮಗುವಿನ ಇಂದ್ರಿಯಗಳಿದ್ದು ನಿಸರ್ಗಕ್ಕೂ ಅವರ ಬದುಕಿಗೂ ಸಂಬಂಧವಿರುವುದು ಕಡಿಮೆ ಎನ್ನುವುದನ್ನು ಗುರುತಿಸುತ್ತಾರೆ. ಮಗುವಿನ ಭೌತಿಕ ಜ್ಞಾನದ ವೃದ್ಧಿಯ ಬೆಳವಣಿಗೆಯನ್ನು ಗಮನದಲ್ಲಿರಿಸಿಕೊಂಡಿರುವ ಶಿಕ್ಷಣ ವ್ಯವಸ್ಥೆ ಮಗುವನ್ನು 'ಭಾವಜೀವಿ' ಎಂದು ಗುರುತಿಸಿ ಶಿಕ್ಷಣ ಕ್ರಮವನ್ನು ರೂಪಿಸಿಲ್ಲ ಎಂದು ಅಭಿಪ್ರಾಯಪಡುತ್ತಾರೆ.

ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಸಾಕಷ್ಟು ಮಾರ್ಗಸೂಚಿಗಳನ್ನು, ಸುಧಾರಣ ಕ್ರಮಗಳನ್ನು ಮಂಡಿಸಿರುವ ಕಾರಂತರು ಆ ನಿಟ್ಟಿನಲ್ಲಿ ಹಲವು ಪ್ರಯೋಗಗಳನ್ನು ನಡೆಸಿದ್ದಾರೆ. ಅವರು ತಮ್ಮ ಮಕ್ಕಳಿಗೆ ಮನೆಯಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ನೀಡಿದ್ದನ್ನು ಕುರಿತು

> ಅವರನ್ನು ಪ್ರಾಥಮಿಕ ಶಾಲೆಯ ಕಡ್ಡಾಯದಿಂದ ತಪ್ಪಿಸಿ ಅವರಿಗೆ ಏಳೆಂಟು ವರುಷಗಳಾಗುವ ತನಕವೂ ಮನೆಯಲ್ಲಿರಿಸಿಕೊಂಡು ಬೆಳೆಸಿದ್ದೇನೆ. ತಮ್ಮ ಸುತ್ತಣ ಪರಿಸರದಲ್ಲಿ ಅವರೇನು ಮಾಡಿದರು. ಅವರ ಕುತೂಹಲವನ್ನು ನಾನು ಹೇಗೆ ತಣಿಸಿದೆ ಎಂಬ ವಿವರಗಳು ನನ್ನ ಮನಸ್ಸಿನಲ್ಲಿ ಅಚ್ಚ ಹಸಿರಾಗಿ ಉಳಿದಿವೆ.[೩೪] ಎಂದಿದ್ದಾರೆ.

ಕಾರಂತರು ಇಂತಹ ಪ್ರಯೋಗಾತ್ಮಕತೆಯ ಮೂಲಕ ಮಕ್ಕಳ ಮನಸ್ಸನ್ನು ಹತ್ತಿರದಿಂದ ಅರ್ಥೈಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಅವರು ತಮ್ಮ ಇಪ್ಪತ್ತೆಂಟನೇ ವಯಸ್ಸಿನಲ್ಲಿಯೇ ಶಾಲಾ ವ್ಯವಸ್ಥೆಯನ್ನು ಚಿಕಿತ್ಸಕ ದೃಷ್ಟಿಯಿಂದ ನೋಡಿದವರು. ಮಕ್ಕಳ

ಕೂಟಗಳನ್ನು ಏರ್ಪಡಿಸಿ ಪಾಠದಲ್ಲಿ ಕಲಿಸದ ಯಾವೆಲ್ಲ ಕೆಲಸಗಳನ್ನು, ಸೃಷ್ಟಿಗಳನ್ನು ಮಾಡುತ್ತಾರೆ ಎಂಬುದನ್ನು ಪ್ರಯೋಗಗಳ ಮೂಲಕ ಕಂಡುಕೊಂಡವರು. ಅವರು ಬೆಲಾರ್ಡನ 'ಇನ್‌ಪೆಂಟ ಟೀಚರ್' ಗ್ರಂಥವನ್ನು ಓದಿಕೊಂಡಿದ್ದರು. ಪ್ರೊ. ಸಿಸೆಕನ 'ನ್ಯೂ ಇರಾ ಸ್ಕೂಲ್' ನಡೆಸಿದ ಬಗೆಯನ್ನು ತಿಳಿದುಕೊಂಡಿದ್ದರು. ಆಟದಿಂದ ಪಾಠ ಎಂಬ ತತ್ವವನ್ನು ಮಕ್ಕಳ ಶಿಕ್ಷಣದಲ್ಲಿ ಪ್ರಯೋಗಿಸಿದರು. ಹೀಗೆ ತಮ್ಮ ಮಕ್ಕಳನ್ನು ಪ್ರಾಥಮಿಕ ಶಿಕ್ಷಣಕ್ಕೆ ಕಳುಹಿಸದ ಕಾರಂತರು ಈ ಅವಧಿಯಲ್ಲಿ ಆಗುವ ಸಮಯದ ವ್ಯರ್ಥದ ಬಗ್ಗೆ ವಿವರಿಸುತ್ತಾ, ಓದುವ, ಬರೆಯುವ ವಿದ್ಯೆಯನ್ನು ಆರು ತಿಂಗಳೊಳಗೆ ಹೇಳಿಕೊಡಬಹುದು. ಅದಕ್ಕೆ ಐದು ವರ್ಷಗಳ ಕಠಿಣ ಸಜೆಯ ಅವಶ್ಯವಿಲ್ಲ ಎನ್ನುವುದನ್ನು ಮುಂದಿನಂತೆ ತಿಳಿಸುತ್ತಾರೆ–

> ಅವರನ್ನು ಆಡಲು ಬಿಟ್ಟೆ; ನೋಡಲು ಬಿಟ್ಟೆ; ಪ್ರಶ್ನೆ ಕೇಳಲು ಬಿಟ್ಟೆ; ಕುತೂಹಲ ಬೆಳೆಯುವ ಅವಕಾಶ ಕೊಟ್ಟೆ. ಒಂದು ಒಂದೂವರೆ ವರ್ಷದಲ್ಲಿ ದಿನಕ್ಕೆ ಒಂದೆರಡು ಗಂಟೆಯ ಶಿಕ್ಷಣದಿಂದ ಪ್ರಾಥಮಿಕ ಶಾಲೆಯನ್ನು ಹೊಗ್ಗದೇ ನೇರವಾಗಿ ಹಾಯಸ್ಕೂಲನ್ನು ಸೇರುವುದು ಸಾಧ್ಯವಾಯಿತು. ಅಲ್ಲಿ ಅವರಿಗೆ ಯಾವ ತೊಡಕು ಬರಲಿಲ್ಲ[೩೫]

ಸ್ವತಃ ತಮ್ಮ ಮಕ್ಕಳ ಮೇಲೆಯೇ ಪ್ರಯೋಗ ನಡೆಸಿದ ಕಾರಂತರ ಚಿಂತನೆಗಳನ್ನು ನಮ್ಮ ಸಮಕಾಲೀನ ಶಿಕ್ಷಣ ತಜ್ಞರು ಸರಿಯಾಗಿ ಅರ್ಥ ಮಾಡಿಕೊಂಡಂತೆ ಕಾಣುತ್ತಿಲ್ಲ. ಹೈಸ್ಕೂಲ್ ಶಿಕ್ಷಣದ ಬಗೆಗೂ ಕಾರಂತರು ತಮ್ಮ ಬರಹಗಳಲ್ಲಿ ಚಿಂತಿಸಿರುವುದುಂಟು. ರುಚಿಕಟ್ಟಾದ ವಿಷಯಗಳನ್ನೂ ಕಹಿ ಕಷಾಯದಂತೆ ಒದಗಿಸುವ ಪಠ್ಯಪುಸ್ತಕಗಳ ಬಗೆಗೂ ಕಾರಂತರು ಬೇಸರ ವ್ಯಕ್ತಪಡಿಸುತ್ತ, ಶಿಕ್ಷಣ ಕ್ಷೇತ್ರದಲ್ಲಿ ಸಂಖ್ಯೆಗೆ ಕೊಡುವ ಮರ್ಯಾದೆಯನ್ನು ನಾವು ಗುಣಕ್ಕೆ ಕೊಡುವುದಿಲ್ಲ. ಅಂತಹ ಕಾಲವನ್ನು ವಿಶ್ವವಿದ್ಯಾನಿಲಯಗಳಲ್ಲಾದರೂ ಕಾಣುವ ಯೋಗವಿದೆಯೇ? ಎನ್ನುವ ಅನುಮಾನವನ್ನು ವ್ಯಕ್ತಪಡಿಸಿದ್ದಾರೆ. ಆದರೆ ವಿಷಯಕ್ಕೆ ಒಂದೊಂದರಂತೆ ವಿಶ್ವವಿದ್ಯಾಲಯಗಳು ಸ್ಥಾಪನೆಯಾಗುತ್ತಿರುವ ಈ ದಿನಗಳಲ್ಲೂ ಸಂಖ್ಯೆಯೇ ಮುಖ್ಯವಾಗಿದೆಯೇ ಹೊರತು ಗುಣಮಟ್ಟವಲ್ಲ ಎಂಬುದು ಗಮನಾರ್ಹ ಸಂಗತಿಯಾಗಿದೆ.

ನಾವು ಜ್ಞಾನಕ್ಕೂ, ಅಭಿರುಚಿಗೂ, ಆಸಕ್ತಿಗೂ, ಪರಿಶ್ರಮಕ್ಕೂ ಗಂಟು ಹಾಕದೆಯೇ ಕೇವಲ ಡಿಗ್ರಿಗೂ, ನೌಕರಿಗೂ, ಅದರಿಂದ ಬರುವ ಸಂಪಾದನೆಗೂ ಗಂಟು ಹಾಕಿ ಉನ್ನತ ಶಿಕ್ಷಣದ ದರ್ಶನವನ್ನು ರೂಪಿಸಲು ಹೊರಟಿರುವುದರಿಂದ ಇಂದು ಶಿಕ್ಷಣದಲ್ಲಿ ಹಲವು ಬಗೆಯ ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ. ಈ ಸಂಗತಿಗಳನ್ನು ನಾಲ್ಕು ದಶಕಗಳಿಗೂ ಮುಂಚೆಯೇ ಕಾರಂತರು ತಮ್ಮ ಬರಹಗಳಲ್ಲಿ ವಿವರಿಸಿದ್ದಾರೆ.

ಮಕ್ಕಳಿಗೆ ಶಿಕ್ಷಣವನ್ನು ಹೇಗೆ ನೀಡಬೇಕು? ಬ್ರಿಟಿಷರು ಜಾರಿಗೆ ತಂದಿರುವ ಶಿಕ್ಷಣ ನೀತಿಯಿಂದಾಗುತ್ತಿರುವ ತೊಂದರೆಗಳು ಯಾವುವು? ವಿದ್ಯಾಸಂಸ್ಥೆಗಳ ಜವಾಬ್ದಾರಿಗಳೇನು?

ನೀತಿಗಳನ್ನು ರೂಪಿಸುವವರ ಚಿಂತನೆಗಳು ಯಾವ ಬಗೆಯವು – ಎಂಬಂತಹ ಹಲವು ಸಂಗತಿಗಳ ಬಗ್ಗೆ ಚಿಂತಿಸಿ ಸಾಕಷ್ಟು ಪ್ರಯೋಗಗಳನ್ನು ನಡೆಸಿರುವ ಕಾರಂತರ ವಿಚಾರಗಳಲ್ಲಿ ವಸಾಹತು ಶಿಕ್ಷಣ ಪದ್ಧತಿಯ ಬಗೆಗಿನ ಅವರ ನಿಲುವುಗಳು ಸ್ಪಷ್ಟವಾಗುತ್ತವೆ.

➢ **ವಿದ್ಯಾರ್ಥಿಗಳ ಅಭಿರುಚಿಗೆ ಮತ್ತು ಆಸಕ್ತಿಗೆ ತಕ್ಕಂತೆ ಶಿಕ್ಷಣ ನೀಡಬೇಕು.**

ಶಿವರಾಮ ಕಾರಂತರು ಎಳೆಯ ಮಕ್ಕಳು ಹಾಗೂ ಅವರ ವಿದ್ಯಾಭ್ಯಾಸದ ಬಗ್ಗೆ ಅಪಾರವಾದ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ. ಕನ್ನಡ ನಾಡು–ನುಡಿ, ಚಿತ್ರಕಲೆ, ಶಿಲ್ಪಕಲೆಯನ್ನು ಕುರಿತಂತೆ ಪರಂಪರೆಯ ಬಗ್ಗೆ ಮಕ್ಕಳಲ್ಲಿ ಆಸಕ್ತಿಯನ್ನು ಮೂಡಿಸಲು ಐ.ಬಿ.ಎಚ್ ಪ್ರಕಾಶನಕ್ಕಾಗಿ ಮಕ್ಕಳ ಪುಸ್ತಕಗಳನ್ನು ರೂಪಿಸಿದರು. ನೀತಿಕಥೆಗಳು, ಪುರಾಣದ ಆದರ್ಶ ವ್ಯಕ್ತಿಗಳು, ಚರಿತ್ರೆಯ ವೀರರೂ, ರಾಮಾಯಣ ಮತ್ತು ಮಹಾಭಾರತದ ಸಂಗತಿಗಳನ್ನು ಕುರಿತು ಪುಸ್ತಕಗಳನ್ನು ರಚಿಸಿದ್ದಾರೆ. ಅಸಂಖ್ಯಾತ ಮಕ್ಕಳ ಕತೆಗಳನ್ನು ಅನುವಾದಿಸಿದ್ದಾರೆ. ಮಕ್ಕಳಿಗಾಗಿ ಓದುವ ಆಟ, ಚಿತ್ರಮಯ ದಕ್ಷಿಣ ಕನ್ನಡ, ನಾಗರೀಕತೆಯ ಹೊಸ್ತಿಲಿನಲ್ಲಿ, ಸಿರಿಗನ್ನಡ ಪಾಠಮಾಲೆ, ಚಿನ್ನರ ಲೋಕದಲ್ಲಿ, ಮೊದಲಾದ ಪಠ್ಯಪುಸ್ತಕಗಳನ್ನು ರೂಪಿಸಿದ್ದಾರೆ. ಈ ಎಲ್ಲ ಕೃತಿಗಳ ಹಿಂದೆ ವಿದ್ಯಾರ್ಥಿಗಳಿಗೆ ಅವರ ಅಭಿರುಚಿ ಮತ್ತು ಆಸಕ್ತಿಗೆ ತಕ್ಕಂತೆ ಉತ್ತಮವಾದ ಶಿಕ್ಷಣ ನೀಡಬೇಕೆಂಬ ಕಾರಂತರ ಚಿಂತನೆ ಕೆಲಸ ಮಾಡಿದೆ.

> ನಾನು ಶಾಲೆಯ ಹೊರಗೆ 'ಬುಕ್ ಪಾರ್ ದಿ ಬೆರನ್ಸ್' ಕಥಾ ಪುಸ್ತಕಗಳನ್ನು ಓದಿದ್ದೇನೆ. ಓದಿ ಹಿಗ್ಗಿದ್ದೇನೆ. ವೆಂಕಟಾಚಾರ್ಯರ ಬಂಗಾಳಿ ಕಾದಂಬರಿಗಳ ಅನುವಾದಗಳನ್ನು ಓದಿದ್ದೇನೆ. ಓದಿ ಆನಂದಿಸಿದ್ದೇನೆ. ಹದಿನಾರು, ಹದಿನೇಳನೇ ಪ್ರಾಯದ ತನಕವು ಕಾಲ್ಪನಿಕ ಕತೆಗಳು ನನಗೆ ಸಂತೋಷಕೊಟ್ಟವು. ಉದ್ದೇಶ ಪೂರ್ವಕವಾಗಿ ರೂಪಿಸಿದ ಬೌದ್ಧಿಕ ಶಿಕ್ಷಣದ ನೆಪದಿಂದ ನನ್ನ ಮೇಲೆ ಹೊರಿಸಿದ ಹೆಚ್ಚಿನ ಶಾಸ್ತ್ರ ಸಂಪತ್ತು ಮಾತ್ರ ನೀರು ಪಾಲಾಯಿತು. ನೀವು ಅದಕ್ಕೆ ಯೋಗ್ಯ ಉತ್ತರ ದೊರಕಿಸಿಕೊಳ್ಳಿರಿ[೩೬]

ಎನ್ನುವ ಕಾರಂತರ ಪ್ರಶ್ನೆ ಸಾರ್ವಕಾಲಿಕವಾದದ್ದು. ನಮಗೆಲ್ಲ ಎಂದೋ ಕೇಳಿದ ಜನಪದ ರಾಮಾಯಣ, ಮಹಾಭಾರತದ ಕಥೆಗಳು ನೆನಪಿನಲ್ಲಿ ಉಳಿದುಕೊಂಡಿವೆ. ತರಗತಿಯಲ್ಲಿ ಕುಳಿತು ಪಾಠದ ರೂಪದಲ್ಲಿ ಕೇಳಿದ ಹಲವು ವಿಷಯಗಳು ಕಿಂಚಿತ್ತಾದರೂ ಯಾಕೆ ನೆನಪಿನಲ್ಲಿ ಉಳಿವುದಿಲ್ಲ ಎನ್ನುವ ಸಂಗತಿಯ ಅಂತರಾಳವನ್ನು ಕಾರಂತರು ಮೇಲಿನಂತೆ ಪ್ರಶ್ನಿಸಿದ್ದಾರೆ. ಕನ್ನಡದಲ್ಲಿ ಹೊಸ ಬಗೆಯ ಪಠ್ಯ ಪುಸ್ತಕಗಳು ರೂಪುಗೊಳ್ಳಬೇಕೆಂದು ಹಂಬಲಿಸಿದವರು. ಕನ್ನಡದಲ್ಲಿ ಮಕ್ಕಳ ಮನಸ್ಸನ್ನು ಎಟುಕುವ ಪುಸ್ತಕಗಳಿಲ್ಲ. ಮಕ್ಕಳ ಮಾನಸಿಕ ಹಸಿವನ್ನು ಹಿಂಗಿಸುವ ದಾರಿಯೆಂದರೆ ಅವರಿಗಾಗಿ

ಉತ್ತಮ ಪುಸ್ತಕಗಳನ್ನು ರೂಪಿಸುವುದು. ಆದರೆ ನಮ್ಮ ಶಿಕ್ಷಣ ತಜ್ಞರು ಈ ವಿಷಯದ ಬಗ್ಗೆ ಸರಿಯಾದ ಆಲೋಚನೆ ಮಾಡುತ್ತಿಲ್ಲ ಎಂದು ಕಾರಂತರು ಗಂಭೀರ ಆರೋಪವನ್ನು ಮಾಡುತ್ತಾರೆ. ಪಠ್ಯ ಪುಸ್ತಕಗಳೇ ಮಗುವಿಗೆ ಬೇಕಾದ ಎಲ್ಲವನ್ನೂ ನೀಡುವ ಅಕ್ಷಯ ಪಾತ್ರೆಗಳೆಂದು ನಮ್ಮ ಪೋಷಕರು ಮತ್ತು ಶಿಕ್ಷಣ ಕ್ಷೇತ್ರದಲ್ಲಿ ತೊಡಗಿಕೊಂಡವರು ಭಾವಿಸಿದ್ದಾರೆ. ಅದರ ಬಗ್ಗೆ ಕಾರಂತರು ಕಳವಳ ವ್ಯಕ್ತಪಡಿಸುತ್ತಾರೆ. ತಮ್ಮ ಸಾಹಿತ್ಯಾಭಿವ್ಯಕ್ತಿ ಹಾಗೂ ಎಲ್ಲ ಬಗೆಯ ಜ್ಞಾನವೂ ತಾನೂ ಓದಿದ ಪುಸ್ತಕಗಳಿಂದ ದೊರೆತದ್ದು ಎಂದಿದ್ದಾರೆ.

> ನಾನು ನಿಮ್ಮ ಮುಂದೆ ತೋಡಿಕೊಂಡ ಶಿಕ್ಷಣ ಸಂಭ್ರಮದಿಂದಲ್ಲ, ಜಗತ್ತಿನ ಶಾಲೆಯಲ್ಲಿ ನಾನಾಗಿ ಕಲಿತ ಪಾಠಗಳಿಂದ; ಪರದೇಶದ ಗ್ರಂಥಗಳು ನನಗೆ ಒದಗಿಸಿದ ತಿಳಿವಿನಿಂದ ನನ್ನ ಅನುಭವಗಳನ್ನು ತೂಗಿ ವಿಚಾರ ಮಾಡಿ ನನ್ನದೇ ಆದ ತೀರ್ಮಾನಗಳಿಗೆ ಬಂದುದರಿಂದ ಹೊರತು ಶಿಕ್ಷಣದ ರೀತಿಯಾಗಲೀ, ಉಪಾಧ್ಯಾಯರಾಗಲೀ ನನ್ನ ಜೋಳಿಗೆಯಲ್ಲಿ ತುಂಬಿಸಿದ ಕಾಳಿನಿಂದಲ್ಲವೇ ಅಲ್ಲ[೩೭]

ಆದುದರಿಂದ ಜ್ಞಾನ ದೊರಕುವಂತಹ ಪುಸ್ತಕಗಳನ್ನು ವಿದ್ಯಾರ್ಥಿಗಳಿಗೆ ಒದಗಿಸಬೇಕೆನ್ನುತ್ತಾರೆ.

➢ **ನಾಲ್ಕು ಗೋಡೆಯ ನಡುವಿನ ಬಂಧನದಿಂದ ಮುಕ್ತಿಗೊಳಿಸಬೇಕು.**

ರವೀಂದ್ರನಾಥ ಠಾಕೂರರು ಮಕ್ಕಳ ಶಿಕ್ಷಣ ಹಾಗೂ ಕಲಿಸುವ ಕ್ರಮಗಳ ಬಗ್ಗೆ ಪ್ರಯೋಗಗಳನ್ನು ನಡೆಸಿದವರು. ಅವರು ಶಾಂತಿನಿಕೇತನದಲ್ಲಿ ಮಕ್ಕಳಿಗೆ ಮುಕ್ತವಾಗಿ ಕಲಿಯುವುದಕ್ಕೆ ಅವಕಾಶ ಕಲ್ಪಿಸಿದ್ದರು. ಶಿವರಾಮ ಕಾರಂತರು ರವೀಂದ್ರನಾಥ ಠಾಕೂರರ ಪ್ರಭಾವಕ್ಕೆ ಒಳಗಾದವರು. ಶಾಂತಿ ನಿಕೇತನದಂತೆಯೇ ತಾವೂ ಬಾಲವನವನ್ನು ಆರಂಭಿಸಿದರು. ಆ ಮುಖೇನ ಮಕ್ಕಳಿಗೆ ಪ್ರಕೃತಿಯೊಂದಿಗೆ ಒಡನಾಡಲು ಅವಕಾಶ ಕಲ್ಪಿಸಿ ಪ್ರಯೋಗಗಳನ್ನು ನಡೆಸಿದರು.

ನಮ್ಮ ಶಿಕ್ಷಣದ ಕ್ರಮವನ್ನು ಪಾಶ್ಚಾತ್ಯ ಶಿಕ್ಷಣ ಕ್ರಮದೊಂದಿಗೆ ಹೋಲಿಸುವ ಕಾರಂತರು ನಮ್ಮಲ್ಲಿನ ಶಿಕ್ಷಣ ನಿಸರ್ಗದೊಂದಿಗೆ ಸಂಭಾಷಿಸಿಸಬಲ್ಲ ಮನೋ ಪ್ರವೃತ್ತಿಯನ್ನೆ ಹೊಂದಿಲ್ಲ, ಪ್ರಕೃತಿಯ ವಿಷಯವಾಗಿ ನಮ್ಮ ಕಣ್ಣು, ಕಿವಿ, ತ್ವಚೆಗಳು ತೀರ ಜಡ. ಆದರೆ ಪಾಶ್ಚಾತ್ಯರಲ್ಲಿ ಅವು ಬಹುವಾಗಿ ಬೆಳೆದಿವೆ. ಪ್ರಕೃತಿಯನ್ನು ಕುರಿತಂತೆ ಬಯಾಲಜಿ, ಬಾಟನಿ ಮೊದಲಾದ ಐಚ್ಛಿಕ ವಿಷಯಗಳನ್ನು ಇಡಿಯಾಗಿ ಓದಿ ಜೀರ್ಣಿಸಿಕೊಂಡ ಶಾಸ್ತ್ರಜ್ಞರು ಕೂಡ ನಿಸರ್ಗದ ಬಗ್ಗೆ ಚಿಂತಿಸುವುದಿಲ್ಲ. ಏಕೆಂದರೆ ಅವರು ಓದಿದ ವಿವಿಧ ವಿಷಯಗಳು, ಅಭಿರುಚಿಯಿಂದ ಆಲಿಸಿದ ವಿಷಯಗಳಾಗಿಲ್ಲ. ಬದಲಿಗೆ ಅವು ಕೇವಲ ಡಿಗ್ರಿ ಪಡೆಯುವುದಕ್ಕೆ ಪಟ್ಟ ಪಾಡಾಗಿವೆ ಎಂದಿದ್ದಾರೆ.

ಶೈಶವದಲ್ಲಿ ಮಕ್ಕಳಿಗೆ ಬುದ್ಧಿ ಇಲ್ಲ ಎಂದು ನಂಬಲಾಗುತ್ತದೆ. ಆ ವಯಸ್ಸಿನ ಮಕ್ಕಳ ಚಟುವಟಿಕೆಗಳನ್ನು ಮಕ್ಕಳಾಟ ಎಂದು ನಿರ್ಲಕ್ಷ್ಯ ಮಾಡಲಾಗುತ್ತದೆ. ಎಲ್ಲವನ್ನೂ ಹಣದ ಮೂಲಕ ಅಳತೆ ಮಾಡುವ ಈ ಕಾಲಮಾನದಲ್ಲಿ ಮಕ್ಕಳ ಎಲ್ಲ ಕ್ರಿಯಾತ್ಮಕ ಚಟುವಟಿಕೆಗಳು ನಮ್ಮ ಕಣ್ಣಿಗೆ ನಿರುಪಯುಕ್ತ ಎನಿಸುತ್ತದೆ. ಕಾರಂತರು ತಮ್ಮ ಮಕ್ಕಳಿಗೆ ಪ್ರಾಥಮಿಕ ಶಾಲೆಗಳಿಗೆ ಸೇರಿಸದೆ ಅವರನ್ನು ನಿಸರ್ಗದ ಚಟುವಟಿಕೆಗಳ ನಡುವೆ ಮುಕ್ತವಾಗಿ ಬೆರೆಯುವ ಅವಕಾಶ ಕಲ್ಪಿಸಿಕೊಟ್ಟರು. ತಮ್ಮ ಮಕ್ಕಳ ಚಟುವಟಿಕೆಗಳ ಬಗ್ಗೆ ಅವರು–

> ನೀರಿನ ಕುಳಿ ಮಾಡಿದರು, ಮಣ್ಣಿನ ಮಡಿಕೆ ಕಟ್ಟದರು, ಬಿಲ ಕೊರೆದರು, ಇವೆಲ್ಲವೂ ಶೈಶವದ ಸೃಷ್ಟಿಕಾರಕ ಅತೀವ ಅರ್ಥಭರಿತ ಕ್ರಿಯೆಗಳು ಎಂಬುದನ್ನು ಪರಿಶೀಲಿಸಿದ್ದೇನೆ. ಆ ಮಕ್ಕಳು ಒಂದೇ ಒಂದು ಕ್ಷಣವನ್ನು ಹಾಳು ಮಾಡಿದಂತಿಲ್ಲ. ಆಟವಾಡಿ ನಕ್ಕಿದ್ದಾರೆ. ಹಿತ್ತಿಲಲ್ಲೆಲ್ಲ ನಲಿದಿದ್ದಾರೆ. ಆ ಆಟಗಳೆಲ್ಲವೂ ಅರ್ಥವತ್ತಾಗಿದ್ದವು. ನಮ್ಮಲ್ಲಿ ಬಹುಜನ ತಿಳಿಯುವಂತೆ ಅವರ ಚಟುವಟಿಕೆ ಬುದ್ಧಿಶೂನ್ಯ ಮಕ್ಕಳಾಟಿಕೆಯಲ್ಲ ಅನಿಸಿದೆ ನನಗೆ.[೩೮]

ಎಂದು ವಿವರಿಸಿದ್ದಾರೆ.

➢ **ಜ್ಞಾನದ ತೃಷೆ ನಿತಂರರವಾಗಿರುವಂತೆ ಪಠ್ಯಗಳನ್ನು ರೂಪಿಸಬೇಕು.**

ಓದು ಎಲ್ಲಿಯವರೆಗೆ ಇರಬೇಕು? ಒಂದು ನಿರ್ದಿಷ್ಟ ಪದವಿ ಪಡೆದ ಅನಂತರ ಓದು ಮುಕ್ತಾಯಗೊಳ್ಳಬೇಕೆ? ಎನ್ನುವ ವಿಚಾರಗಳನ್ನು ಕುರಿತು ಕಾರಂತರು ತಮ್ಮ ವೈಚಾರಿಕ ಬರಹಗಳಲ್ಲಿ ವಿವರಿಸಿದ್ದಾರೆ. ಸರಿಯಾದ ಪಠ್ಯಕ್ರಮವನ್ನು ರೂಪಿಸಲಾರದ್ದು ನಮ್ಮ ಶಿಕ್ಷಣ ಕ್ರಮದ ವೈಫಲ್ಯಗಳಲ್ಲಿ ಒಂದು. ಮಕ್ಕಳಿಗೆ ಯಾವ ವಿಷಯಗಳನ್ನು ಓದಿಸಬೇಕು ಎಂಬುದರ ಬಗ್ಗೆ ಸರ್ಕಾರವಾಗಲಿ, ಶಿಕ್ಷಣತಜ್ಞರಾಗಲಿ ಗಂಭೀರವಾಗಿ ಚಿಂತಿಸಿದಂತೆ ಕಾಣುತಿಲ್ಲ. ಒಂದು ದೇಶದಲ್ಲಿ ಯಶಸ್ವಿಯಾದ ಪಾಠಕ್ರಮ ಮತ್ತು ಪಠ್ಯಕ್ರಮಗಳನ್ನು ಅಂಧಾನುಕರಣೆಯಿಂದ ಅಳವಡಿಸಿಕೊಂಡಿರುವ ಹಲವು ಬಗೆಯ ಉದಾಹರಣೆಗಳನ್ನು ಗಮನಿಸಬಹುದು. ಇಂತಹ ಸಂದರ್ಭದಲ್ಲಿ ಸ್ಥಳೀಯ ಆದ್ಯತೆಗಳಿಗೆ ಅನುಸಾರವಾಗಿ ಪಠ್ಯವನ್ನು ರೂಪಿಸಬೇಕಾದ ಗುರುತರ ಜವಾಬ್ದಾರಿ ಪಠ್ಯಕ್ರಮ ರೂಪಿಸುವ ಸಮಿತಿಯದಾಗಿರುತ್ತದೆ.

ನಮ್ಮ ಶಿಕ್ಷಣದಲ್ಲಿ ಮಗುವಿನ ಕಣ್ಣು, ಕಿವಿಗಳಿಗೂ, ಹೊರ ಜಗತ್ತಿಗೂ ಎಂದರೆ ನಿಸರ್ಗಕ್ಕೂ ಅವರ ಬದುಕಿಗೂ ಏನಾದರೂ ಸಂಬಂಧವಿದ್ದಂತೆ ಕಾಣಿಸುತ್ತದೆಯೇ? ಮಗುವಿಗೊಂದು ಭಾವ ಜೀವನವಿದೆ ಎಂದೆಣಿಸಿ ನಮ್ಮ ಶಿಕ್ಷಣವನ್ನು ರೂಪಿಸಿದ್ದೇವೆಯೇ? ನಮ್ಮ ಶಾಲಾ ಕಾಲೇಜುಗಳ ತನಕವೂ ಮಾನವನೊಬ್ಬ 'ಭಾವಜೀವಿ' ಎಂಬ ಎಣಿಕೆಯಿಂದ ಶಿಕ್ಷಣವನ್ನು ರೂಪಿಸಿದ್ದು ಕಂಡು ಬರುತ್ತದೆಯೇ ಎನ್ನುವ ಪ್ರಶ್ನೆಯನ್ನು

ಕಾರಂತರು ಮುಂದಿಡುತ್ತಾರೆ. ನಮ್ಮ ನಾಡಿನ ಶಿಕ್ಷಣ ತಜ್ಞರು ಮಕ್ಕಳ ಜ್ಞಾನದ ಹಸಿವನ್ನು ಹಿಂಗಿಸುವ ನಿಟ್ಟಿನಲ್ಲಿ ಯಾವ ಕೆಲಸ ಮಾಡಿದ್ದಾರೆ. ಎಷ್ಟು ಕೆಲಸ ಮಾಡಿದ್ದಾರೆ ಎಂಬುದನ್ನು ಅಳೆದು ತೂಗಿ ನೋಡಬೇಕು ಎನ್ನುತ್ತಾ ಸಾರ್ವಜನಿಕರ ಜವಾಬ್ದಾರಿಗಳನ್ನು ನೆನಪಿಸುತ್ತಾರೆ.

ನಮ್ಮಲ್ಲಿ ಜ್ಞಾನದ ಮೋಹ ಹುಟ್ಟುವಂತೆ ಪಠ್ಯಕ್ರಮವನ್ನು ರೂಪಿಸುವಲ್ಲಿ ತಜ್ಞರು ಹೆಚ್ಚು ಕ್ರಿಯಾಶೀಲರಾಗಿಲ್ಲ. ಜ್ಞಾನವನ್ನು ನೀರಸವಾಗಿ ವಿದ್ಯಾರ್ಥಿಯ ಗಂಟಲಿಗೆ ತುರುಕುವ ಪ್ರಯತ್ನ ಮಾಡಲಾಗುತ್ತಿದೆ. ಪರೀಕ್ಷೆಯನ್ನು ಬೇತಾಳದಂತೆ ತೋರಿಸಿ ಹೆದರಿಸುತ್ತಿದ್ದೇವೆ. ಹಾಗಾಗಿ ವಿದ್ಯಾರ್ಥಿಗಳು ಪರೀಕ್ಷೆಯ ಬಗ್ಗೆ ವಿಪರೀತ ಅಂಜುತ್ತಾರೆ. ನಾಳೆಯ ನೌಕರಿಗಾಗಿ ಯಾವೆಲ್ಲ ಪರೀಕ್ಷೆಗಳಲ್ಲಿ ಪಾಸಾಗಬೇಕು ಅಷ್ಟನ್ನು ಓದಿಕೊಳ್ಳಬೇಕು. ಅದರಿಂದ ಮುಂದೆ ಆ ಪೀಡೆಯಿಂದ ಪಾರಾದಂತೆ ಎಂಬ ಭಾವನೆ ವಿದ್ಯಾರ್ಥಿಗಳಲ್ಲಿ ಬೆಳೆದು ನಿಂತಿದೆ. ಈ ಎಲ್ಲ ದೋಷಗಳನ್ನು ಸರಿಪಡಿಸುವ ಜವಾಬ್ದಾರಿಯು ಪಠ್ಯಪುಸ್ತಕ ರಚನಾ ಸಮಿತಿಯದಾಗಿರುತ್ತದೆ. ಮಕ್ಕಳ ಮನಸ್ಸಿಗೆ ಮುದ ನೀಡುವ, ಅವರ ಕಲಿಕೆಯನ್ನು ಉಲ್ಲಾಸದಾಯಕವಾಗಿಸುವ, ನಿಸರ್ಗದೊಂದಿಗೆ ಅವರ ಒಡನಾಟವನ್ನು ಹೆಚ್ಚಿಸುವ ಪಠ್ಯಕ್ರಮ ಮತ್ತು ಕಲಿಸುವ ಕ್ರಮವನ್ನು ರೂಪಿಸಬೇಕೆನ್ನುವುದು ಕಾರಂತರ ಆಶಯ. ಬಾಲವನವನ್ನು ಆರಂಭಿಸುವ ಮೂಲಕ ಅವರು ಆಟದಿಂದ ಪಾಠ ಎನ್ನುವ ವಿನೂತನ ಪರಿಕಲ್ಪನೆಯನ್ನು ಜಾರಿಗೆ ತಂದಿದ್ದರು. ಈ ಚಿಂತನೆಯೇ ಈಗ ಸರ್ಕಾರದಿಂದ ನಲಿ-ಕಲಿ ಪರಿಕಲ್ಪನೆಯಾಗಿ ಬೆಳೆದಿದೆ.

➢ **ಸರ್ಕಾರ, ವಿದ್ಯಾಸಂಸ್ಥೆ, ಶಿಕ್ಷಣ ತಜ್ಞರು ಅತ್ಯಂತ ಜವಾಬ್ದಾರಿಯಿಂದ ವರ್ತಿಸಬೇಕು.**

ನಮ್ಮ ಶಿಕ್ಷಣದ ವೈಫಲ್ಯಗಳನ್ನು ಗುರುತಿಸುವ ಶಿವರಾಮ ಕಾರಂತರು ಅದರ ಹೊಣೆಗಾರಿಕೆಯನ್ನು ಯಾರು ಹೊರಬೇಕು ಎನ್ನುವುದರ ಬಗೆಗೂ ಚರ್ಚಿಸಿದ್ದಾರೆ. ಮಗುವಿಗೆ ಉತ್ತಮ ಶಿಕ್ಷಣ ನೀಡುವುದು ಸಮಾಜದ ಕರ್ತವ್ಯ. ಸಮಾಜದ ಭಾಗಗಳಾದ ಸರ್ಕಾರ, ಶಿಕ್ಷಣ ಸಂಸ್ಥೆಗಳು, ಪೋಷಕರು, ಶಿಕ್ಷಕರು, ಹೀಗೆ ಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲರೂ ಸಮಚಿತ್ತದಿಂದ ವರ್ತಿಸಿ ಮಗುವಿನ ಮನೋಚಿಂತನೆಯ ಹಿನ್ನೆಲೆಯಲ್ಲಿ ಅದರ ಆಸಕ್ತಿ ಹಾಗೂ ಅಭಿರುಚಿಗಳಿಗೆ ತಕ್ಕಂತೆ ಶಿಕ್ಷಣ ನೀಡಬೇಕು. ಅದರ ಉತ್ತಮ ಕಲಿಕೆಗೆ ಬೇಕಾದ ಪರಿಸರವನ್ನು ರೂಪಿಸಬೇಕು. ಹಾಗಾಗಿ ವ್ಯಕ್ತಿಯನ್ನು ನಾವು ಹೊಟ್ಟೆಪಾಡಿಗಾಗಿ ಹೋರಾಡುವ ಪ್ರಾಣಿಯಂತೆ ತಿಳಿಯದೆ ಅವನು ಒಬ್ಬ ಮನೋಜೀವಿ ಎಂದು ಪರಿಗಣಿಸಬೇಕು ಎಂದಿದ್ದಾರೆ.

ಹಿರಿಯರು ಸಂಗ್ರಹಿಸಿಟ್ಟಿರುವ ಜ್ಞಾನ ಭಂಡಾರವನ್ನು ವಿದ್ಯಾರ್ಥಿಗಳ ತಲೆಯಲ್ಲಿ ತುರುಕಿಸುವ ಪ್ರಯತ್ನವೇ ನಮ್ಮ ಶಿಕ್ಷಣ ಕ್ರಮದ ಮುಖ್ಯ ಲಕ್ಷಣ. ಈ ಪ್ರಯತ್ನಗಳಿಂದಾಗಿ ವಿದ್ಯಾರ್ಥಿಗಳಲ್ಲಿ ಜುಗುಪ್ಸೆ ತರುವ ಕೆಲಸವನ್ನು ಮಾಡುತ್ತಿದ್ದೇವೆ.

> ನಮ್ಮ ಶಿಕ್ಷಣದ ವಿಧಾನದಲ್ಲಿ ಮನಸ್ಸು ಮತ್ತು ವಯಸ್ಸು ಎರಡಕ್ಕೂ ಸ್ಥಾನವಿಲ್ಲ ಅವರ ಅಭಿರುಚಿಗಳೇನು, ಅನಿಸಿಕೆಗಳೇನು, ಬಯಕೆಗಳೇನು, ಅನುಭವಗಳ ಮಿತಿಯೇನು, ಅವುಗಳ ಇತಿಮಿತಿಯೊಳಗೆ ಯಾವ್ಯಾವ ವಿಷಯಗಳನ್ನು, ಎಷ್ಟೆಷ್ಟು ಹೇಳಬಹುದು. ಅವುಗಳ ವಿಷಯದಲ್ಲಿ ಅವರ ಮನಸ್ಸು ಒಲಿಯುವಂತೆ ಯಾವ ವಿಧದಲ್ಲಿ ಅದನ್ನು ಹೇಳಬೇಕು ಎಂಬೆಲ್ಲ ಪ್ರಶ್ನೆಗಳು ನಮ್ಮ ನಾಡಿನಲ್ಲಿ ಶಿಕ್ಷಣದ ಹೊಣೆ ಹೊತ್ತವರನ್ನು ಬಾಧಿಸಿದ್ದರೆ ಇಂತಹ ಪರಿಸ್ಥಿತಿ ಉಂಟಾಗುತ್ತಿರಲಿಲ್ಲ.[೬೯] ಎನ್ನುತ್ತಾರೆ.

ಹಾಗಾಗಿಯೇ ಅವರು ಮುಂದೆ ಕಾಲೇಜು, ಅನಂತರದ ದಿನಗಳಲ್ಲಿ ಪುಸ್ತಕದ ಸನ್ಯಾಸ ದೀಕ್ಷೆ ತೊಡುತ್ತಾರೆ. ಎನ್ನುವ ಮೂಲಕ ನಮ್ಮ ವೈಫಲ್ಯದ ಮೂಲವನ್ನು ಗುರುತಿಸಿದ್ದಾರೆ.

➢ **ಬದುಕಿಗೆ ಅನ್ನ ನೀಡುವ ಶಿಕ್ಷಣ ನೀಡಬೇಕು.**

ಶಿಕ್ಷಣವನ್ನು ಯಾಕೆ ಪಡೆಯಬೇಕು? ಈಗ ಪಡೆಯುತ್ತಿರುವ ಶಿಕ್ಷಣದಿಂದ ಆಗುತ್ತಿರುವ ಉಪಯೋಗಗಳೇನು? ಈ ಬಗೆಯ ಪ್ರಶ್ನೆಗಳನ್ನು ಮುಂದಿಡುವ ಶಿವರಾಮ ಕಾರಂತರು ಶಿಕ್ಷಣದ ಸಾರ್ಥಕತೆಯ ಬಗ್ಗೆ ಸಾಕಷ್ಟು ಜಿಜ್ಞಾಸೆ ನಡೆಸಿದ್ದಾರೆ.

> ಇಂದು ನಮ್ಮ ನಾಡಿನಲ್ಲಿ ವಿದ್ಯಾವಂತರೆಂಬುವರು ಕಲಿತು ಪಾಸಾಗುವಂಥ ಪರೀಕ್ಷೆಗಳಿಗೂ ಅಲ್ಲಿ ದೊರಕಿಸಿಕೊಂಡ ತಿಳಿವುಗೂ ಆ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಪಡೆದ ಸರ್ಟಿಫಿಕೇಟಿಗೂ, ಡಿಪ್ಲೋಮಾಗಳಿಗೂ, ಅವರ ಮುಂದಣ ಬದುಕಿಗೂ ಸಂಬಂಧ ಕಾಣುತ್ತೀರಾ? ಹಾಗೇನಾದರೂ ಕಂಡು ಬಂದರೆ ಅದು ನೂರು ಮಂದಿ ಪದವೀಧರರಲ್ಲಿ ಹತ್ತು ಮಂದಿಗಿಂತಲೂ ಕಡಿಮೆ ಜನಕ್ಕೆ[೭೦]

ಕಾರಂತರು ಗುರುತಿಸುವ ಸಮಸ್ಯೆಗಳು ಅಂದಿಗಿಂತಲೂ ಇಂದು ಹೆಚ್ಚಾಗಿ ಗೋಚರಿಸುತ್ತಿದೆ. ವಿಶ್ವವಿದ್ಯಾನಿಲಯಗಳಿಂದ ಲಕ್ಷಾಂತರ ಮಂದಿ ಪದವೀಧರರಾಗಿ ಹೊರಬರುತ್ತಿದ್ದಾರೆ. ಇಷ್ಟು ಸಂಖ್ಯೆಯ ವಿದ್ಯಾರ್ಥಿಗಳಿಗೆ ಪದವಿ ಪ್ರಮಾಣ ನೀಡಿದೆವು ಎನ್ನುವುದೇ ವಿಶ್ವವಿದ್ಯಾನಿಲಯಗಳ ಹೆಗ್ಗಳಿಕೆ. ಹಾಗೆ ಓದಿ ಹೊರಬಂದ ವಿದ್ಯಾರ್ಥಿಗಳು ಎಲ್ಲಿ ಹೋಗುತ್ತಾರೆ. ಅವರ ಓದಿಗೆ ಸಂಬಂಧಿಸಿದ ಕೆಲಸಗಳೇ ಅವರಿಗೆ ದೊರಕುತ್ತಿವೆಯೇ, ಅಥವಾ ಅವರು ಮಾಡುತ್ತಿರುವ ಕೆಲಸಕ್ಕೆ ಇದುವರೆವಿಗಿನ ಓದು ಉಪಯೋಗಕ್ಕೆ ಬರುತ್ತಿದೆಯೇ? ಎನ್ನುವ ಪ್ರಶ್ನೆಗಳಿಗೆ ಉತ್ತರಿಸಲು ಯಾರೂ ಸಿದ್ಧರಿಲ್ಲ.

ಪದವಿ ಪ್ರಮಾಣ ಪತ್ರಗಳನ್ನು ಪಡೆದುಕೊಂಡು ಹೊರಬರುವ ಪದವೀಧರರು ತಮ್ಮ ಹೊಟ್ಟೆಯ ಪ್ರಶ್ನೆಗಳನ್ನು ಇಂಥದ್ದೇ ಬಗೆಯಲ್ಲಿ ಕಳೆಯಬಹುದು ಎಂಬುದಕ್ಕೆ ಯಾವ ಬಗೆಯ ಮಾರ್ಗವನ್ನು ಗುರುತಿಸಿಕೊಳ್ಳಲು ಶಕ್ತರಾಗಿರುವುದಿಲ್ಲ. ಅಂತಹವರನ್ನು

ಕುರಿತು ಕಾರಂತರು 'ಅವರಿಗೆ ಕಾಣಿಸುತ್ತಿರುವ ಹೊಟ್ಟೆಯ ಪಾಡಿನ ಜೀವನಾದರ್ಶನ ಕುರ್ಚಿಯ ಮೇಲೆ ಕುಳಿತು ನಾಲ್ಕಾರು ಕಾಸು ಸಂಪಾದಿಸಿ, ಕಾಗದದ ಮೇಲೆ ಪೆನ್ನನ್ನು ಆಚೀಚೆ ಓಡಿಸಿ ಗೌರವದಿಂದ ಎಂದರೆ ಆದಷ್ಟು ಕಡಿಮೆ ಶ್ರಮದಿಂದ ಬಾಳ್ವೆಯನ್ನು ಸಾಧಿಸಬಹುದೆಂಬ ಭಾವುಕ ಆದರ್ಶ, ನಮ್ಮ ಶಿಕ್ಷಣಾಲಯಗಳು ಈ ತನಕ ಸಾಧಿಸಿಕೊಂಡು ಬಂದದ್ದು ಅಂಥ ಆದರ್ಶವನ್ನೆ' ಎನ್ನುತ್ತಾರೆ.

ನಮ್ಮಲ್ಲಿ ಸುಧೀರ್ಘ ಅವಧಿಯನ್ನು ಶಿಕ್ಷಣಕ್ಕಾಗಿ ವ್ಯಯಿಸಲಾಗುತ್ತದೆ. ಅಷ್ಟು ಸಮಯದ ಬಳಕೆ ಮುಂದೆ ಸರಿಯಾಗಿ ಉಪಯೋಗಕ್ಕೆ ಬರುತ್ತದೆಯೇ ಎನ್ನುವ ಪ್ರಶ್ನೆಗೆ ನಿಖರವಾದ ಉತ್ತರವಿಲ್ಲ. ಈ ಅವಧಿಯಲ್ಲಿ ನಾವು ಕಲಿತದ್ದೆಷ್ಟು? ನಮಗೆ ಜೀವನೋಪಾಯವನ್ನು ನಡೆಸಲು ಪೂರೈಸಿರುವ ಶಿಕ್ಷಣದ ಅಂಶ ಎಷ್ಟು? ಅದು ನಮ್ಮ ಬುದ್ಧಿಯನ್ನು ಬೆಳೆಸಿದ್ದೆಷ್ಟು? ನಮ್ಮ ಭಾವನೆಗಳಿಗೆ ಪ್ರೇರಕವಾದುದೆಷ್ಟು? ಎನ್ನುವುದರ ಬಗ್ಗೆ ನಿಖರವಾದ ಯಾವ ಉತ್ತರವನ್ನು ನೀಡುವುದಕ್ಕೆ ಸಾಧ್ಯವಾಗುತ್ತಿಲ್ಲ. ಉತ್ತಮ ಅಂಕಗಳಿಸಿದ ಹತ್ತರಷ್ಟು ವಿದ್ಯಾರ್ಥಿಗಳು ಮಾತ್ರ ವಿಜೃಂಭಿಸುತ್ತಾರೆ. ಉಳಿದ ೯೦ ರಷ್ಟು ಮಂದಿ ಯಾರ ಲೆಕ್ಕಕ್ಕೂ, ಗಮನಕ್ಕೂ ಸಿಗದೆ ಹಿಂದೆಯೇ ಉಳಿದು ಬಿಡುತ್ತಾರೆ. ಇವರು ಏನಾದರು? ಯಾಕೆ ಹಾಗಾದರು? ಎನ್ನುವ ಪ್ರಶ್ನೆಗಳನ್ನು ಯಾರು ಕೇಳಿಕೊಳ್ಳದೆ ಸುಮ್ಮನಾಗಿ ಬಿಡುತ್ತಾರೆ. ಶಿಕ್ಷಣ ವ್ಯಕ್ತಿಯ ವ್ಯಕ್ತಿತ್ವದ ವಿಕಸನಕ್ಕೆ, ಆತ ತನ್ನ ಸಮಾಜ, ಸುತ್ತಲ ಪರಿಸರದೊಳಗೆ ಒಂದಾಗಿ ಬದುಕುವುದಕ್ಕೆ ನೆರವಾಗಬೇಕು ಎಂಬುದು ಕಾರಂತರ ಈ ಎಲ್ಲ ವಿಚಾರಗಳ ಗ್ರಹಿಕೆಯಾಗಿದೆ. ಈ ವಿಚಾರಗಳು ವಸಾಹತು ಶಿಕ್ಷಣಕ್ಕೆ ಪರ್ಯಾಯವಾಗಿ ನಮಗೆ ಎಂತಹ ಶಿಕ್ಷಣ ಬೇಕು ಎಂಬ ಪ್ರಶ್ನೆಯನ್ನು ಹುಟ್ಟುಹಾಕಿವೆ.

ಕಾರಂತರ ಕೃತಿಗಳಲ್ಲಿನ ಈ ಪ್ರಶ್ನೆಗೆ ಪ್ರಸ್ತುತದಲ್ಲಿಯೂ ಉತ್ತರ ದೊರಕಿಲ್ಲ. ಏಕೆಂದರೆ ೨೦ನೇ ಶತಮಾನದ ವಸಾಹತು ಶಿಕ್ಷಣಕ್ಕಿಂತ ದಟ್ಟವಾಗಿ ೨೧ನೇ ಶತಮಾನದಲ್ಲಿ ಅದೇ ಇಂಗ್ಲಿಷ್ ಶಿಕ್ಷಣದ ವ್ಯವಸ್ಥೆಯಲ್ಲಿದ್ದೇವೆ. ಶಿಕ್ಷಣ ಪಡೆಯುವುದು ವ್ಯಕ್ತಿತ್ವವನ್ನು ಅರಳಿಸಿಕೊಳ್ಳುವುದಕ್ಕೆ ಎಂಬುದರ ಬದಲಾಗಿ ಬದುಕಿಗೆ ಅನ್ನ ದೊರಕಿಸಿಕೊಳ್ಳುವುದಕ್ಕೆ ಎಂದಾಗಿದೆ. ಈ ಹಿನ್ನೆಲೆಯಲ್ಲಿ ಕಾರಂತರ ಕಾದಂಬರಿಗಳಲ್ಲಿ ವಸಾಹತು ಶಿಕ್ಷಣಕ್ಕೆ ದೊರೆತಿರುವ ಪ್ರತಿಕ್ರಿಯೆಗಳನ್ನು ವಿಶ್ಲೇಷಿಸಿದಾಗ ಒಂದು ಕಾಲಕ್ಕೆ ವಸಾಹತು ಶಿಕ್ಷಣದಿಂದ ವಿಪರೀತ ಏಳು–ಬೀಳುಗಳಾದರೂ ಪ್ರಸ್ತುತದಲ್ಲಿ ಭಾರತೀಯರು ಅದೇ ವಸಾಹತು ಶಿಕ್ಷಣಕ್ಕೆ ಜೋತು ಬಿದ್ದಿರುವುದು ತಿಳಿಯುತ್ತದೆ.

ಈ ರೀತಿಯಲ್ಲಿ ಕುವೆಂಪು ಹೊಸ ಶಿಕ್ಷಣದಿಂದ ಮಲೆನಾಡಿಗರ ಬದುಕು – (ಭಾರತೀಯರ ಬದುಕೂ ಹೌದು) ಸುಧಾರಣೆಯಾಗುತ್ತದೆ ಎಂದು ನಂಬಿದ್ದರು. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮುಕುಂದಯ್ಯ, ಕ್ರೈಸ್ತ ಪಾದ್ರಿಗಳ ಮತಾಂತರವನ್ನು

ಕಟುವಾಗಿ ವಿರೋಧಿಸುತ್ತಾನೆ. ಅದೇ ಕಾಲಕ್ಕೆ ಇಸ್ಕೂಲನ್ನು ಸ್ವಾಗತಿಸುತ್ತಾನೆ. ಭಾರತದ ಸ್ವಾತಂತ್ರ್ಯ ಪೂರ್ವದಲ್ಲಿ ಹೊಸ ಶಿಕ್ಷಣದಿಂದ ಉಂಟಾಗಬಹುದಾದ ಬದಲಾವಣೆಯ ಬಗೆಗೆ ಎಲ್ಲರಿಗೂ ಕುತೂಹಲವಿತ್ತು. ಸ್ವಾತಂತ್ರ್ಯದ ಕಾಲಕ್ಕೆ ಈ ಕುತೂಹಲವು ಭಗ್ನಗೊಂಡಿತು. ಭಾರತೀಯ ಸ್ತರದಲ್ಲಿ ರವೀಂದ್ರನಾಥ ಠಾಕೂರರು ಈ ವಿಫಲತೆಯ ಬಗ್ಗೆ ಗಾಢವಾಗಿ ಚಿಂತಿಸಿದ್ದಾರೆ. ಕುವೆಂಪು ಹೊಸಶಿಕ್ಷಣದ ಪ್ರತಿನಿಧಿಯಾಗಿ ಹೂವಯ್ಯನನ್ನು ಚಿತ್ರಿಸಿದ್ದಾರೆ. ಇಂಗ್ಲಿಷ್ ಶಿಕ್ಷಣದ ವಿಫಲದ ರೂಪವಾಗಿ ರಾಮಯ್ಯನ ಪಾತ್ರ ಚಿತ್ರಿತಗೊಂಡಿದೆ.

ಶಿವರಾಮ ಕಾರಂತರು ನಾಲ್ಕು ಕಾದಂಬರಿಗಳಲ್ಲಿ ವಸಾಹತು ಶಿಕ್ಷಣದ ವೈಫಲ್ಯಗಳನ್ನು ವಿವಿಧ ಪಾತ್ರಗಳ ಮುಖಾಂತರ ಚಿತ್ರಿಸಿದ್ದಾರೆ. 'ಮರಳಿ ಮಣ್ಣಿಗೆ'ಯ ಲಚ್ಚ, 'ಬೆಟ್ಟದ ಜೀವ' ಕಾದಂಬರಿಯ 'ಶಂಭೂ' ಹೊಸ ಶಿಕ್ಷಣದಿಂದಾಗಿ ತಮ್ಮ ಊರು ಹಾಗೂ ಬದುಕುಗಳಿಂದಲೇ ದೂರವಾದರು.

ಸ್ವಾತಂತ್ರ್ಯ ಭಾರತದಲ್ಲಿ ಹೊಸ ಶಿಕ್ಷಣದಿಂದ ಬೆಳೆದ ನವ್ಯ ಲೇಖಕರು ಇಂಗ್ಲಿಷ್ ಶಿಕ್ಷಣದ ವೈಫಲ್ಯಗಳನ್ನು ತಮ್ಮ ಕಾದಂಬರಿಗಳಲ್ಲಿ ನಿರೂಪಿಸಿದ್ದಾರೆ. ಮಹತ್ತರ ಬದಲಾವಣೆಗೆ ಕಾರಣವಾಗುತ್ತದೆ ಎಂದು ನಂಬಲಾಗಿದ್ದ ಈ ಶಿಕ್ಷಣ ಕ್ರಮ ಅನಂತರದಲ್ಲಿ ಉಂಟುಮಾಡಿದ ಪರಿಣಾಮಗಳು ಲಂಕೇಶ, ಅನಂತಮೂರ್ತಿ, ಪೂರ್ಣಚಂದ್ರ ತೇಜಸ್ವಿ, ಶ್ರೀ ಕೃಷ್ಣ ಆಲನಹಳ್ಳಿ, ಚಂದ್ರಶೇಖರ ಕಂಬಾರ ಕಾದಂಬರಿಗಳ ಅಧ್ಯಯನದಿಂದ ಹೊಸ ಶಿಕ್ಷಣ ನೀತಿ ಕುರಿತು ಕಾದಂಬರಿಕಾರರ ನಿಲುವುಗಳನ್ನು ಗುರುತಿಸುವ ಪ್ರಯತ್ನವನ್ನು ಮುಂದಿನ ಅಧ್ಯಾಯದಲ್ಲಿ ಮಾಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೨೦೧೨, ಪುಟ ೩೨-೩೩

೨. ಅದೇ, ಪುಟ ೧೯೮-೧೯೯

೩. ಅದೇ, ಪುಟ ೬೯೬-೬೯೭

೪. ಅದೇ, ಪುಟ ೬೯೮

೫. ಅದೇ, ಪುಟ ೬೯೮

೬. ಕುವೆಂಪು, ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ, ಉದಯರವಿ ಪ್ರಕಾಶನ, ಮೈಸೂರು, ೧೯೭೦, ಪುಟ ೨೭

೭. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೨೦೧೨, ಪುಟ ೩೨-೩೩

೮. ಅದೇ, ಪುಟ ೩೦೧

೯. ಅದೇ, ಪುಟ ೨೮೪

೧೦. ಅಶೋಕ. ಟಿ.ಪಿ: ಅನಂತಮೂರ್ತಿ ವಾಙ್ಮಯ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೧೪, ಪುಟ ೧೦೫,

೧೧. ಅರವಿಂದ ಮಾಲಗತ್ತಿ (ಪ್ರಸಂ), ಕುವೆಂಪು ಕೃತಿ ವಿಮರ್ಶೆ, ಕು ಕ ಅ ಸಂ, ಮೈಸೂರು, ೨೦೦೬, ಪುಟ ೫೩೭

೧೨. ಶಿವರಾಮ ಕಾರಂತ, ಶಿವರಾಮ ಕಾರಂತರ ಕೃತಿ ಶ್ರೇಣಿ, ಸಂಪುಟ : ೮, ಸಂ. ಮಾಲಿನಿ ಮಲ್ಯ (ಸಂ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೨೪೨

೧೩. ಅದೇ, ಪುಟ ೨೬೧

೧೪. ಅದೇ, ಪುಟ ೨೪

೧೫. ಶಿವರಾಮ ಕಾರಂತ ಕೆ, ಮರಳಿ ಮಣ್ಣಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೧, ಪುಟ ೧೫೩

೧೬. ಶಿವರಾಮ ಕಾರಂತ ಕೆ, ಹುಚ್ಚು ಮನಸ್ಸಿನ ಹತ್ತು ಮುಖಗಳು, ಹರ್ಷ ಮುದ್ರಣ, ಪುತ್ತೂರು, ೧೯೪೫ ಪುಟ- ೩೩೩

೧೭. ಶಿವರಾಮ ಕಾರಂತ ಕೆ, ಮರಳಿ ಮಣ್ಣಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೧, ಪುಟ ೧೫೨

೧೮. ಶಿವರಾಮ ಕಾರಂತ ಕೆ, ಸರಸಮ್ಮನ ಸಮಾಧಿ, ಐ.ಬಿ.ಎಚ್ ಪಬ್ಲಿಕೇಷನ್, ಬೆಂಗಳೂರು, ೧೯೯೪, ಪುಟ ೧೫೨

೧೯. ಶಿವರಾಮ ಕಾರಂತ ಕೆ, ಮೂಕಜ್ಜಿಯ ಕನಸುಗಳು: ಸಪ್ನ ಬುಕ್ ಹೌಸ್, ಬೆಂಗಳೂರು, ೧೯೬೮, ಪುಟ ೧೦೧

೨೦. ಶಿವರಾಮ ಕಾರಂತ ಕೆ, ಬೆಟ್ಟದ ಜೀವ, ಐ ಬಿ ಎಚ್ ಪಬ್ಲೀಕೇಷನ್, ಬೆಂಗಳೂರು, ೧೯೯೮, ಪುಟ ೧೦೧

೨೧. ಶಿವರಾಮ ಕಾರಂತ ಕೆ, ಮರಳಿ ಮಣ್ಣಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೧, ಪುಟ ೧೫೫

೨೨. ಅದೇ, ಪುಟ ೧೫೨

೨೩. ಅದೇ, ಪುಟ ೧೫೩

೨೪. ಅದೇ, ಪುಟ ೧೬೬

೨೫. ಅದೇ, ಪುಟ ೧೬೯

೨೬. ಬೆಟ್ಟದ ಜೀವ: ಶಿವರಾಮ ಕಾರಂತ ಕೆ, ಐ ಬಿ ಎಚ್ ಪಬ್ಲೀಕೇಷನ್, ಬೆಂಗಳೂರು, ೧೯೯೮, ಪುಟ ೨೯

೨೭. ಅದೇ, ಪುಟ ೮೩

೨೮. ಅದೇ, ಪುಟ ೮೩

೨೯. ಟಿ.ಪಿ ಅಶೋಕ : ಕೆ.ಶಿವರಾಮ ಕಾರಂತ: ಎರಡು ಅಧ್ಯಯಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೨, ಪುಟ–೧೧೨

೩೦. ಕೆ.ಶಿವರಾಮ ಕಾರಂತ, ಸರಸಮ್ಮನ ಸಮಾಧಿ: ಐ.ಬಿ.ಎಚ್.ಪಬ್ಲೀಷರ್ಸ್, ಬೆಂಗಳೂರು, ೧೯೯೪, ಪುಟ ೨೧

೩೧. ಶಿವರಾಮ ಕಾರಂತ, ಶಿವರಾಮ ಕಾರಂತರ ಕೃತಿ ಶ್ರೇಣಿ, ಸಂಪುಟ : ೮, ಸಂ. ಮಾಲಿನಿ ಮಲ್ಯ (ಸಂ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೨೬೦

೩೨. ಅದೇ, ಪುಟ ೨೪

೩೩. ಅದೇ, ಪುಟ ೨೬೨

೩೪. ಅದೇ, ಪುಟ ೨೪೬

೩೫. ಅದೇ, ಪುಟ ೨೫೧

೩೬. ಅದೇ, ಪುಟ ೨೪೯

೩೭. ಅದೇ, ಪುಟ ೨೫೦

೩೮. ಅದೇ, ಪುಟ ೨೫೨

೩೯. ಅದೇ, ಪುಟ ೨೪೬

೪೦. ಅದೇ, ಪುಟ ೪೨೫

## ಅಧ್ಯಾಯ ೬ : ನವ್ಯ ಪಂಥದ ಆಯ್ದ ಕಾದಂಬರಿಗಳು

೬.೧ ಪಿ.ಲಂಕೇಶ್ ಅವರ ಬಿರುಕು

೬.೨ ಯು ಆರ್ ಅನಂತಮೂರ್ತಿಯವರ ಭಾರತೀಪುರ

೬.೩ ಕೆ ಪಿ ಪೂರ್ಣಚಂದ್ರ ತೇಜಸ್ವಿಯವರ ಕರ್ವಾಲೋ

೬.೪ ಶ್ರೀ ಕೃಷ್ಣ ಆಲನಹಳ್ಳಿಯವರ ಕಾಡು, ಪರಸಂಗದ ಗೆಂಡೆತಿಮ್ಮ

೬.೫ ಚಂದ್ರಶೇಖರ ಕಂಬಾರರ ಕರಿಮಾಯಿ

ಅಧ್ಯಾಯ – ೬

## ನವ್ಯ ಪಂಥದ ಆಯ್ದ ಕಾದಂಬರಿಗಳು

ಆಧುನಿಕ ಶಿಕ್ಷಣ ಪಡೆದವರು ಅನಕ್ಷರಸ್ಥ ಸಮಾಜದ ಒಳಿತಿಗಾಗಿ ದುಡಿಯುತ್ತಾರೆ ಎಂದು ನಂಬಲಾಗಿತ್ತು. ಸ್ವಾತಂತ್ರ್ಯಾನಂತರದಲ್ಲಿ ಭಾರತೀಯ ಸಾಮಾಜಿಕ ಮತ್ತು ರಾಜಕೀಯ ಚಿಂತನೆಗಳಲ್ಲಿ ಬದಲಾದವು. ಅದರಂತೆಯೇ ಶೈಕ್ಷಣಿಕ ಚಿಂತನೆಗಳು ಹೊಸ ರೂಪ ಪಡೆದವು.

ನವೋದಯ ಸಂದರ್ಭದಲ್ಲಿ ಹಳ್ಳಿಯ ಯುವಕರು ನಗರಗಳಿಗೆ ಹೋಗಿ ಶಿಕ್ಷಿತರಾಗಿ ಮರಳಿ ತಮ್ಮ ಊರಿಗೆ ಬಂದು ಊರಿನ ಸುಧಾರಣೆಗೆ ಪ್ರಯತ್ನಿಸುವ ಪಾತ್ರಗಳನ್ನು ಒಳಗೊಂಡ ಹಲವು ಕಾದಂಬರಿಗಳು ರಚಿತಗೊಂಡಿವೆ. 'ಇಂಗ್ಲಿಷ್ ಶಿಕ್ಷಣ' ಭಾರತದ ಸುಧಾರಣೆಯ ಕ್ರಮಗಳಲ್ಲಿ ಒಂದು ಎಂದು ನಂಬಲಾಗಿತ್ತು. ಸ್ವಾತಂತ್ರ್ಯಾನಂತರದಲ್ಲಿ ಈ ಚಿಂತನೆ ಬದಲಾಯಿತು. ಕಲಿತವರು ತಮ್ಮ ಬದುಕನ್ನೆ ಸರಿಮಾಡಿಕೊಳ್ಳದ ಸ್ಥಿತಿಯನ್ನು 'ಬಿರುಕು' ಕಾದಂಬರಿ ವಿವರಿಸುತ್ತದೆ. ಕಲಿತ ಶಿಕ್ಷಣ ಹಾಗೂ ಪಾರಂಪರಿಕ ಶಿಕ್ಷಣ ಇವುಗಳಲ್ಲಿ ಯಾವುದು ಉತ್ತಮ ಎಂಬ ಜಿಜ್ಞಾಸೆಯನ್ನು 'ಕರ್ವಾಲೋ' ಕಾದಂಬರಿ ಚರ್ಚಿಸಿದೆ. ಆಧುನಿಕ ಶಿಕ್ಷಣ ಪಡೆದವನು ಊರನ್ನು ಕಂದಾಚಾರಗಳಿಂದ ಬಿಡುಗಡೆಗೊಳಿಸುವುದನ್ನು 'ಭಾರತೀಪುರ' ಕಾದಂಬರಿ ಮುಖ್ಯವಸ್ತುವನ್ನಾಗಿಸಿಕೊಂಡಿದೆ. 'ಕರಿಮಾಯಿ' ಕಾದಂಬರಿಯು ಅಕ್ಷರ ಕಲಿತವರಿಂದ ಊರಿನ ವ್ಯವಸ್ಥೆ ಹಾಳಾಗುವುದನ್ನು ವಿಶ್ಲೇಷಿಸುತ್ತದೆ.

ಶಾಲೆಯ ನಿರಾಕರಣೆ ಹಾಗೂ ಕಲಿತವರ ವರ್ತನೆಯನ್ನು 'ಕಾಡು' ಮತ್ತು 'ಪರಸಂಗದ ಗೆಂಡೆತಿಮ್ಮ' ಕಾದಂಬರಿಗಳು ಚಿತ್ರಿಸಿವೆ. ಈ ಕಾದಂಬರಿಗಳ ಅಧ್ಯಯನದಿಂದ ನವ್ಯ ಪಂಥದ ಪ್ರಮುಖ ಬರಹಗಾರರು ವಸಾಹತು ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ನಿರ್ವಚಿಸುವ ಪ್ರಯತ್ನ ನಡೆಸಲಾಗಿದೆ.

ಸ್ವಾತಂತ್ರ್ಯ ಭಾರತದಲ್ಲಿ ಬಡತನ, ನಿರುದ್ಯೋಗ, ಅನಕ್ಷರತೆ, ಅಸ್ಪೃಶ್ಯತೆ ಈ ಮೊದಲಾದ ಸಾಮಾಜಿಕ ಸಮಸ್ಯೆಗಳನ್ನು ನಿವಾರಿಸಬೇಕಾಯಿತು. ಅದರೊಂದಿಗೆ ಪ್ರಜಾತಂತ್ರ ವ್ಯವಸ್ಥೆಯನ್ನು ರೂಪಿಸಿ 'ಭಾರತ'ವನ್ನು ಕಟ್ಟುವ ಅನಿವಾರ್ಯತೆ ಎದುರಾಯಿತು. ಭಾರತದ ರಾಜಕೀಯ ಮತ್ತು ಸಾಮಾಜಿಕ ಬದುಕಿನಲ್ಲಿ ಉಂಟಾದ ಈ ಬಗೆಯ ಬಿಕ್ಕಟ್ಟುಗಳು ಭಾರತೀಯ ಭಾಷೆಗಳ ಸಮಕಾಲೀನ ಸಾಹಿತ್ಯವನ್ನು ಪ್ರಭಾವಿಸಿದವು.

ಕನ್ನಡ ನಾಡುನುಡಿಯ ಬಗೆಗಿನ ಅಭಿಮಾನ, ಹಿಂದೂಧರ್ಮದ ಪುನರುಜ್ಜೀವನ, ಪ್ರಭುತ್ವದ ಬಗೆಗಿನ ಭಕ್ತಿ, ಮಾನವೀಯತೆ, ಧರ್ಮ ನಿರಪೇಕ್ಷತೆ ಇವು ನವೋದಯ ಎಂದು ಗುರುತಿಸಿರುವ ಕಾಲಘಟ್ಟದ ಕನ್ನಡ ಸಾಹಿತ್ಯವನ್ನು ಪ್ರಭಾವಿಸಿದ ಮುಖ್ಯ

ಸಂಗತಿಗಳು. ಈ ಕಾಲದ ಬರಹಗಾರರು ಪಾಶ್ಚಾತ್ಯ ಕವಿಗಳಾದ ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್, ಟೆನ್ನಿಸನ್ ಇವರ ಪ್ರಭಾವಗಳಿಗೆ ಒಳಗಾಗಿದ್ದಾರೆ. ಟಾಲ್‌ಸ್ಟಾಯ್ ಮತ್ತು ಠಾಕೂರರು ಈ ಪಂಥದ ಬಹುತೇಕ ಕತೆಗಾರರನ್ನು ಪ್ರಭಾವಿಸಿದ್ದಾರೆ. ಮತ್ತೊಂದೆಡೆ ಗಾಂಧೀಜಿಯನ್ನು ಮೊದಲುಗೊಂಡು ರಾಷ್ಟ್ರೀಯ ಚಳವಳಿಯ ಹಲವು ನೇತಾರರ ಚಿಂತನ ಕ್ರಮಗಳು ಕನ್ನಡದ ಬರಹಗಾರರನ್ನು ಬಹುವಾಗಿ ಪ್ರಭಾವಿಸಿವೆ.

ಕರ್ನಾಟಕವನ್ನು ಕಟ್ಟುವ ಹಾಗೂ ಭಾರತೀಯ ರಾಷ್ಟ್ರೀಯತೆಗೆ ಪ್ರತಿಸ್ಪಂದಿಸಬೇಕಾದ ಗುರುತರವಾದ ಜವಾಬ್ದಾರಿ ಆ ಕಾಲಘಟ್ಟದ ಬರಹಗಾರರಿಗೆ ಎದುರಾಯಿತು. ಹಾಗಾಗಿ ವಸಾಹತುಶಾಹಿಯ ಭಾಗವಾಗಿ ಬಂದ ಆಧುನಿಕತೆಯ ಪರಿಣಾಮಗಳಿಗೆ ಹಿಂದೂ ಧರ್ಮದ ಪುನರುತ್ಥಾನವೇ ಪರಿಹಾರವೆಂದು ರಾಷ್ಟ್ರೀಯವಾದಿ ಚಿಂತಕರು ನಂಬಿದ್ದರು. ಈ ಚಿಂತನಕ್ರಮ ನವೋದಯ ಸಾಹಿತ್ಯ ಪಂಥದ ಆಲೋಚನಾ ಕ್ರಮಗಳನ್ನು ಬಲಪಡಿಸಿದವು. ಅನಂತರ ರೂಪುಗೊಂಡ ನವ್ಯ ಚಳವಳಿಯ ಸಂದರ್ಭದಲ್ಲಿ ನವೋದಯ ಸಾಹಿತ್ಯದ ರೂಪಲಕ್ಷಣಗಳ ಬಗ್ಗೆ ತೀವ್ರವಾದ ಚರ್ಚೆಗಳು ನಡೆದವು.

ಕನ್ನಡದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ನವೋದಯ ಸಾಹಿತ್ಯ ಪಂಥದ ಪ್ರಭಾವ ಇಪ್ಪತ್ತನೇ ಶತಮಾನದ ಅರವತ್ತು ಮತ್ತು ಎಪ್ಪತ್ತರ ದಶಕದ ಕಾಲಕ್ಕೆ ಕಡಿಮೆಯಾಯಿತು. ಇದರ ಸ್ಥಾನದಲ್ಲಿ ನವ್ಯ ಸಾಹಿತ್ಯ ಪಂಥ ಪ್ರವರ್ಧಮಾನಕ್ಕೆ ಬಂದಿತು. ಜಾಗತಿಕ ಮಟ್ಟದಲ್ಲಿ ಎರಡನೇ ಮಹಾಯುದ್ಧ ನಡೆದು ಅಪಾರ ಪ್ರಮಾಣದ ಸಾವು – ನೋವುಗಳು ಉಂಟಾದವು. ಮನುಷ್ಯನೊಳಗಿನ ಕ್ರೌರ್ಯ ಜಗತ್ತಿನ ಮುಂದೆ ಮತ್ತೊಮ್ಮೆ ಬೆತ್ತಲಾಯಿತು. ಯುದ್ಧ ಹಾಗೂ ಅದರ ಪರಿಣಾಮಗಳು, ಮನುಷ್ಯನ ಬದುಕಿನ ಅರ್ಥ, ಅವನ ಆಸೆ, ಆಕಾಂಕ್ಷೆ – ಈ ಸಂಗತಿಗಳ ಪುನರ್‌ವಿಶ್ಲೇಷಣೆ ಆರಂಭವಾಯಿತು.

ಈ ರೀತಿಯ ಕಥಾವಸ್ತುಗಳನ್ನುಳ್ಳ ಯುರೋಪಿಯನ್ ಭಾಷೆಗಳ ಕೃತಿಗಳು ಇಂಗ್ಲಿಷ್ ಭಾಷೆಯ ಮೂಲಕ ಜಗತ್ತಿನ ಇತರೆಡೆಗೆ ಪಸರಿಸಿದವು. ಅಂತೆಯೇ ಆಲ್ಬರ್ಟ್ ಕಮೂ, ಲಾರೆನ್ಸ್, ಬರ್ನಾಡ್ ಷಾ ಮೊದಲಾದ ಹಲವು ಬರಹಗಾರರ ಕೃತಿಗಳು ಭಾರತದ ಪ್ರವೇಶ ಪಡೆದವು. ಇವು ಮಾನವನ ಅಂತರಂಗದ ತೊಳಲಾಟ ಹಾಗೂ ಬಹಿರಂಗದ ಬದುಕಿನ ಸಂಘರ್ಷಗಳನ್ನು ಮರುಚಿಂತನೆಗೆ ಒಳಪಡಿಸಿದ್ದವು. ಇವುಗಳಿಂದ ಪ್ರಭಾವಿತರಾದ ಕನ್ನಡದ ನವ್ಯ ಕಾಲದ ಬರಹಗಾರರು ಅನುಭವಗಳ ಶೋಧನೆಯನ್ನು ತಮ್ಮ ಸಾಹಿತ್ಯದ ಕೇಂದ್ರವಾಗಿಸಿಕೊಂಡರು. ಕನಸು, ಕಲ್ಪನೆ, ಭ್ರಮೆ, ಈ ರೀತಿಯ ಭಾವಗಳು ಬದುಕಿನ ಭಾಗವಾದುದರಿಂದ ಹಲವು ಬರಹಗಾರರ ಸಾಹಿತ್ಯವನ್ನು ಪ್ರಭಾವಿಸಿದವು. ಇದರೊಂದಿಗೆ ಮನುಷ್ಯನಿಗೆ ಕಾಡುವ ಪರಕೀಯತೆ ಅದಕ್ಕೆ ಕಾರಣವಾಗುವ ಸಂಗತಿಗಳನ್ನು ಶೋಧಿಸುವುದು ಮುಖ್ಯವಾಯಿತು. ಈ ಹಿನ್ನೆಲೆಯಲ್ಲಿ ಅಸ್ತಿತ್ವವಾದಿ ಲೇಖಕರ ಸಿದ್ಧಾಂತಗಳ ಪ್ರೇರಣೆಯಿಂದ ಉಂಟಾದ ಅಸಂಗತವಾದ ಹಾಗೂ

ಪರಕೀಯತೆ ನವ್ಯ ಸಾಹಿತ್ಯದ ಲಕ್ಷಣವಾಗಿ ಬೆಳೆದವು. ಈ ಹಿನ್ನೆಲೆಯಲ್ಲಿ ಆಧುನಿಕ ಕನ್ನಡ ನವ್ಯ ಸಾಹಿತ್ಯವನ್ನು ಪಾಶ್ಚಾತ್ಯ ಪ್ರಭಾವಗಳನ್ನು ಅರಿತು ನಮ್ಮದನ್ನಾಗಿಸಿಕೊಳ್ಳಲಿಕ್ಕೆ ನಡೆಸಿದ ಹೋರಾಟದ ಭಾಗವೆಂದೂ ಗುರುತಿಸಲಾಗಿದೆ.

ನವ್ಯ ಸಾಹಿತ್ಯದ ಮುಖ್ಯ ಲಕ್ಷಣಗಳೆನಿಸಿದ ಸಾಂಕೇತಿಕತೆ, ಸಂಕೀರ್ಣತೆ ಹಾಗೂ ಅರ್ಥ ಸಂದಿಗ್ಧತೆಗಳೇ ಆ ಕಾಲದ ಸಾಹಿತ್ಯದ ವಿಶ್ಲೇಷಣೆಗೆ ಹೆಚ್ಚು ಅನುಕೂಲತೆಗಳನ್ನು ಒದಗಿಸಿವೆ. ಬಹುತೇಕ ನವ್ಯ ಲೇಖಕರು ಈ ಎಲ್ಲ ಚಿಂತನೆಗಳಿಂದ ಪ್ರಭಾವಿತರಾದರೂ ಸಮಕಾಲೀನ ಸಮಾಜಿಕ ಸಮಸ್ಯೆಗಳಿಗೆ ವೈಯಕ್ತಿಕ ನೆಲೆಯಲ್ಲಿ ಉತ್ತರ ಹುಡುಕುವ ಪ್ರಯತ್ನದಲ್ಲಿ ತೊಡಗಿದರು. ನವ್ಯ ಸಾಹಿತ್ಯ ಚಿಂತನೆ ಪ್ರವರ್ಧಮಾನಕ್ಕೆ ಬರುವ ಕಾಲಕ್ಕೆ ಭಾರತೀಯ ರಾಜಕೀಯ ಮತ್ತು ಸಾಮಾಜಿಕ ಬದುಕಿನಲ್ಲಿ ಹಲವು ಬದಲಾವಣೆಗಳಾಗಿದ್ದವು. ನವ್ಯ ಪಂಥದ ಕಾದಂಬರಿಕಾರರು ರಾಷ್ಟ್ರೀಯವಾದಿ ಚಿಂತನೆಗಳ ಮಿತಿಯನ್ನು ವಿವರಿಸಿದರು. ಭಾರತೀಯರಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿದ್ದ ಕನಸುಗಾರಿಕೆ, ಆದರ್ಶಗಳು ಮಂಜಿನಂತೆ ಕರಗಿ ವಾಸ್ತವದ ಸಮಸ್ಯೆಗಳು ಮುಖ್ಯವೆನಿಸಿಕೊಂಡವು. ಈ ಬಗೆಯ ಸಂಗತಿಗಳನ್ನು ಕುರಿತ ಚಿಂತನೆ ಮತ್ತು ಚರ್ಚೆಗಳು ಆರಂಭಗೊಂಡವು. ಕನ್ನಡ ಸಾಹಿತ್ಯ ವಲಯವು ಈ ಚರ್ಚೆಗಳನ್ನು ಸಾಹಿತ್ಯದ ನಡುಮನೆಗೆ ತಂದಿತು.

ಕನ್ನಡದ ನವ್ಯ ಪಂಥದಲ್ಲಿ ಗುರುತಿಸಿಕೊಂಡ ಬರಹಗಾರರಲ್ಲಿ ಬಹುಸಂಖ್ಯಾತರು ಟಿ.ಎಸ್.ಎಲಿಯಟ್, ಡಬ್ಲ್ಯೂ.ಬಿ.ಯೇಟ್ಸ್, ಡಿ.ಎಚ್.ಲಾರೆನ್ಸ್, ಕಾಫ್ಕ, ಕಮು, ಸಾತ್ರೆ ಮೊದಲಾದ ಪಶ್ಚಿಮದ ಸಾಹಿತಿಗಳ ಪ್ರಭಾವಕ್ಕೆ ಒಳಗಾದವರಾಗಿದ್ದರು. ಸ್ವಾತಂತ್ರ್ಯೋತ್ತರ ಭಾರತದ ಪ್ರಮುಖ ರಾಜಕೀಯ ಚಿಂತಕ ಡಾ.ರಾಮಮನೋಹರ ಲೋಹಿಯಾ ಅವರ ರಾಜಕೀಯ ಚಿಂತನೆಗಳು ಈ ಕಾಲದ ಬರಹಗಾರರನ್ನು ಬಹುವಾಗಿ ಪ್ರಭಾವಿಸಿವೆ.

ಕನ್ನಡದ ಆರಂಭ ಕಾಲದ ಕಾದಂಬರಿಗಳು ವಸಾಹತುಶಾಹಿಯ ದೆಸೆಯಿಂದ ಭಾರತೀಯ ಸಮಾಜದಲ್ಲಾದ ಬದಲಾವಣೆಗಳಿಗೆ ನೀಡಿದ ಪ್ರತಿಕ್ರಿಯೆಯ ರೂಪವಾಗಿ ರಚನೆಗೊಂಡವು. ದೇಶೀಯ ಸಂಸ್ಕೃತಿಗೆ ಒದಗಿದ ಪ್ರತಿರೋಧವನ್ನು ಎದುರಿಸುವಲ್ಲಿ ಪರಂಪರಾಗತ ಮೌಲ್ಯ ಚಿಂತನೆಗಳನ್ನು ರಕ್ಷಿಸುವ ಪಾತ್ರಗಳನ್ನು ಮುಖ್ಯಧಾರೆಗೆ ತಂದು ಸಂಸ್ಕೃತಿ ರಕ್ಷಣೆಯ ಚಿಂತನೆಯನ್ನು ಬಿತ್ತುವುದನ್ನೆ ಪ್ರಧಾನ ಆಶಯಗಳನ್ನಾಗಿಸಿಕೊಂಡವು. ಅನಂತರದ ನವೋದಯ ಕಾಲದ ಬಹುತೇಕ ಕಾದಂಬರಿಗಳು ಇಂಗ್ಲಿಷರಿಂದ ರೂಪುಗೊಂಡ ಶಿಕ್ಷಣ ಕ್ರಮವು ಭಾರತೀಯ ಪರಿಸರದಲ್ಲಿ ಮಾಡಿದ ಮಾರ್ಪಾಡುಗಳನ್ನು ಕೆಲವೊಮ್ಮೆ ಆಂಶಿಕವಾಗಿ, ಮತ್ತೆ ಕೆಲವೊಮ್ಮೆ ಪ್ರಧಾನವಾಗಿ ಚಿಂತಿಸಿ ಚರ್ಚಿಸಿದವು. ಈ ಅವಧಿಯಲ್ಲಿನ ಬಹುತೇಕ ಕಾದಂಬರಿಕಾರರು 'ನವಶಿಕ್ಷಿತರು ಭಾರತೀಯ ಸಮಾಜದ ಸುಧಾರಕರು' ಎನ್ನುವ ಚಿತ್ರಣವನ್ನು ನೀಡಿದರು.

ನವೋದಯದ ಕಾಲಕ್ಕೆ ಆದರ್ಶಮಯ ಸಮಾಜವನ್ನು ಕಟ್ಟುವ ಪಾತ್ರಗಳಂತೆ ಕಾದಂಬರಿಯ ಶಿಕ್ಷಿತ ನಾಯಕ ಪಾತ್ರಗಳು ರೂಪುಗೊಂಡಿದ್ದವು. ನವ್ಯದ ಕಾಲಕ್ಕೆ ಹೀಗೆ ಶಿಕ್ಷಿತಗೊಂಡ ಅಂದರೆ ದೇಶೀಯ ಹಾಗೂ ವಿದೇಶಿಯ ನೆಲದಲ್ಲಿ ಇಂಗ್ಲಿಷ್ ಶಿಕ್ಷಣ ಕ್ರಮದಲ್ಲಿ ವಿದ್ಯಾಭ್ಯಾಸ ಪಡೆದ ಪಾತ್ರಗಳು ಕಾದಂಬರಿಯ ಕೇಂದ್ರಪಾತ್ರಗಳಾಗಿ ಚಿತ್ರಿತವಾದವು. ಈ ಪಾತ್ರಗಳಲ್ಲಿ ಬಹುತೇಕರು ಸಮಾಜದ ಉನ್ನತಿಯ ಕಡೆಗೆ ತುಡಿಯುವುದಿರಲಿ ವೈಯಕ್ತಿಕ ಏಳಿಗೆಯನ್ನೂ ಹೊಂದಲಾರದೆ ವಿಫಲಗೊಂಡ ಪಾತ್ರಗಳಾಗಿ ಚಿತ್ರಿತಗೊಂಡಿದ್ದಾರೆ. ಹೀಗೆ ಒಂದು ಕಾಲಮಾನದಲ್ಲಿ ಬಹುದೊಡ್ಡ ಮೌಲ್ಯವಾಗಿ ನಿರೂಪಿತಗೊಳ್ಳುವ ಚಿಂತನೆ ಬದಲಾದ ಕಾಲದಲ್ಲಿ ಸಾಮಾಜಿಕ ವೈಫಲ್ಯವಾಗಿ ಚಿತ್ರಿತವಾಗುವುದರ ಹಿಂದಿರುವ ಚಾರಿತ್ರಿಕ ಮತ್ತು ಸಾಹಿತ್ಯಕ ಸಂಗತಿಗಳನ್ನು ಚರ್ಚಿಸಬೇಕಾದ ತುರ್ತು ಎದುರಾಗಿದೆ. ಅಂದರೆ ಇಂಗ್ಲಿಷ್ ಶಿಕ್ಷಣ ಭಾರತೀಯರ ಬದುಕಲ್ಲಿ ಮಹತ್ತರವಾದ ಬದಲಾವಣೆಗಳನ್ನು ತರುತ್ತದೆ ಎಂದುಕೊಂಡಿದ್ದ ಕಾಲ ಬದಲಾಗಿ, ಅದರಿಂದ ಉಂಟಾದ ಪರಿಣಾಮಗಳನ್ನು ಕುರಿತು ಈ ಕಾಲದ ಬಹುತೇಕ ಕಾದಂಬರಿಗಳು ಚರ್ಚಿಸಿವೆ.

**೬.೧ ಪಿ.ಲಂಕೇಶ್ ಅವರ 'ಬಿರುಕು'**

ಬ್ರಿಟಿಷರ ದಾಸ್ಯದಿಂದ ಭಾರತವನ್ನು ಮುಕ್ತಗೊಳಿಸಬೇಕೆಂಬುದು ರಾಷ್ಟ್ರೀಯವಾದಿ ಚಿಂತಕರ ಮುಂದೆ ಇದ್ದ ಏಕೈಕ ಉದ್ದೇಶ. ಸ್ವಾತಂತ್ರ್ಯ ಅನಂತರದ ಭಾರತದಲ್ಲಿ ಅಸಂಖ್ಯಾತ ಸಮಸ್ಯೆಗಳು ಗೊಂದಲಗಳು ತೆರೆದುಕೊಂಡವು. ಕನ್ನಡದ ಸಾಹಿತ್ಯ ಪರಿಸರದಲ್ಲಿ ನವೋದಯ ಪಂಥದ ರಮ್ಯವಾದ ತನ್ನ ಪ್ರಖರತೆಯನ್ನು ಕಳೆದುಕೊಂಡಿತು. ಇದಕ್ಕೆ ಎದುರಾಗಿ ವಾಸ್ತವವಾದದ ನೆಲೆಯಲ್ಲಿ ವಿಡಂಬನಾತ್ಮಕವಾಗಿ ನವ್ಯ ಸಾಹಿತ್ಯ ತನ್ನ ಹಾದಿಯನ್ನು ನಿಚ್ಚಳಗೊಳಿಸಿಕೊಂಡಿತು. ಈ ಪಂಥದಲ್ಲಿ ವೃತ್ತಿ ಕೇಂದ್ರಿತ ಹಾಗೂ ಆತ್ಮಕೇಂದ್ರಿತ ಚಿಂತನೆಗಳು ಮುಖ್ಯವೆನಿಸಿಕೊಂಡವು.

ನವೋದಯದ ಸಂದರ್ಭದಲ್ಲಿ ರಚನೆಗೊಂಡಿರುವ ಬಹುತೇಕ ಕಾದಂಬರಿಗಳಲ್ಲಿ ಒಂದೆಡೆ ಹಳ್ಳಿಗಳಿಂದ ನಗರಗಳಿಗೆ ವಲಸೆ ಹೋಗಿ ಶಿಕ್ಷಣ ಪಡೆದುಕೊಂಡು, ಅನಂತರದಲ್ಲಿ ಹಳ್ಳಿಗಳಿಗೆ ಮರಳಿ ತನ್ನ ಸುತ್ತಲಿನ ಬದುಕನ್ನು ಸುಧಾರಿಸುವ ಪಾತ್ರಗಳು ಚಿತ್ರಿತಗೊಂಡಿವೆ. ಉದಾಹರಣೆಗೆ 'ಕಾನೂರು ಹೆಗ್ಗಡಿತಿ'ಯ ಹೂವಯ್ಯ. ಮತ್ತೊಂದೆಡೆ ಇಂಗ್ಲಿಷ್ ಶಿಕ್ಷಣ ಪಡೆಯಲು ನಗರಕ್ಕೆ ಹೋಗಿ ನಗರದ ಬದುಕಿನ ವ್ಯಾಮೋಹಕ್ಕೆ ಒಳಗಾಗಿ ತಮ್ಮ ಬದುಕನ್ನು ದುರಂತವಾಗಿಸಿಕೊಂಡ ಪಾತ್ರಗಳೂ ನಿರೂಪಿತಗೊಂಡಿವೆ. ಉದಾಹರಣೆಗೆ 'ಮರಳಿ ಮಣ್ಣಿಗೆ' ಕಾದಂಬರಿಯ ರಾಮ ಐತಾಳ.

ಸಾಮಾಜಿಕ ದೃಷ್ಟಿಯಿಂದ ಸಮುದಾಯದ ಒಳಿತಿಗಾಗಿ ಬದುಕುವುದು, ಆದರ್ಶಮಯವಾದ ಬದುಕನ್ನು ನಿರ್ವಹಿಸುವ ಬಗೆಗಿನ ಚಿಂತನ ಕ್ರಮ ಬದಲಾಗಿ ವ್ಯಕ್ತಿಯ ಅಂತರಂಗದ ವ್ಯಕ್ತಿತ್ವದ ಶೋಧವನ್ನು ನವ್ಯ ಸಾಹಿತ್ಯ ತನ್ನ ಕೇಂದ್ರ

ಆಶಯವನ್ನಾಗಿಸಿಕೊಂಡಿದೆ. ನವ್ಯ ಸಾಹಿತ್ಯ ಚಳವಳಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ ಪಿ.ಲಂಕೇಶ್ ಅವರ 'ಬಿರುಕು' (೧೯೬೭) ಕಾದಂಬರಿ ಪ್ರಕಟಗೊಂಡಿತು. 'ಬಿರುಕು' ಕಾದಂಬರಿಯ ಕೇಂದ್ರ ಪಾತ್ರ ಬಸವರಾಜು. ಈತ ಹಳ್ಳಿಯವನು, ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದು, ಪಿಎಚ್.ಡಿ ಪದವಿ ಪಡೆಯಲು ಬೆಂಗಳೂರಿಗೆ ಬಂದಿದ್ದಾನೆ. ಬಸವರಾಜು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅಕ್ಷರ ಕಲಿತ ಮೊದಲ ತಲೆಮಾರಿನ ತವಕ ತಲ್ಲಣಗಳ ಪ್ರತಿನಿಧಿಯಂತೆ ಗೋಚರಿಸುತ್ತಾನೆ. ಗ್ರಾಮೀಣ ಪರಿಸರದಿಂದ ನಗರದೆಡೆಗೆ ಬಂದಿರುವ ಬಸವರಾಜನ ತಾಕಲಾಟಗಳು ಈ ಕಾದಂಬರಿಯ ಕೇಂದ್ರ ವಸ್ತು. ನಗರ ಬದುಕಿನ ಹಲವು ಸಂದಿಗ್ಧಗಳಲ್ಲಿ ಸಿಲುಕಿದ ಬಸವರಾಜು ತನ್ನ ತಾಯಿಯನ್ನು ನೆನೆದು ಮರುಕಪಡುತ್ತಾನೆಯೇ ಹೊರತು ಹಳ್ಳಿಗೆ ಆತ ಹಿಂದಿರುಗುವುದಿಲ್ಲ.

ಈ ಕಾದಂಬರಿ ಮೇಲುನೋಟಕ್ಕೆ ಬಸವರಾಜನ ಬದುಕಿನ ಕತೆಯಂತೆ ಕಂಡರೂ ಉನ್ನತ ಶಿಕ್ಷಣದ ಕೇಂದ್ರವಾದ ವಿಶ್ವವಿದ್ಯಾನಿಲಯಗಳಲ್ಲಿನ ಅಧ್ಯಾಪಕ ವರ್ಗ, ಅವರ ಸೋಗಲಾಡಿತನ ಮೊದಲಾದ ಶೈಕ್ಷಣಿಕ ವಿಚಾರಗಳ ವ್ಯಥೆಯನ್ನು ವಿಮರ್ಶೆಗೆ ಒಳಗು ಮಾಡಿದೆ. ಬಸವರಾಜು ತನ್ನ ಸುತ್ತಲಿನ ಬದುಕಿನಲ್ಲಿರುವ ಡಾಂಭಿಕತೆ, ಕಪಟ, ಸ್ವಾರ್ಥ, ನಟನೆ, ಕೃತಕತೆಗಳೊಡನೆ ಮುಖಾಮುಖಿಯಾಗುವ ಸಂದರ್ಭಗಳು ಹೆಜ್ಜೆಹೆಜ್ಜೆಗೂ ಸೃಷ್ಟಿಯಾಗುತ್ತವೆ. ಅವುಗಳೊಂದಿಗೆ ತನ್ನೊಳಗಿನ ಮಾನಸಿಕ ತುಮುಲಗಳಿಂದಲೂ, ಅತಿಯಾದ ಭಾವುಕತೆಯಿಂದಲೂ ಬಸವರಾಜು ನಲುಗುತ್ತಾನೆ. ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ ಎನ್ನುವುದು ಬಸವರಾಜನ ಸಂದಿಗ್ಧತೆ. ನಗರದ ಬದುಕನ್ನು ಒಪ್ಪಿಕೊಳ್ಳಲಾರದ ಆತನಿಗೆ ಹಳ್ಳಿಗೆ ಮತ್ತೆ ಹಿಂದಿರುಗುವ ಮನಸ್ಸು ಇಲ್ಲ.

ವಿಶ್ವವಿದ್ಯಾಲಯದಲ್ಲಿ ಕಲಿತ ಬಸವರಾಜು ತಾನು ಪಡೆದ ವಿದ್ಯೆಯಿಂದ ತನ್ನ ಬದುಕನ್ನು ಹಸನುಗೊಳಿಸಿಕೊಳ್ಳಬೇಕಿತ್ತು. ಅಲ್ಲದೇ ತನ್ನ ಸುತ್ತಲಿನ ಬದುಕನ್ನು ಸುಧಾರಿಸುವ ಪ್ರಯತ್ನ ನಡೆಸಬೇಕಿತ್ತು. ಆದರೆ ತನ್ನ ಬದುಕನ್ನು ಸರಿಯಾದ ದಾರಿಯಲ್ಲಿ ಕೊಂಡೊಯ್ಯುವುದಕ್ಕೆ ಅವನ ಕಲಿಕೆ ಇಲ್ಲಿ ನೆರವಾಗುವುದೇ ಇಲ್ಲ. ಬಸವರಾಜುವಿನ ಕಲಿಕೆಯು ಆತನ ಬದುಕಿಗೆ ಯಾವ ಬಗೆಯಲ್ಲಿ ನೆರವಾಗಿದೆ ಎಂಬ ಜಿಜ್ಞಾಸೆ ಮೂಡುತ್ತದೆ. ಈ ಹಿನ್ನೆಲೆಯಲ್ಲಿ ಕಾದಂಬರಿಯ ವಿಶ್ಲೇಷಣೆಯನ್ನು ನಡೆಸಲಾಗಿದೆ.

ತಾನು ವಾಸ ಮಾಡುತ್ತಿದ್ದ ಕೊಠಡಿಯ ಬಾಡಿಗೆ ಕಟ್ಟಲಾರದ ಬಸವರಾಜನನ್ನು ರೂಂ ಖಾಲಿ ಮಾಡುವಂತೆ ಮಾಲೀಕ ಗಂಗಪ್ಪ ಒತ್ತಾಯ ಮಾಡುತ್ತಾನೆ. ಆ ವಾಗ್ವಾದದಲ್ಲಿ ಬಸವರಾಜನನ್ನು 'ದೇಶ ಉದ್ಧಾರ ಮಾಡುವ ನಿನಗೆ ಅನುಯಾಯಿಗಳಿರಬೇಕಲ್ಲ' ಎಂದು ಆತ ಹೀಯಾಳಿಸುತ್ತಾನೆ. ಮಾತು ಮುಂದುವರೆಸಿ 'ನಿನಗೆ ವಿದ್ಯೆ ಇದೆ, ಬುದ್ಧಿ ಇದೆ, ಅದರಲ್ಲಿ ಕೊಂಚ ಹಂಚಿ ಕೊಟ್ಟರೆ, ಈ ತಾಪತ್ರಯ ಯಾವುದು ಇರುವುದಿಲ್ಲ' ಎನ್ನುತ್ತಾನೆ. ವಿದ್ಯಾವಂತನಾದ ಬಸವರಾಜನು ತನ್ನ ತಿಳಿವಿನಿಂದ ಸಂಪಾದನೆ ಮಾಡುವುದು

ಕಷ್ಟಕರವಾಗುವುದಿಲ್ಲ ಎನ್ನುವುದನ್ನು ಗಂಗಪ್ಪನ ಈ ಮಾತುಗಳು ಧ್ವನಿಸುತ್ತವೆ. ಸಂಶೋಧನಾ ವಿದ್ಯಾರ್ಥಿಯಾದ ಬಸವರಾಜು ತನ್ನ ವೇತನದ ಬಗ್ಗೆ ಕಛೇರಿಗೆ ಹೋಗಿ ವಿಚಾರಿಸುತ್ತಾನೆ. ಆಗ ಗುಮಾಸ್ತನೊಬ್ಬ ಬಸವರಾಜನ ಪೂರ್ವಾಪರಗಳನ್ನು ವಿಚಾರಿಸಿ 'ಅಂಗ್ರೇಜಿ ನಾಟಕ ಓದಿದ್ರೆ ಇವೆಲ್ಲ ಗೊತ್ತಾಗೊಲ್ಲ ನೆನಪಿರಲಿ' ಎನ್ನುತ್ತಾನೆ. ಈ ಮಾತು ಬಸವರಾಜನ ಕ್ರಿಯೆಯನ್ನು ಅಣಕಿಸುತ್ತದೆ.

> ನಾನು ಕೆಮಿಸ್ಟ್ರಿ ತಗೊಂಡು ಡಿಗ್ರಿ ಮಾಡಿದೆ. ಏನು ಉಪಯೋಗ ಹೇಳಿ,
> ನಾನು ಓದಿದ್ದಕ್ಕೂ ಇಲ್ಲಿ ಮಾಡೋ ಕೆಲಸಕ್ಕೂ ಸಂಬಂಧವೇ ಇಲ್ಲ[೧]

ಎನ್ನುವ ಮತ್ತೊಬ್ಬ ಗುಮಾಸ್ತ ಶಿವಣ್ಣನ (ಅಲ್ಲೇ ಪರಿಚಿತನಾಗುವ) ಈ ಮಾತುಗಳು ಶಿಕ್ಷಣದ ವ್ಯವಸ್ಥೆಯ ವೈಫಲ್ಯಗಳನ್ನು ನಿರೂಪಿಸುತ್ತವೆ. 'ಇಪ್ಪತ್ತನೇ ಶತಮಾನದ ಇಂಗ್ಲಿಷ್ ನಾಟಕಗಳ' ಬಗ್ಗೆ ಸಂಶೋಧನೆ ಮಾಡುತ್ತಿರುವ ಬಸವರಾಜುವಿಗೆ ತನ್ನ ವೇತನದ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವುದು ಕಷ್ಟದ ಕೆಲಸವಾಗುತ್ತದೆ. ಅವನ ಓದು, ತಿಳಿವಳಿಕೆ ಹಾಗೂ ಆತನ ದೈನಂದಿನ ಬದುಕಿನ ಚಟುವಟಿಕೆಗಳು ಸಮನ್ವಯ ಸಾಧಿಸುವಲ್ಲಿ ವಿಫಲಗೊಳ್ಳುತ್ತವೆ.

ಒಂದು ಬಿಲ್ಲನ್ನು ಪಾಸು ಮಾಡಿಸಿಕೊಳ್ಳಲಿಕ್ಕಾಗಿ ಬಸವರಾಜುವಿನ ರೂಮಿನ ಒಡೆಯ ಗಂಗಪ್ಪ ಬಸವರಾಜುವಿಗೆ ತಮ್ಮ ಪ್ರೊಫೆಸರ್ ರಂಗಯ್ಯನವರಿಗೆ ಫೋನ್ ಮಾಡಿ ಪರಿಚಯ ಮಾಡಿಸಿಕೊಡುವಂತೆ ಬೆನ್ನು ಬೀಳುತ್ತಾನೆ. 'ಇದು ನೀತಿಯ ವಿಚಾರ, ಪ್ರಭಾವದ ವಿಚಾರ, ಇವೆಲ್ಲ ನನಗೆ ಬೇಕಿಲ್ಲ' ಎಂದರೂ ಗಂಗಪ್ಪ ಬಿಡುವುದಿಲ್ಲ. ಆಗ ಸಿಟ್ಟಾದ ಗಂಗಪ್ಪನು ಬಸವರಾಜುವಿಗೆ 'ನಿಮಗೆ ಇಷ್ಟ ಬಂದ ಹಾಗೇ ನೀವು ಮಾಡ್ತೀರ, ಬೇಡ ಅನ್ನೋಲ್ಲ, ಆದರೆ ಕೃತಜ್ಞತೆ ಅನ್ನೋದನ್ನ ಬೆಳೆಸಿಕೊಳ್ಳಿ, ಅದು ವಿದ್ಯಾವಂತರ ಲಕ್ಷಣ' ಎಂದು ರೇಗುತ್ತಾನೆ. ಗಂಗಪ್ಪನ ಈ ಮಾತುಗಳು ಆ ಕ್ಷಣದ ತನ್ನ ಕಾರ್ಯ ಸಾಧನೆಗಾಗಿ ಆಡಿದ ಮಾತುಗಳಾಗಿವೆ. ಆದರೆ ವಿದ್ಯಾವಂತರಿಂದ ಸಮಾಜದ ನಿರೀಕ್ಷೆಗಳು ಏನಾಗಿರುತ್ತವೆ ಎಂಬುದು ಈ ಮಾತುಗಳಿಂದ ವ್ಯಕ್ತವಾಗುತ್ತವೆ. ಕಲಿತವನನ್ನು, ಕಲಿಯದವನನ್ನು ಸಮಾಜ ನೋಡುವ ದೃಷ್ಟಿಕೋನಗಳು ಭಿನ್ನವಾಗಿವೆ. ವಿದ್ಯಾವಂತರಾದೊಡನೆ ಹಲವು ಬಗೆಯ ಹೇರಿಕೆಗಳನ್ನು ಸಮಾಜ ಆರೋಪಿಸುತ್ತದೆ. ಬಸವರಾಜು ಹೀಗೆ ಕಾದಂಬರಿಯಲ್ಲಿ ಹಲವರ ಅವಹೇಳನಕ್ಕೆ ಒಳಗಾಗುತ್ತಾನೆ.

ಗಂಗಪ್ಪನಿಂದ ನಿಂದನೆಗೊಳಗಾದ ಬಸವರಾಜು ಆತನ ರೂಮನ್ನು ಬಿಟ್ಟು ಹೊರಡುತ್ತಾನೆ. ಹಾಗೆ ಹೊರಟವನು 'ರಾಜಭವನ' ಮಹಡಿಯಲ್ಲಿ ಕುಳಿತು ಕುಡಿಯಲಾರಂಭಿಸುತ್ತಾನೆ. ಅಲ್ಲಿಗೆ ಬರುವ ಹತ್ತು ಹನ್ನೊಂದು ಮಂದಿ ಪುಂಡರ ನಾಯಕನೆನಿಸಿಕೊಂಡವನೊಂದಿಗೆ ಮಾತನಾಡುತ್ತಾ ತನ್ನ ಊರಿನ ದುರುಗಣ್ಣನ ಬಗ್ಗೆ ಹೀಗೆ ಹೇಳುತ್ತಾನೆ –

ನಮ್ಮೂರಲ್ಲಿ ದುರುಗಣ್ಣ ಅಂತ ಒಬ್ಬ ಮುದುಕ ಇದ್ದಾನೆ. ಸುಮಾರು ಎಂಬತ್ತು ವರ್ಷದ ಮುದುಕ. ಅವನ್ನ ನೋಡೋಕೆ ಹೋದೆ, ಬಾ ಮಗಾ ಅಂದ. ಚೆನ್ನಾಗಿದ್ದೀಯಾ ಅಜ್ಜ ಅಂದೆ. ಹೀಗೆ ಇದೀನಪ್ಪ, ನೀನೇನ್ಮಾಡ್ತಿದ್ದಿ ಹೇಳು, ನನ್ನ ಕಾಲ ಆಯ್ತಲ್ಲ ಅಂದ. ನಾನೀಗ ಕೆಲಸದಲ್ಲಿದ್ದೇನಜ್ಜಾ, ಇನ್ನೂರೈವತ್ತು ರೂಪಾಯಿ ಸಂಬಳ ಬರುತ್ತೆ ಅಂದೆ. ಆತ ಕೊಂಚ ಹೊತ್ತು ಚಿಂತಿಸಿದ. ಮಗಾ, ನಿನ್ನಂಥೋರ ನೋಡಿದ್ರೆ ಅಳು ಬರುತ್ತೈತೋ ಅಂದ, ನಾನು ಅಚ್ಚರಿಗೊಂಡೆ, ನಿನ್ನಂಥೊರೆಲ್ಲ ಹೊಂಟೊದ್ರೆ ಯಾರಪ್ಪಾ ನಮ್ಮನ್ನ ಇಲ್ಲಿ ನೋಡ್ಕೊಂಬೋರು, ನೀವೆಲ್ಲ ಸತ್ತಂಗೆ ಕಣೋ ಅಂದ. ಈ ಜನಕ್ಕೆ ಇದ್ಯೆ ಇಲ್ಲ, ಬುದ್ಧಿ ಇಲ್ಲ–ಇವರನ್ನೆಲ್ಲ ಯಾರು ಮಗಾ ಕೈ ಹಿಡಿದು ನಡೆಸೋರು?[೨]

ದುರುಗಣ್ಣನ ಈ ಮಾತುಗಳು ಹಳ್ಳಿಯಿಂದ ನಗರಕ್ಕೆ ಬಂದು ವಿದ್ಯಾವಂತರಾದ ಬಸವರಾಜನಂತಹ ಯುವಕರ ಬಗ್ಗೆ ಆ ಹಳ್ಳಿಗಳ ನಿರೀಕ್ಷೆಗಳು ಯಾವ ಬಗೆಯಲ್ಲಿರುತ್ತವೆ ಎನ್ನುವುದಕ್ಕೆ ಉದಾಹರಣೆಯಾಗಿವೆ. 'ನೀನು ಹೊಂಟೊದ್ರೆ ಯಾರಪ್ಪ ನಮ್ಮನ್ನ ಇಲ್ಲಿ ನೋಡ್ಕೋಂಬೊರು' ಎನ್ನುವ ಮಾತುಗಳು ಇವತ್ತು ಹಳ್ಳಿಗಳಲ್ಲಿ ಮಕ್ಕಳ ವಲಸೆಯಿಂದ ಅನಾಥ ಪ್ರಜ್ಞೆ ಅನುಭವಿಸುತ್ತಿರುವ ಹಿರಿಯರಿಗೆ ಮಕ್ಕಳ ವಲಸೆಯಿಂದ ಒದಗಿ ಬಂದಿರುವ ಸಂಕಷ್ಟದ ಸ್ಥಿತಿಯ ಮುನ್ಸೂಚನೆಯಂತೆ ಭಾಸವಾಗುತ್ತವೆ. 'ಈ ಜನಕ್ಕೆ ಇದ್ಯೆ ಇಲ್ಲ ಬುದ್ಧಿ ಇಲ್ಲ – ಇವರ್ನೆಲ್ಲ ಯಾರು ಮಗಾ ಕೈಹಿಡಿದು ನಡೆಸೋರು' ಎನ್ನುವ ಮಾತುಗಳು ಕೂಡ ಕಲಿಯದಿರುವವರನ್ನು ಕಲಿತವರು ಪೊರೆಯಬೇಕು ಎಂಬ ಅಭಿಲಾಷೆಯಿಂದ ಹುಟ್ಟಿಕೊಂಡ ಕೋರಿಕೆಯಾಗಿದೆ. ಆದರೆ ಬಸವರಾಜ ಈ ರೀತಿಯ ಯಾವ ಸಂದಿಗ್ಧತೆಗಳಿಗೂ ಮುಖಾಮುಖಿಯಾಗುವುದೇ ಇಲ್ಲ. ಈ ಮನೋಭಾವದ ಸೃಷ್ಟಿಯ ಹಿಂದಿರುವ ಕಾದಂಬರಿಕಾರನ ಆಶಯಗಳನ್ನು ಅರ್ಥೈಸಿಕೊಳ್ಳಬೇಕಾಗಿದೆ.

'ಹೊಸದಾಗಿ ವಿದ್ಯೆ ಕಲಿತವರು' ತುಂಬಾ ಅಪಾಯ ಎನ್ನುವ ಪ್ರೊ.ರಂಗಯ್ಯನ ವಿವರಣೆ ಕೇಳಿದಾಗ ಬಸವರಾಜು ಸಿಟ್ಟಾಗುತ್ತಾನೆ. ಪ್ರೊ. ರಂಗಯ್ಯನವರು ಸಾಹಿತಿ ಕಂ ಸರ್ಕಾರಿ ಅಧಿಕಾರಿ ಚಂದ್ರಕಾಂತರ ಬಗ್ಗೆ ಮಾತನಾಡುವಾಗ ಚಂದ್ರಕಾಂತರನ್ನು ಕುರಿತು ಬಸವರಾಜು

ಅಂಥ ಪದ್ಯ ಬರೆಯೋದು, ಅಂಥ ವಿದ್ಯೆ ಕಲಿಸೋದು, ಅಂಥ ಆಫೀಸು ನಡೆಸೋದು, ಅಂಥ ವ್ಯಕ್ತಿಯಾಗಿರೋದು, ಅಂಥ ಸ್ವಾರ್ಥ, ಅಂಥ ಭ್ರಮೆ ಅದರ ಬಗ್ಗೆಯೇನೂ ಹೇಳಿಲ್ಲವೇ ಅಂತ ಕೇಳಬೇಕು ಅನ್ಸುತ್ತೆ[೩]

ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. 'ಅಂಥ ಜನರನ್ನು ವಿದ್ಯೆಯ ಬಗ್ಗೆ ಯೋಜನೆ ಹಾಕೋಕೆ ನೇಮಿಸಿಕೊಳ್ಳೋದು' ಎನ್ನುವ ಮಾತುಗಳು ಈಗಲೂ ಶಿಕ್ಷಣ

ಕ್ಷೇತ್ರದಲ್ಲಿ ನೀತಿಗಳನ್ನು ರೂಪಿಸುತ್ತಿರುವವರು ಯಾರು? ಎನ್ನುವುದು ಹಾಗೂ ಅವರ ಅರ್ಹತೆಗಳೇನು?' ಎನ್ನುವ ಪ್ರಶ್ನೆಗಳನ್ನು ಪ್ರಸ್ತುತದಲ್ಲಿ ಹೆಚ್ಚಾಗಿ ಕೇಳಬೇಕಾದ ಅನಿವಾರ್ಯ ಎದುರಾಗಿದೆ.

**೬.೨ ಯು ಆರ್ ಅನಂತಮೂರ್ತಿ ಅವರ 'ಭಾರತೀಪುರ'**

ಪಾಶ್ಚಾತ್ಯ ವಿದ್ಯಾಭ್ಯಾಸ ಪಡೆದ ಯುವಕನೊಬ್ಬ ಮರಳಿ ತನ್ನ ಊರಿಗೆ ಬಂದು ತನ್ನ ಊರಿನವರ ಬದುಕಲ್ಲಿ ಬದಲಾವಣೆಯನ್ನು ತರುವುದಕ್ಕಾಗಿ ಪ್ರಯತ್ನಿಸುವ ಕತೆಯೇ 'ಭಾರತೀಪುರ' ಕಾದಂಬರಿಯ ಮುಖ್ಯ ವಸ್ತು. ಕಾದಂಬರಿಯ ಕಥಾ ನಾಯಕ ಜಗನ್ನಾಥ ಇಂಗ್ಲೆಂಡಿನಲ್ಲಿ ಕಲಿತವನು. ಮಾರ್ಕ್ಸಿಸ್ಟ್ ವಿಚಾರಗಳ ಪ್ರಭಾವಕ್ಕೆ ಒಳಗಾದ ಈತ ತನ್ನ ಹಳ್ಳಿಯಲ್ಲಿನ ಕಂದಾಚಾರಗಳನ್ನು, ಮೂಢನಂಬಿಕೆಗಳನ್ನು ತೊಡೆದು ಹಾಕಲು ಪ್ರಯತ್ನಿಸುತ್ತಾನೆ. ಇದರಲ್ಲಿ ಯಶಸ್ಸು ಪಡೆಯದಿದ್ದರೂ ಅದಕ್ಕಾಗಿ ಅವನು ನಡೆಸುವ ಪ್ರಯತ್ನಗಳು ಹಾಗೂ ಅವನಿಗೆ ಎದುರಾದ ತಾಕಲಾಟಗಳು ಕಾದಂಬರಿಯಲ್ಲಿ ಪರಿಣಾಮಕಾರಿಯಾಗಿ ನಿರೂಪಿತಗೊಂಡಿವೆ.

ಒಂದೆಡೆ ಸಮುದಾಯದ ಸುಧಾರಕನಾಗಿ ಕಾಣಿಸುವ ಜಗನ್ನಾಥ, ತನ್ನ ವೈಯಕ್ತಿಕ ಬದುಕಿನ ಹಲವು ಸಂಗತಿಗಳಲ್ಲಿ ಸ್ಪಷ್ಟತೆ ಹೊಂದದೆ ಗೊಂದಲಗಳಿಗೆ ಸಿಲುಕಿದವನು. ಆತ್ಮರತಿಯಿಂದ ತೊಳಲುವ ಈತ ಅದರಿಂದ ಪಾರಾಗುವುದಕ್ಕಾಗಿ ಸಮಾಜ ಸುಧಾರಣೆಗೆ ತೊಡಗುತ್ತಾನೆ. ಈ ಬಗೆಯ ಚಿಂತನೆಗಳಿಂದ ಜಗನ್ನಾಥನಿಗೆ ಮಾಡಬೇಕೆನಿಸುವ ಮೊದಲ ಕೆಲಸವೆಂದರೆ ತನ್ನ ಊರಿನ ಮುಖ್ಯ ದೇವರಾದ ಮಂಜುನಾಥನಿಂದ ತನ್ನ ಊರನ್ನು ಬಿಡುಗಡೆಗೊಳಿಸಬೇಕು ಎನ್ನುವುದು. ಈತ ತನ್ನ ಗೆಳತಿ ಮಾರ್ಗರೇಟ್‌ಗೆ ಬರೆಯುವ ಪತ್ರದಲ್ಲಿ

> ದೇವರನ್ನು ನಾಶ ಮಾಡದ ಹೊರತು ನಾವು ಖಂಡಿತ ಕ್ರಿಯೇಟಿವ್ ಆಗಲಾರೆವು. ನಾವೆಲ್ಲ ದೇವರಗರ್ಭದಲ್ಲಿ ಪಿಂಡಗಳಂತಿದ್ದೇವೆ. ಹುಟ್ಟಿಯೇ ಇಲ್ಲ, ಚರಿತ್ರೆಯ ಮಂಥನಕ್ಕೆ ಸಿಕ್ಕಿಲ್ಲ. ಸೀಳಬೇಕು[೪]

ಎನ್ನುತ್ತಾನೆ. ಈ ಚಿಂತನೆಗಳನ್ನು ಭಾರತೀಪುರದಲ್ಲಿ ಅನುಷ್ಠಾನಗೊಳಿಸುವ ಪ್ರಯತ್ನದಲ್ಲಿ ಆತ ತೊಡಗುತ್ತಾನೆ. ಅನಾದಿ ಕಾಲದಿಂದಲೂ ಮಂಜುನಾಥನನ್ನು, ಆತನ ಮಹಿಮೆಯನ್ನು ನಂಬಿಕೊಂಡು ಬಂದಿರುವ ಭಾರತೀಪುರದ ಜನತೆಯನ್ನು ಆ ನಂಬಿಕೆಯಿಂದ ಹೊರತರುವುದು ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಮಂಜುನಾಥ ಭಾರತೀಪುರದ ಜನರ ಧಾರ್ಮಿಕ ನಂಬಿಕೆಯ ಭಾಗವಾಗಿರದೆ, ಇಡೀ ಊರಿನ ವ್ಯವಹಾರದ ಭಾಗವಾಗಿದ್ದ; ಆರ್ಥಿಕ ಚಟುವಟಿಕೆಯ ಕೇಂದ್ರವಾಗಿದ್ದ. ಆದರೂ ಜಗನ್ನಾಥ ತನ್ನ ಕಾರ್ಯದಿಂದ ಮಾತ್ರ ತನ್ನ ಊರಿನಲ್ಲಿ ಹೊಸತನ ತರಲು ಸಾಧ್ಯ ನಂಬಿದ್ದ ತನ್ನ ಪ್ರಯತ್ನದ ಭಾಗವಾಗಿ ತನ್ನಲ್ಲಿ ಕೆಲಸ ಮಾಡುವ ಹೊಲೆಯರಿಗೆ

ಅಕ್ಷರಭ್ಯಾಸ ಕಲಿಸುತ್ತೇನೆಂದು ಆತ ಹೊರಡುತ್ತಾನೆ. ಆಗ ಶ್ರೀಪತಿರಾಯರು ಜಗನ್ನಾಥನನ್ನು ಕುರಿತು

> ಹೊಲೆಯರಿಗೆ ಅಕ್ಷರಾಭ್ಯಾಸ ಮಾಡಿಸ್ತಿದೀನಿ ಅಂದ್ಯಲ್ಲ ಜಗಣ್ಣ. ನೀನಾಗಲೀ ಅವರಾಗಲೀ ಒಂದೇ ಒಂದು ಸಾರಿಯಾದರೂ, ಗೊತ್ತಿಲ್ದೇನೇ ಆದರೂ ಮುಟ್ಟಿಕೊಂಡದ್ದಿದೆಯ ಹೇಳು? ಜಗನ್ನಾಥ 'ಇಲ್ಲ' ಎಂದ. ಅದೇ ನಾನು ಹೇಳೋದು. ನೀನು ಅವರನ್ನ ಮುಟ್ಟುತ್ತೀಯೋ ಇಲ್ಲವೋ ಅನ್ನೋದು ಪ್ರಶ್ನೆಯಲ್ಲ. ಅವರಾಗೇ ನಿನ್ನನ್ನು ಮುಟ್ಟುತಾರೊ, ಮುಟ್ಟೋ ಆಸೆ ಅವರಿಗೆ ಹುಟ್ಟಿದೆಯೋ ಅನ್ನೋದೇ ಮುಖ್ಯ. ಅವರನ್ನ ಮುಟ್ಟಿಸಬೇಕೂಂತ ಅನ್ನಿಸೋದು ಸಹಜ. ನೀನು ವಿದ್ಯಾವಂತ. ನಿನ್ನ ಪ್ರಜ್ಞೆ ಬೆಳೆದಿದೆ. ಎಲ್ಲ ಸೌಭಾಗ್ಯಕ್ಕೂ ಬಾಧ್ಯನಾದ ಮೇಲೆ ನಿನಗೆ ಈ ಆದರ್ಶವಾದ ಹೊಸದೊಂದು ರುಚಿಯಾಗಿದೆ. ನಿನಗೆ ಅದು ಲಕ್ಷುರಿ, ಆದರೆ ಅವರಿಗೆ?[೫]

ಎಂದು ಪ್ರಶ್ನಿಸುವ ಶ್ರೀಪತಿರಾಯರು ಜಗನ್ನಾಥನ ಮುಂದೆ ಸಮಸ್ಯೆಯ ಗಂಭೀರತೆಯನ್ನು ತೆರೆದಿಡುತ್ತಾರೆ. ಜಗನ್ನಾಥ ಮತ್ತು ಆತನ ಪ್ರಯತ್ನ ಕಾದಂಬರಿಯ ಮುಖ್ಯ ಕೇಂದ್ರ, ಆಧುನಿಕ ಶಿಕ್ಷಣದ ತರುಣನೊಬ್ಬ ತಾನು ಪಡೆದ ಶಿಕ್ಷಣದಿಂದಾಗಿ ತನಗೆ ದೊರಕಿದ ಸಂಸ್ಕಾರವನ್ನು ಹಾಗೂ ನವೀನ ಚಿಂತನ ಕ್ರಮಗಳನ್ನು ವೈಯುಕ್ತಿಕವಾಗಿ ತನ್ನದಾಗಿಸಿಕೊಂಡದ್ದಲ್ಲದೆ ತನ್ನ ಸಮುದಾಯಕ್ಕೂ ಹಂಚಲು ಮಾಡುವ ಪ್ರಯತ್ನ ಹಾಗೂ ಅದರಲ್ಲಿ ಅವನಿಗೆ ದೊರೆತ ಸೋಲು-ಗೆಲುವುಗಳ ಪರಾಮರ್ಶೆಯಾಗಿಯೂ ಈ ಕಾದಂಬರಿಯನ್ನು ಅಧ್ಯಯನ ಮಾಡಬಹುದಾಗಿದೆ. ಸಮಾಜದ ಬದಲಾವಣೆಯನ್ನು ಬಯಸುವ ಜಗನ್ನಾಥನಿಗೆ ಮನೆಯಲ್ಲಿ ತನ್ನ ಚಿಕ್ಕಿಯಿಂದಲೇ ವಿರೋಧ ಎದುರಾಗುತ್ತದೆ. ಹೀಗಾಗಿ ಜಗನ್ನಾಥನ ಆದರ್ಶದ ಕಲ್ಪನೆ ಆತನ ಬೌದ್ಧಿಕತೆಯನ್ನು ಅವಲಂಬಿಸಿದೆ. ಆದುದರಿಂದ ಅದು ವಾಸ್ತವದಲ್ಲಿ ನೆರವೇರುವುದಿಲ್ಲ. ಆದರೂ ಆತನ ಅಭಿಲಾಷೆ ಆ ಕಾಲದ ಅನೇಕ ತರುಣರನ್ನು ಕಾಡಿದ ಸಂಗತಿ ಆಗಿದೆ.

ಜಗನ್ನಾಥ ಅವನ ಕುಟುಂಬದ ಪಾರಂಪರಿಕವಾದ ಜಮೀನ್ದಾರಿ ಪದ್ಧತಿಯು ಅವನ ಕಾಯಕಕ್ಕೆ ತೊಡಕಾಗುತ್ತದೆ. ಅದರೊಂದಿಗೆ ತನ್ನ ನಿಜವಾದ ಶಕ್ತಿ ಎಂದು ಅವನು ನಂಬಿಕೊಂಡಿದ್ದ ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಪಡೆದ ತಿಳಿವಳಿಕೆಗಳು ಅವನ ಸುಧಾರಣೆಯ ಕೆಲಸಗಳಿಗೆ ಹಿನ್ನಡೆಯುಂಟು ಮಾಡುತ್ತದೆ.

ವಿದೇಶದಲ್ಲಿ ಶಿಕ್ಷಣ ಪಡೆದುಕೊಂಡು ಬಂದ ಜಗನ್ನಾಥನ ಸ್ವಭಾವ ಅವನ ಮನೆತನದ ಹಿಂದಿನ ತಲೆಮಾರಿನವರಿಗಿಂತ ಭಿನ್ನವಾಗಿತ್ತು. ತನ್ನ ತೋಟದ ಕೆಲಸಕಾರ್ಯಗಳಲ್ಲಿ ತೊಡಗುವ ತನ್ನ ಆಳುಗಳನ್ನು ನೋಡುವ ಮತ್ತು ಅವರೊಂದಿಗೆ ವರ್ತಿಸುವ ಕ್ರಮವನ್ನೇ ಬದಲಿಸುತ್ತಾನೆ. ಶಾನುಭೋಗ ಶಾಸ್ತ್ರಿಯು ಮಾಡುತ್ತಿದ್ದ ಮೋಸವನ್ನು ಕಂಡುಹಿಡಿಯುತ್ತಾನೆ.

ಶಾನುಭೋಗ ಮೋಸ ಮಾಡುತ್ತಿದ್ದಾನೆ ಎನ್ನುವುದು ತಿಳಿದರೂ ಅವನನ್ನು ಕ್ಷಮಿಸುತ್ತಾನೆ. ತನ್ನ ತೋಟದಲ್ಲಿ ಕಳವು ಮಾಡುತ್ತಿದ್ದ ಶೀನಪ್ಪ ಮತ್ತು ಗಂಗಪ್ಪರನ್ನು ಸರಿಯಾದ ದಾರಿಗೆ ತರುವ ಪ್ರಯತ್ನ ನಡೆಸುತ್ತಾನೆ. ತನ್ನ ತಂದೆಯಿಂದ ಸಾಲ ಪಡೆದಿದ್ದ ಹಲವು ಸಾಲಗಾರರ ಪ್ರಾಮೀಸರಿ ನೋಟುಗಳನ್ನು ಹರಿದು ಹಾಕುತ್ತಾನೆ ಹಾಗೂ ತಾನು ಅವರನ್ನು ಸಾಲದಿಂದ ಮುಕ್ತಗೊಳಿಸಿದೆ ಎಂದುಕೊಳ್ಳುತ್ತಾನೆ. ಅಲ್ಲದೇ ಅವರೊಂದಿಗೆ ಮನುಷ್ಯ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಿದ್ದೇನೆ ಎಂದು ಭಾವಿಸುತ್ತಾನೆ.

ಈ ರೀತಿಯಲ್ಲಿ ತನ್ನ ಮನೆತನದ ಹಿರಿಯರ ನಡೆವಳಿಕೆಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವ ಜಗನ್ನಾಥನ ಮನೋಭಾವದ ಹಿನ್ನೆಲೆಯಲ್ಲಿ ಆಧುನಿಕ ಶಿಕ್ಷಣದ ಪ್ರಭಾವವಿರುವುದನ್ನು ಗಮನಿಸಬಹುದು. ಈ ಪ್ರಭಾವದಿಂದಲೇ ಜಗನ್ನಾಥ ಭಾರತೀಪುರವನ್ನು ಮೌಢ್ಯದಿಂದ ಹೊರತರಬೇಕೆಂದು ಬಯಸುತ್ತಾನೆ. ಪರಂಪರಾಗತವಾಗಿ ಸಾಗಿ ಬಂದಿರುವ ಪ್ರಗತಿಗೆ ಅಡ್ಡವಾಗಿರುವ ಮೂಢನಂಬಿಕೆಗಳನ್ನು ತೊಡೆದುಹಾಕಬೇಕೆಂದುಕೊಳ್ಳುವ ಜಗನ್ನಾಥ 'ವ್ಯವಸ್ಥೆ'ಯನ್ನು ಪಲ್ಲಟಗೊಳಿಸುವ ಕ್ರಿಯೆಗೆ ಮುಂದಾಗುತ್ತಾನೆ.

ಜಗನ್ನಾಥ 'ಭಾರತೀಪುರ' ಕಾದಂಬರಿಯ ನಾಯಕ. ಕಥನದ ಕೇಂದ್ರಪ್ರಜ್ಞೆಯೂ ಅವನೆ ಆಗಿದ್ದಾನೆ. ಈ ಕೃತಿಯು ಜಗನ್ನಾಥನನ್ನು ವಿಮರ್ಶೆಗೆ ಒಳಪಡಿಸುವ ಕ್ರಿಯೆಯಲ್ಲಿ ಇತರ ಕೃತಿಗಳಿಗಿಂತ ಭಿನ್ನವಾಗಿದೆ. ಕಾದಂಬರಿಯಲ್ಲಿನ ಸಹ ಪಾತ್ರಗಳೇ ಜಗನ್ನಾಥನನ್ನು ತೀವ್ರವಾದ ಹಾಗೂ ನಿಷ್ಠುರವಾದ ವಿಮರ್ಶೆ ಮಾಡುತ್ತವೆ. ತನ್ನ ಗೆಳತಿ ಮಾರ್ಗರೇಟ್, ಗೆಳೆಯ ಚಂದ್ರಶೇಖರ್, ಹಿತಚಿಂತಕರಾದ ಶ್ರೀಪತಿರಾಯರು ಹಾಗೂ ತನ್ನ ಚಿಕ್ಕಿಯಿಂದಲೇ ಜಗನ್ನಾಥನ ವ್ಯಕ್ತಿತ್ವ ವಿಮರ್ಶೆಗೆ ಒಳಗು ಮಾಡುತ್ತವೆ.

> ಎಲ್ಲರಿಗಿಂತ ಪ್ರಾಯಶಃ ನಾನೇ ನಿಮ್ಮನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದೇನೆ. ಹಗಲುಗನಸಿನಲ್ಲಿ ಬೊಜ್ಜಾದ ನಿಮ್ಮ ಆದರ್ಶವಾದವನ್ನು ಹೀಗೆ ಕರಗಿಸಿಕೊಂಡು ಅಥ್ಲೆಟಿಕ್ ಫಿಗರ್ ಪಡೆಯಲು ನೀವು ಪ್ರಯತ್ನಿಸುತ್ತಿದ್ದೀರಿ. ನಿಮಗೆ ಸಫರ್ ಮಾಡುವುದು ಬೇಕಾಗಿದೆ. ನಿಮ್ಮ ದುರಂತವೆಂದರೆ ಈಗಲೂ ನೀವು ಮತ್ತೊಂದು ಬಗೆಯ ಹೀರೋ ಆಗುತ್ತೀರಿ ಅಷ್ಟೆ. ಯಾಕೆಂದರೆ ನೀವು ಹೊಲೆಯರನ್ನು ಕಂಡಿತ ಪ್ರೀತಿಸಲಾರಿರಿ ಆತ್ಮಗತವಾದ ನಿಮ್ಮ ವ್ಯಕ್ತಿತ್ವಕ್ಕೆ ನಿಜವಾದ ಪ್ರೇಮ ಸಾಧ್ಯವಿಲ್ಲ[೬] ಎನ್ನುವ ಚಂದ್ರಶೇಖರನ ಮಾತುಗಳು ಜಗನ್ನಾಥನ ವ್ಯಕ್ತಿತ್ವವನ್ನು ವಿಮರ್ಶೆ ಮಾಡುತ್ತವೆ.

ಜಗನ್ನಾಥ ಹಲವು ದ್ವಂದ್ವಗಳಿಗೆ ಒಳಗಾಗುತ್ತಾನೆ. ಹರಿಜನರಿಗೆ ಅಕ್ಷರ ಕಲಿಸಲು ಪ್ರಯತ್ನಿಸುತ್ತಾನೆ. ಇಚ್ಛೆ ಇಲ್ಲದಿದ್ದರೂ ಒಡೆಯನ ಆಜ್ಞೆಯನ್ನು ಅನುಸರಿಸಲು ಅಕ್ಷರ ತಿದ್ದುವ ಕೆಲಸದಲ್ಲಿ ತೊಡಗುವ ಪಿಳ್ಳ, ಕರಿಯ, ಮುದ್ದ ಮೊದಲಾದವರು

ಯಮಯಾತನೆ ಅನುಭವಿಸುತ್ತಾರೆ. ಅವರ ಕಷ್ಟವನ್ನು ಕಂಡ ಜಗನ್ನಾಥನಿಗೆ ಅಚ್ಚರಿಯಾಗುತ್ತದೆ.

> ಸರಾಗವಾಗಿ ಸೌದೆ ಒಡೆಯಬಲ್ಲ ಹುಡುಗರು ಮರಳಿನ ಎದುರು ಬಗ್ಗಿ ಕೂತು ಅಕ್ಷರ ತಿದ್ದುವಾಗ ಹೇಗೆ ಮುಕ್ಕಾತಾವೆ. ಬಾಯಲ್ಲಿ ಅಕ್ಷರವನ್ನು ಉಚ್ಚರಿಸುತ್ತ ಅವುಗಳ ಬೆರಳು ಅಕ್ಷರದ ಮೈಮೇಲೆ ಆಡುವಾಗ ಬರಿ ಮೈಯ ಮಾಂಸಖಂಡಗಳೆಲ್ಲವೂ ಯಾತನೆಯಲ್ಲಿ ತಿರುಪಿಕೊಂಡಂತೆ ಕಾಣುತ್ತವೆ. ಕತ್ತಿನ ನರಗಳು ಉಬ್ಬಿಕೊಳ್ಳುತ್ತವೆ. ಸ್ವಲ್ಪ ಹೊತ್ತಿಗೆ ಕಾಲುಗಳು ಜುಂಗಟ್ಟಿ ಎದ್ದ ಮೇಲೆ ಮರಳಿನ ಚೀಲಗಳನ್ನು ಕಾಲಿಗೆ ಕಟ್ಟಿಕೊಂಡವರಂತೆ ನಡೆಯುತ್ತಾರೆ. ಅಕ್ಷರ ತಿದ್ದುವಾಗ ಅವುಗಳ ಕಣ್ಣುಗಳಲ್ಲಿ ಮೂಡುತ್ತಿದ್ದ ದಿಗಿಲು ಕಂಡು ಜಗನ್ನಾಥನಿಗೆ ಕೆಲವೊಮ್ಮೆ ತೀವ್ರ ನಿರಾಸೆಯಾಗುತ್ತದೆ[೭].

ಹೀಗೆ ಜಗನ್ನಾಥ ತನ್ನಲ್ಲಿ ಕೆಲಸ ಮಾಡುತ್ತಿದ್ದ ಹೊಲೆಯರ ಯುವಕರಿಗೆ ಅಕ್ಷರ ಕಲಿಸಲು ನಾನಾ ಪ್ರಯತ್ನಗಳನ್ನು ಮಾಡುತ್ತಾನೆ. ನಾಳೆಯಿಂದ ಅಕ್ಷರ ತಿದ್ದಲು ಕೂತಾಗಲೇ ಅವಕ್ಕೆ ಬಾಯಿಗೆ ಕೊಟ್ಟರೆ (ತಿನ್ನುವುದಕ್ಕೆ ಹೊಗೆಸೊಪ್ಪು) ಒಳ್ಳೆಯದು ಅದರಿಂದ ಆರಾಮವಾಗಿ ತಿದ್ದುತ್ತಾರೆ. ಅಲ್ಲದೇ ಹೆದರಿಕೆಯನ್ನು ಬಿಟ್ಟು ಕಲಿಯುತ್ತಾರೆ ಎಂದು ಆಶಿಸುತ್ತಾನೆ. ಆದರೆ ಜಗನ್ನಾಥನ ಯಾವ ಪ್ರಯತ್ನಗಳೂ ಫಲಿಸುವುದಿಲ್ಲ. ತನ್ನ ಊರಿನ ಜನರಲ್ಲಿ ಹೊಸ ಚಿಂತನೆಗಳನ್ನು ಬಿತ್ತಬೇಕೆಂದು ಬಯಸುವ ಜಗನ್ನಾಥ ಹೊಲೆಯರಿಗೆ ಅಕ್ಷರ ಕಲಿಸುವ ಸಾಹಸಕ್ಕೆ ತಯಾರಾಗುತ್ತಾನೆ. ಇಷ್ಟವಿಲ್ಲದಿದ್ದರೂ ತನ್ನ ಒಡೆಯನ ಆಣತಿಯಂತೆ ಈ ಕಾರ್ಯದಲ್ಲಿ ತೊಡಗುವ ಪಿಳ್ಳ, ಕರಿಯ, ಮುದ್ದ ಮೊದಲಾದವರಿಗೆ ಇದು ಯಮ ಯಾತನೆಯಾಗುತ್ತದೆ. ಅಕ್ಷರ ತಿದ್ದುವಾಗ ಆಳುಗಳ ಕಣ್ಣಲ್ಲಿ ಮೂಡುತಿದ್ದ ದಿಗಿಲು ಜಗನ್ನಾಥನಿಗೆ ತೀವ್ರವಾದ ನಿರಾಸೆಯನ್ನು ಉಂಟುಮಾಡುತ್ತದೆ. ಅಲ್ಲದೇ ಅಕ್ಷರ ಕಲಿಸುವ ಈ ಕ್ರಿಯೆಯನ್ನು ಉಳಿದವರು ದೂರದಲ್ಲಿ ನಿಂತು ಕೌತುಕದಿಂದ ನೋಡಿದಾಗಲಂತೂ ಜಗನ್ನಾಥನಿಗೆ ತಾನು ಮಾಡುತ್ತಿರುವ ಕೆಲಸದ ಬಗ್ಗೆ ಮುಜುಗರ ಉಂಟಾಗುತ್ತದೆ. ಹೊಲೆಯರ ಯುವಕರಿಗೆ ಅಕ್ಷರ ಕಲಿಸುವ ಕೆಲಸದಲ್ಲಿ ತೊಡಗುವ ಜಗನ್ನಾಥನನ್ನು ಕಂಡು ದಿಗಿಲುಗೊಳ್ಳುವ ಚಿಕ್ಕಿಯು ಜಗನ್ನಾಥ ಮಲಗುವ ಹಾಸಿಗೆಯ ಕೆಳಗೆ ಹೊಸ ಸಿಂಗಾರ, ಭೂತರಾಯನ ತಾಯಿತ ಹಾಗೂ ಪೊಟ್ಟಣದಲ್ಲಿ ಮಂಜುನಾಥನ ಕುಂಕುಮಗಳನ್ನು ಇರಿಸುತ್ತಾಳೆ.

ಹೊಲೆಯರ ಯುವಕರಿಗೆ ಅಕ್ಷರ ಕಲಿಸುವ ಜಗನ್ನಾಥನ ಪ್ರಯತ್ನ ಅದಕ್ಕೆ ಹೊಲೆಯರ ಯುವಕರು ತೋರಿಸುವ ಪ್ರತಿಕ್ರಿಯೆ ಈ ಚಿಂತನೆಗಳು ಶಿಕ್ಷಣದ ಫಲಾನುಭವಿಗಳು ಯಾರು? ಎಂಬ ಚರ್ಚೆಯನ್ನು ಮುಂದುಮಾಡುತ್ತದೆ. ಶಾಲೆಗಳು ಆರಂಭಗೊಂಡಾಗ ಅಥವಾ ಅಕ್ಷರ ಕಲಿಯುವ ಸಂದರ್ಭ ಎದುರಾದಾಗ ತಳವರ್ಗಗಳು ತೋರಿಸಿದ ಪ್ರತಿಕ್ರಿಯೆಯಾಗಿ ಈ ಭಾಗ ಚಿತ್ರಿತಗೊಂಡಿದೆ. ಸರಾಗವಾಗಿ ಸೌದೆ ಹೊಡೆಯುವ ಕೈಗಳು ಮರಳಿನ ಮೇಲೆ ಅಕ್ಷರ ತಿದ್ದಲು ನಡುಗುತ್ತವೆ.

ವಸಾಹತು ಶಿಕ್ಷಣ ಜಾರಿಗೆ ಬಂದ ಕಾಲದಲ್ಲಿ ಅಕ್ಷರ ಕಲಿತ ಉನ್ನತ ವರ್ಗದ ಯುವಕರು ಧಾರ್ಮಿಕ ನಂಬಿಕೆಗಳ ಹೆಸರಲ್ಲಿ ತಮ್ಮ ಸಮುದಾಯಗಳು ಆಚರಿಸುತಿದ್ದ ಸಂಪ್ರದಾಯಗಳನ್ನು ಪ್ರಶ್ನಿಸತೊಡಗಿದರು. ಜಾತಿ ವ್ಯವಸ್ಥೆಯಲ್ಲಿ ಸಿಲುಕಿಕೊಂಡಿದ್ದ ಭಾರತೀಯ ಸಮಾಜದಲ್ಲಿ ಮೇಲ್ವರ್ಗ ಕೆಳ ಸಮುದಾಯಗಳನ್ನು ದೇವರು, ಧರ್ಮ ಹಾಗೂ ಸಂಪ್ರದಾಯಗಳ ಹೆಸರಿನಲ್ಲಿ ಶೋಷಿಸುತ್ತಿದ್ದುದನ್ನು ಅರಿತ ತರುಣರು ತಮ್ಮ ಸಮುದಾಯದಲ್ಲಿ ವೈಚಾರಿಕ ಚಿಂತನೆಗಳನ್ನು ಬಿತ್ತುವ ಕಾರ್ಯದಲ್ಲಿ ತೊಡಗಿದರು. ಇಂಥ ಸಂದರ್ಭದಲ್ಲಿ ತಮ್ಮವರೊಳಗಿನಿಂದಲೇ ತಿರಸ್ಕಾರಕ್ಕೆ ಒಳಗಾದರು. ತನ್ನದನ್ನು ಒಪ್ಪಿಕೊಳ್ಳಲಾರದ ಮತ್ತು ಪೂರ್ಣವಾಗಿ ನಿರಾಕರಿಸಲಾಗದ ಸಂದಿಗ್ಧ ಸ್ಥಿತಿಗೆ ಈ ತಲೆಮಾರಿನ ವಿದ್ಯಾವಂತ ವರ್ಗ ಸಿಲುಕಿತು.

**೬.೩ ಕೆ ಪಿ ಪೂರ್ಣಚಂದ್ರ ತೇಜಸ್ವಿಯವರ 'ಕರ್ವಾಲೋ' ಕಾದಂಬರಿ**

ಪೂರ್ಣಚಂದ್ರ ತೇಜಸ್ವಿಯವರು ಉನ್ನತ ಶಿಕ್ಷಣ ಪಡೆದವರು. ತಾವು ಪಡೆದ ಶಿಕ್ಷಣದ ಕಾರಣಕ್ಕಾಗಿ ದೊರೆಯಬಹುದಾದ ಪದವಿ ಮತ್ತು ನೌಕರಿಗಳಿಂದ ದೂರ ಉಳಿದವರು. ನಗರದ ಪರಿಸರದಲ್ಲಿ ಬೆಳೆದವರಾದರೂ ವ್ಯವಸಾಯವನ್ನು ವೃತ್ತಿಯನ್ನಾಗಿಸಿಕೊಂಡು ಕಾಡಿನ ನಡುವೆ ಬದುಕಿದವರು. ಆಧುನಿಕ ತಂತ್ರಜ್ಞಾನದೊಂದಿಗೆ ಒಡನಾಟವನ್ನಿಟ್ಟುಕೊಂಡವರು. ತೇಜಸ್ವಿಯವರ ವ್ಯಕ್ತಿತ್ವ ಹಾಗೂ ಬದುಕಿನ ಬಗೆಗಿನ ಅವರ ಮನೋಧರ್ಮಗಳು ಅವರ ಸಾಹಿತ್ಯ ಕೃತಿಗಳ ಮೂಲ ಭಿತ್ತಿಗಳಾಗಿವೆ.

ನಿಸರ್ಗ ಮತ್ತು ಮನುಷ್ಯನ ನಡುವಿನ ಸಂಘರ್ಷ ಪುರಾತನವಾದುದು. ಆದರೆ ಭೋಗ ಬದುಕನ್ನು ಬಯಸುತ್ತಿರುವ ಸಮಕಾಲೀನ ಸಂದರ್ಭದಲ್ಲಿ ಮನುಷ್ಯ ತನ್ನ ಆಸೆಗಳಿಗೆ ನಿಸರ್ಗವನ್ನು ಬರಿದು ಮಾಡುತ್ತಿದ್ದಾನೆ. ಹಿಂದೆಂದಿಗಿಂತಲೂ ಇಂದು ನೈಸರ್ಗಿಕ ಅಸಮತೋಲನಕ್ಕೆ ಮನುಷ್ಯ ಹೆಚ್ಚು ಕಾರಣನಾಗುತ್ತಿದ್ದಾನೆ.

'ಕರ್ವಾಲೋ' ತೇಜಸ್ವಿಯವರ ಪ್ರಮುಖ ಕಾದಂಬರಿ. ಕನ್ನಡ ಕಾದಂಬರಿ ಜಗತ್ತಿಗೆ ವಸ್ತುವಿನ ದೃಷ್ಟಿಯಲ್ಲಿ ಹೊಸತು ಎನಿಸಿದ ಕೃತಿ. ಕುವೆಂಪು ಮತ್ತು ಕಾರಂತರಂತೆ ತೇಜಸ್ವಿಯವರು ಕಾಡಿನ ಅಸಂಖ್ಯಾ ವಿವರಗಳನ್ನು ತಮ್ಮ ಕೃತಿಗಳಲ್ಲಿ ನಿರೂಪಿಸಿದ್ದಾರೆ. 'ಹಾರುವ ಓತಿ'ಯ ಅನ್ವೇಷಣೆಯನ್ನು ಕೇಂದ್ರವಾಗಿರಿಸಿಕೊಂಡು ಚೇತೋಹಾರಿಯಾಗಿ ನಿರೂಪಿತಗೊಂಡಿರುವ ಕಾದಂಬರಿ 'ಕರ್ವಾಲೋ'. ಈ ಕಾದಂಬರಿಯನ್ನು ಕುರಿತಂತೆ ಇದುವರೆವಿಗೂ ಹಲವಾರು ವಿಮರ್ಶೆಗಳು ಬಂದಿವೆ. ಹಲವು ಆಯಾಮಗಳಲ್ಲಿ ಈ ಕಾದಂಬರಿಯ ಅಧ್ಯಯನಗಳು ನಡೆದಿವೆ. ವೃತ್ತಿಗೆ ಪರಂಪರಾಗತವಾಗಿ ಸಾಗಿ ಬಂದ ಅರಿವು ಹಾಗೂ ಆಧುನಿಕ ವಿದ್ಯಾಭ್ಯಾಸದಿಂದ ಉಂಟಾದ ಜ್ಞಾನದ ನಡುವಿನ ಸಂಘರ್ಷ ಮತ್ತು ಸಾಮರಸ್ಯದ ರೂಪವಾಗಿಯೂ ಈ ಕಾದಂಬರಿಯನ್ನು ಅರ್ಥೈಸಬಹುದಾಗಿದೆ.

'ಕರ್ವಾಲೋ' ಕಾದಂಬರಿಯ ಮಂದಣ್ಣ ಕಾಡಿನೊಟ್ಟಿಗೆ ಬೆಳೆದವನು. ಆತ ಕಾಡಿನ ಜೀವಸಂಕುಲದ ಭಾಗವಾಗಿದ್ದಾನೆ. ಪ್ರಜ್ಞಾಪೂರ್ವಕವಾಗಿ ಕಲಿಯಬೇಕು ಎಂದು ತೊಡಗಿಕೊಳ್ಳದಿದ್ದರೂ 'ಕಾಡು' ಮಂದಣ್ಣನಿಗೆ ತನ್ನೊಡಲ ಹಲವು ಕೌತುಕದ ಕತೆಗಳನ್ನು ಹೇಳಿಕೊಟ್ಟಿದೆ. ಹೀಗಾಗಿ ಮಂದಣ್ಣನಿಗೆ ತನ್ನ 'ಅರಿವು' ವಿಶೇಷವಾದುದು ಎನಿಸುವುದೇ ಇಲ್ಲ. ಆದರೆ ಸಸ್ಯ ವಿಜ್ಞಾನಿ, ಕೀಟಶಾಸ್ತ್ರಜ್ಞರಾದ ಕರ್ವಾಲೋ ಅವರಿಗೆ ಮಂದಣ್ಣನ 'ಕಾಡಿನ ಜ್ಞಾನ' ದ ಬಗ್ಗೆ ಕೌತುಕ ಹಾಗೂ ಮೆಚ್ಚುಗೆ ಉಂಟಾಗುತ್ತದೆ.

ಮಂದಣ್ಣ ಪರಂಪರಾಗತವಾಗಿ ಸಾಗಿ ಬಂದಿರುವ 'ಅರಿವಿ'ನ ಪ್ರತಿನಿಧಿಯಾಗಿಯೂ ಕರ್ವಾಲೋ ಆಧುನಿಕ ಶಿಕ್ಷಣದಿಂದ ಉಂಟಾದ ಜ್ಞಾನದ ವಕ್ತಾರರಾಗಿಯೂ ಕಾದಂಬರಿಯಲ್ಲಿ ಮುಖಾಮುಖಿಯಾಗುತ್ತಾರೆ. ಈ ಇಬ್ಬರಲ್ಲಿ ಯಾರ ತಿಳಿವು ಶ್ರೇಷ್ಠವಾದುದು? ಎನ್ನುವ ಪ್ರಶ್ನೆ ಕಾದಂಬರಿಯಲ್ಲಿ ನೇರವಾಗಿ ಚರ್ಚಿತವಾಗಿಲ್ಲ. ಆದರೆ ಈ ಕಾದಂಬರಿಯನ್ನು ಈ ಎರಡು ಜ್ಞಾನ ಪರಂಪರೆಗಳು ನಡೆಸಿದ ಅನುಸಂಧಾನವನ್ನಾಗಿ ಅರ್ಥೈಸಬಹುದಾಗಿದೆ. ಈ ಹಿನ್ನೆಲೆಯಲ್ಲಿ 'ಕರ್ವಾಲೋ' ಕಾದಂಬರಿಯ ಮುಖೇನ ಪೂರ್ಣಚಂದ್ರ ತೇಜಸ್ವಿಯವರು ವಸಾಹತು ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆಯನ್ನು ಗುರುತಿಸಬಹುದಾಗಿದೆ.

'ಹಾರುವ ಓತಿಯ' ಅನ್ವೇಷಣೆಗೆ ಕರ್ವಾಲೋ ಮಂದಣ್ಣನ ಬೆನ್ನು ಬೀಳುತ್ತಾರೆ. ಅದು ಅವರಿಗೆ ಅತ್ಯಂತ ಗಂಭೀರವಾದ ಹಾಗೂ ಜಗತ್ತಿಗೆ ಹೊಸ ಸಂಗತಿಯೊಂದನ್ನು ತಿಳಿಸುವ ಕೌತುಕಮಯ ಸಂಗತಿಯಾಗಿದೆ. ಆದರೆ ಅದು ರಾಮಯ್ಯನಿಗೆ 'ಹುಳುಹುಪ್ಪಟೆ ಇಟ್ಟುಕೊಂಡು ನಲಿಯುವ' ಕೆಲಸವೆನಿಸಿದೆ. ಹೀಗೆ 'ಕರ್ವಾಲೋ'ರಿಗೆ 'ಮಹೋನ್ನತ'ವಾದುದು ರಾಮಯ್ಯನಿಗೆ 'ಯಕಶ್ಚಿತ್' ಅನ್ನಿಸುವುದಕ್ಕೆ ಕಾರಣಗಳನ್ನು ಹುಡುಕಬೇಕಿದೆ. ಈ ಸಂದರ್ಭದಲ್ಲಿ 'ಶಿಕ್ಷಣ' ಉಂಟು ಮಾಡಬಹುದಾದ ಪರಿಣಾಮಗಳು ಚರ್ಚೆಗೆ ಒಳಗಾಗುತ್ತವೆ.

ಒಂದೆಡೆ ಕೀಟಶಾಸ್ತ್ರಜ್ಞ ಕರ್ವಾಲೋ, ಫಿಲಾಸಫಿ ಹಾಗೂ ಸಮಾಜಶಾಸ್ತ್ರ ವಿಷಯದಲ್ಲಿ ಎಂ.ಎ. ಪದವಿ ಪಡೆದುಕೊಂಡ ನಿರೂಪಕ. ವಿದ್ಯಾವಂತನಾದ ರೇಡಿಯೋ ಮೆಕಾನಿಕ್ ಪ್ರಭಾಕರ – ಇವರೊಂದಿಗೆ ಅಕ್ಷರದ ಅರಿವಿರದ ಮಂದಣ್ಣ, ಪ್ಯಾರ, ಬಿರಿಯಾನಿ ಕರಿಯಪ್ಪ, ಹಾವು ಗೊಲ್ಲರ ಎಂಗ್ಟ ಮೊದಲಾದವರು ಪಾತ್ರವರ್ಗವಾಗಿರುವ 'ಕರ್ವಾಲೋ' ಕಾದಂಬರಿಯಲ್ಲಿ ಅಕ್ಷರದಿಂದ ಉಂಟಾದ ಜ್ಞಾನಕ್ಕಿಂತ ಪರಂಪರಾಗತವಾದ ತಿಳಿವಿನ ಬಗ್ಗೆ ಅಭಿಮಾನವಿದೆ. ಮಂದಣ್ಣನ ಕುರಿತು 'ಅವನೊಬ್ಬ ಹುಟ್ಟು ನ್ಯಾಚುರಲಿಸ್ಟ್'. ಹೆಚ್ಚು ಕಡಿಮೆ ಈವರೆಗೆ ಅವನು ಹೇಳಿರೋದು ಒಂದೊಂದು ಕೂಡ ಅದರ ವಿವರಗಳಲ್ಲಿ ಸುಳ್ಳಾಗಿಲ್ಲ. ಅಷ್ಟೊಂದು ಸೂಕ್ಷ್ಮವಾಗಿ ಗ್ರಹಿಸ್ತಾನೆ. ಅದ್ಭುತ ಪ್ರಕೃತಿಶಾಸ್ತ್ರಜ್ಞ ಅವನು ಎನ್ನುವ ಕರ್ವಾಲೋ ಅವರ ಮಾತುಗಳಲ್ಲಿ ಮಂದಣ್ಣನ ಜ್ಞಾನದ ಬಗೆಗಿನ ಅಭಿಮಾನವಿರುವುದನ್ನು ಗುರುತಿಸಬಹುದು.

ಕಾದಂಬರಿಯ ಶೀರ್ಷಿಕೆ 'ಕರ್ವಾಲೋ' ಎನಿಸಿದ್ದರೂ ಕಾದಂಬರಿಯಲ್ಲಿ ಮಂದಣ್ಣನೇ ಕಥೆಯ ಕೇಂದ್ರವಾಗಿದ್ದಾನೆ. ಹಾರುವ ಓತಿಯ ಹುಡುಕಾಟ ಕಾದಂಬರಿಯ

ವಸ್ತು ಎನಿಸಿಕೊಂಡಿದ್ದರೂ ಕಥನದ ಬಹುಭಾಗ ಮಂದಣ್ಣನ ಬದುಕಿನ ಕತೆ ವಿವರಗಳನ್ನು ಒಳಗೊಂಡಿದೆ. ಕರ್ವಾಲೋ ಮತ್ತು ಮಂದಣ್ಣ ಅಕ್ಷರ ಕಲಿತ ಮತ್ತು ಅಕ್ಷರ ಕಲಿಯದ ಎರಡು ಧ್ರುವಗಳ ಸಂಘರ್ಷದಂತೆ ಗೋಚರವಾಗುತ್ತಾರೆ. ಆದರೆ ಇವರಿಬ್ಬರ ನಡುವಿನ ಸಾಮರಸ್ಯದ ಮೂಲಕ ಹೊಸಕಾಲದ ಶಿಕ್ಷಣದ ಗುಣದೋಷಗಳನ್ನು ಕಾದಂಬರಿ ಚರ್ಚಿಸುತ್ತದೆ.

ಮಂದಣ್ಣ ತನ್ನ ಪರಿಸರದಲ್ಲಿ ಅತ್ಯಂತ ನಿಕೃಷ್ಟವಾಗಿ ಪರಿಗಣಿಸಲ್ಪಟ್ಟವನು. ಮಂದಣ್ಣನಿಗೆ ತನ್ನ ಅರಿವಿನ ಮಹತ್ವವೂ ತಿಳಿದಿಲ್ಲ. ತಾನು ಪಡೆದುಕೊಂಡಿರುವಂತಹುದು 'ಮತ್ತೊಂದು ಜಗತ್ತಿಗೆ ಅಮೂಲ್ಯವಾದ ಜ್ಞಾನ ಸಂಪತ್ತು' ಎನ್ನುವ ಅರಿವೂ ಕೂಡ ಇಲ್ಲದಿರುವವನು ಆತ. ಅಷ್ಟೆ ಅಲ್ಲದೇ ತನ್ನ ಪರಿಸರದಲ್ಲಿ ಎಲ್ಲರಿಂದಲೂ ಬೇಜಬ್ದಾರಿ ಮನುಷ್ಯ ಎನಿಸಿಕೊಂಡವನು. ಅಪ್ಪ ಸತ್ತಮೇಲೆ ಹುಟ್ಟಿದವನು ಎನ್ನುವ ಆಪಾದನೆಗೆ ಒಳಗಾದವನು. ಹುಳು ಹುಪ್ಪಟೆ ಹಿಡಿದುಕೊಂಡು ಅಲೆಯುವ ಸೋಮಾರಿ ಎಂಬುದಾಗಿ ನೆರೆಯವರು ಆತನನ್ನು ಕುರಿತು ಆಡಿಕೊಳ್ಳುತ್ತಿದ್ದರು. ಕಾಡಿನ ಬಗ್ಗೆ ಅಪಾರ ಅರಿವುಳ್ಳ ಮಂದಣ್ಣ ಆತನ ಪರಿಸರದ ಜನರಲ್ಲಿ ಯಾವ ಬಗೆಯ ಅಭಿಮಾನವನ್ನೂ ಗಳಿಸಿಕೊಂಡಿರಲಿಲ್ಲ.

ಮಂದಣ್ಣ ಮಾತ್ರವಲ್ಲ, ಬಿರಿಯಾನಿ ಕರಿಯಪ್ಪ, ಹಾವು ಗೊಲ್ಲರ ಎಂಗ್ಟ, ಪ್ಯಾರ, ಮನೆ ನೋಡುವವನು–ಹೀಗೆ ಈ ಕಾದಂಬರಿಯಲ್ಲಿ ಬರುವ ಹಲವು ಪಾತ್ರಗಳು ತಮ್ಮ ತಮ್ಮ ಅನುಭವ ಲೋಕದಿಂದ ಅಪಾರ ಜ್ಞಾನವನ್ನು ಪಡೆದಂತಹವುಗಳು. ಆದರೆ ಈ ಬಗೆಯ ಸ್ಥಳೀಯ ಜ್ಞಾನಕ್ಕೆ ಯಾವ ಬಗೆಯ ಮನ್ನಣೆ, ಗೌರವ ಮತ್ತು ಆರ್ಥಿಕ ಅನುಕೂಲತೆಗಳು ದೊರೆಯುವುದಿಲ್ಲ. ಈ ಸಮಸ್ಯೆ ಪ್ರಸ್ತುತದಲ್ಲಿ ಬಹು 'ಜ್ವಲಂತ'ವೆನಿಸಿ 'ಜ್ಞಾನ' ಎನ್ನುವುದು ಎಲ್ಲಿಂದ ದೊರೆಯುತ್ತದೆ? ಎನ್ನುವ ಸಾರ್ವಕಾಲೀನ ಪ್ರಶ್ನೆಯಾಗಿ ಎದುರಾಗುತ್ತದೆ. ಈ ಜ್ಞಾನವನ್ನು ಪಡೆದುಕೊಂಡು ಅದರಿಂದ ದೊರೆಯಬಹುದಾದ ಎಲ್ಲ ಸವಲತ್ತುಗಳನ್ನು ಪಡೆಯುವುದೇ ಮನುಷ್ಯನ ಬದುಕಿನ ಸರ್ಕಸ್ ಆಗಿದೆ. ಈ ಓಟದ ಸ್ಪರ್ಧೆಯಲ್ಲಿ 'ಸ್ಥಳೀಯವಾದ ಜ್ಞಾನ' ಮಂಕಾಗಿದೆ. ಕೇವಲ ಓದು ಹಾಗೂ ಅದರಿಂದ ದೊರೆಯುವ ಪದವಿಗಳೇ ಇಂದು 'ಮಹತ್ವ ಪಡೆದುಕೊಳ್ಳುತ್ತಿವೆ. ಈ ನಿಟ್ಟಿನಲ್ಲಿ 'ಕರ್ವಾಲೋ' ಕಾದಂಬರಿಯನ್ನು ಎರಡು ಜ್ಞಾನಗಳ ಸಂಘರ್ಷದ ರೂಪವಾಗಿ ಅಭ್ಯಸಿಸಬಹುದಾಗಿದೆ.

ಯಾರಿಗೂ ಏನು ಅನ್ನಿಸದ ಮಂದಣ್ಣನ 'ತಿಳಿವು' ತಜ್ಞ ಕರ್ವಾಲೋಗೆ 'ಅಪಾರವಾದ ಜ್ಞಾನ' ಎನಿಸುತ್ತದೆ. ಮಂದಣ್ಣನ ಪ್ರತಿಭೆಯನ್ನು ಗುರುತಿಸುವ ಹಾಗೂ ಆ 'ತಿಳಿವನ್ನು' ಸರಿಯಾದ ರೀತಿಯಲ್ಲಿ ಬಳಸುವ ಕರ್ವಾಲೋ ಎನ್ನುವ ವಿಜ್ಞಾನಿಯ ಪ್ರವೇಶದಿಂದಾಗಿ 'ಯಕಶ್ಚಿತ್' ಎನಿಸಿದ್ದ ಮಂದಣ್ಣ 'ಪ್ರತಿಭಾವಂತ' ಎನಿಸಿಕೊಳ್ಳುತ್ತಾನೆ.

ಈ ಕಥನವು 'ನೋಡುವ ದೃಷ್ಟಿಕೋನಗಳು' ಬದಲಾಗಬೇಕೆಂದು ಬಯಸುತ್ತದೆ. ಕಾದಂಬರಿಯ ಹಲವು ಸಂಗತಿಗಳಲ್ಲಿ ಇದನ್ನು ಗಮನಿಸಬಹುದು. 'ಹಾರುವ ಓತಿ'ಯನ್ನು ಹಿಡಿಯುವ ಕೆಲಸ ನಾರ್ವೆಯ ರಾಮಯ್ಯನ ದೃಷ್ಟಿಯಲ್ಲಿ 'ಹುಳು ಹುಪ್ಪಡಿ ಹಿಡಿಯುವ ನಿಷ್ಪ್ರಯೋಜಕ ಕೆಲಸ' ಎನಿಸುತ್ತದೆ. ತನ್ನ 'ತಿಳಿವಿನ' ಬಗ್ಗೆ ಅರಿವಿರದ ಮಂದಣ್ಣ ತಾನು ಮದುವೆಯಾಗುವ ಹಾಗೂ ಅದಕ್ಕಾಗಿ ಒಂದು ಕೆಲಸ ದೊರಕಿಸಿಕೊಳ್ಳುವುದು ಜೀವನದ ಪರಮ ಗುರಿ ಎಂದುಕೊಂಡಿದ್ದಾನೆ. 'ಹಾರುವ ಓತಿಯ' ಹುಡುಕಾಟದಲ್ಲಿ ತೊಡಗಿದ್ದಾಗಲೂ ಬಿರಿಯಾನಿ ಕರಿಯಪ್ಪನ ಗಮನವೆಲ್ಲ ಬೇಟೆಯ ಕಡೆಗಿರುತ್ತದೆ.

ಈ ರೀತಿಯಲ್ಲಿ ಯಾರಿಗೂ ಮುಖ್ಯವೆನಿಸದ ಸಂಗತಿಗಳು 'ಕರ್ವಾಲೋ'ನ ತಿಳಿವಿನಲ್ಲಿ ಮಹತ್ತರವಾದುವು ಎನಿಸುತ್ತವೆ. ಹಾಗಾಗಿಯೇ ಮಂದಣ್ಣನಂತೆ ಹಾವಿನ ಗೊಲ್ಲರ ಎಂಗ್ಟನ ಹಾವು ಸುಲಿಯುವ ಕುಶಲತೆಯು 'ಕರ್ವಾಲೋ'ಗೆ ಮೆಚ್ಚುಗೆಯಾಗುತ್ತದೆ. ಈ ಎಲ್ಲವನ್ನು ಗಮನಿಸುವ ನಿರೂಪಕನಿಗೂ ಈ ಕಾಡು ಜನರ ತಿಳಿವಿನ ಬಗ್ಗೆ ಕುತೂಹಲ ಮೂಡುತ್ತದೆ.

> ಕರ್ವಾಲೋನಂಥವನೊಬ್ಬ ಹಾವುಗೊಲ್ಲರ ಎಂಗ್ಟ, ಕರಿಯಪ್ಪನಂಥವರಲ್ಲಿಯೂ ಹುದುಗಿರುವ ಪ್ರತಿಭೆ, ಜ್ಞಾನಗಳನ್ನು ಸರಿಯಾದ ರೀತಿಯಲ್ಲಿ ಬಳಸುವುದಾದರೆ ಒಂದೊಂದು ಅದ್ಭುತ ಪ್ರಪಂಚವೇ ತೆರೆದೀತು ಎಂಬ ದನಿಯನ್ನು ತೇಜಸ್ವಿ ಮೆಲುದನಿಯಲ್ಲಿ ನುಡಿಸಿರುವಂತಿದೆ[6] ಎನ್ನುವ ಜಿ.ಎಚ್. ನಾಯಕ ಅವರ ಮಾತುಗಳು ಔಚಿತ್ಯ ಪೂರ್ಣವೆನಿಸಿದೆ.

'ಕರ್ವಾಲೋ' ಕಾದಂಬರಿಯನ್ನು ಆಧುನಿಕ ಶಿಕ್ಷಣಕ್ಕೆ ತೇಜಸ್ವಿಯವರು ತೋರಿದ ಪ್ರತಿಕ್ರಿಯೆಯ ಭಾಗವಾಗಿ ಓದಿಕೊಳ್ಳಬಹುದಾಗಿದೆ. ಮಂದಣ್ಣ ಪರಂಪರಾಗತವಾಗಿ ಸಾಗಿಬಂದಿರುವ ಭಾರತೀಯ ತಿಳಿವಳಿಕೆಯ ರೂಪಕವೆನಿಸುತ್ತಾನೆ. ಈತನ ಎದುರಿನ ಕರ್ವಾಲೋ ಪಾತ್ರ ಯುರೋಪಿನ ಮಾದರಿಯ ಶಿಕ್ಷಣ ಪಡೆದ ಆಧುನಿಕ ಶಿಸ್ತಿನ ಪ್ರತಿನಿಧಿಯಾಗಿ ಕಂಡು ಬರುತ್ತದೆ.

ಪೌರಾಸ್ತ್ಯ ಮತ್ತು ಪಾಶ್ಚಾತ್ಯ ಶಿಕ್ಷಣ ಕ್ರಮದಲ್ಲಿ ಯಾವುದು ಶ್ರೇಷ್ಠ, ಯಾವುದು ಕನಿಷ್ಠ ಎನ್ನುವ ಚರ್ಚೆ ನಿರಂತರವಾಗಿ ಸಾಗಿ ಬಂದಿದೆ. ಈ ಬಗೆಯ ವಾಗ್ವಾದಕ್ಕೆ ನೂರಾರು ವರ್ಷಗಳ ಇತಿಹಾಸವಿದೆ. ಈ ಎರಡು ಪಂಥಗಳನ್ನು ಸಮರ್ಥಿಸುವ ಚಿಂತಕರನ್ನು ಗಮನಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ 'ಕರ್ವಾಲೋ' ಕಾದಂಬರಿಯು ಈ ಎರಡು ದಿಕ್ಕಿನ ಜ್ಞಾನ ಪರಂಪರೆ ಬೆಸೆದುಕೊಂಡಾಗ ಅದರಿಂದ ಹೊಸ ತಿಳಿವು ಉಂಟಾಗುತ್ತದೆ ಎನ್ನುವ ನಿಲುವನ್ನು ವ್ಯಕ್ತಪಡಿಸುತ್ತದೆ.

### ೬.೪ ಶ್ರೀ ಕೃಷ್ಣ ಆಲನಹಳ್ಳಿಯವರ 'ಕಾಡು', 'ಪರಸಂಗದ ಗೆಂಡೆತಿಮ್ಮ'

ನವ್ಯ ಸಾಹಿತ್ಯ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಸಂದರ್ಭದಲ್ಲಿ ತಮ್ಮ ಕತೆ ಮತ್ತು ಕಾದಂಬರಿಗಳಿಂದ ಗಮನ ಸೆಳೆದ ಲೇಖಕ ಶ್ರೀಕೃಷ್ಣ ಆಲನಹಳ್ಳಿ. ಸಾಹಿತ್ಯದ ವಿದ್ಯಾರ್ಥಿಯಾಗಿದ್ದು, ಅನಂತರ ಅಧ್ಯಾಪಕ ವೃತ್ತಿಯಲ್ಲಿದ್ದ ಶ್ರೀಕೃಷ್ಣ ಆಲನಹಳ್ಳಿಯವರು ನವೋದಯದ ಕಾದಂಬರಿಗಳ ಪ್ರಭಾವಕ್ಕೆ ಒಳಗಾಗಿದ್ದವರು. 'ಮಲೆಗಳಲ್ಲಿ ಮದುಮಗಳು: ಪಾತ್ರಗಳ ಅಭ್ಯಾಸ' (ದೇಜಗೌ ಸಂಪಾದಿಸಿರುವ ಕುವೆಂಪು ಅಭಿನಂದನಾ ಗ್ರಂಥ ಗಂಗೋತ್ರಿಯಲ್ಲಿ ಪ್ರಕಟವಾಗಿದೆ) 'ಗ್ರಾಮಾಯಣ ಸಮೀಕ್ಷೆ', ಶ್ರೀಕೃಷ್ಣ ಆಲನಹಳ್ಳಿಯವರು ಸಂಪಾದಿಸಿ ಪ್ರಕಟಿಸಿರುವ ಕೃತಿಗಳು. ಹೀಗೆ ಕುವೆಂಪು, ರಾವ್ ಬಹದ್ದೂರ್ ಅವರ ಕಾದಂಬರಿಗಳ ಪ್ರಭಾವಕ್ಕೆ ಒಳಗಾದ ಶ್ರೀಕೃಷ್ಣ ಆಲನಹಳ್ಳಿಯವರು ದಟ್ಟವಾದ ಗ್ರಾಮೀಣ ಬದುಕನ್ನು ತಮ್ಮ ಕಾದಂಬರಿಗಳ ವಸ್ತುವನ್ನಾಗಿ ಆರಿಸಿಕೊಂಡರು.

ತಮ್ಮ ಬದುಕಿನಲ್ಲಿ ಕಂಡುಂಡ ಅನುಭವಗಳನ್ನು ಮೂಲ ಸಾಮಗ್ರಿಯನ್ನಾಗಿಸಿಕೊಂಡ ಆಲನಹಳ್ಳಿಯವರು ತಮ್ಮ ಪ್ರತಿಭಾಪೂರ್ಣ ಬರವಣಿಗೆಯ ಮೂಲಕ 'ಕಾಡು', 'ಪರಸಂಗದ ಗೆಂಡೆತಿಮ್ಮ', 'ಭುಜಂಗಯ್ಯನ ದಶಾವತಾರ'ಗಳಂತಹ ಕಾದಂಬರಿಗಳನ್ನು ರಚಿಸಿದ್ದಾರೆ. ನವೋದಯ ಪಂಥದ ಲೇಖಕರು ಹಾಗೂ ನವ್ಯ ಚಿಂತನೆಯ ಲೇಖಕರು ಬದುಕನ್ನು ಕಂಡ ಬಗೆಯಲ್ಲಿನ ವ್ಯತ್ಯಾಸಗಳನ್ನು ಕುರಿತ ಚಿಂತನೆಗಳು ಈಗಾಗಲೇ ದಾಖಲಾಗಿವೆ. ನವೋದಯದ ಕಾಲಕ್ಕೆ ಮಹತ್ವವೆನಿಸಿದ ಸಂಗತಿಗಳು ನವ್ಯ ಸಾಹಿತ್ಯದ ಚಿಂತನಾಕ್ರಮದಲ್ಲಿ ನಿಕೃಷ್ಟವೆನಿಸಿವೆ.

'ಕಾಡು' ಕಾದಂಬರಿ ಕೊಪ್ಪಲು ಮತ್ತು ಹೊಸೂರು ಈ ಎರಡು ಊರಿನವರ ನಡುವಿನ ದ್ವೇಷ ಮತ್ತು ಕ್ರೌರ್ಯದ ಕತೆಯನ್ನು ನಿರೂಪಿಸುತ್ತದೆ. ಕೊಪ್ಪಲಿನ ಚಂದ್ರೇಗೌಡ ಹಾಗೂ ಹೊಸೂರಿನ ಶಿವಗಂಗರ ನಡುವಿನ ದ್ವೇಷ ಹಾಗೂ ಅದರಿಂದ ಉಂಟಾಗುವ ಪರಿಣಾಮಗಳ ಚಿತ್ರಣವೇ 'ಕಾಡು' ಕಾದಂಬರಿಯ ಮುಖ್ಯ ವಸ್ತುವಾಗಿದೆ.

ಈ ಕಾದಂಬರಿಯ ಕತೆಯನ್ನು ಎಳೆಯ ಬಾಲಕ ಕಿಟ್ಟಿಯ ನೋಟದಿಂದ ಕಾದಂಬರಿಕಾರ ಓದುಗರಿಗೆ ದಾಟಿಸುತ್ತಾರೆ. ಕಿಟ್ಟಿಯ ಎಳೆತನದ ಸ್ವಭಾವ ಹಾಗೂ ಅವನ ಕಣ್ಣ ಮುಂದೆ ನಡೆಯುವ ಘಟನೆಗಳಿಂದಾಗಿ ಕಾದಂಬರಿಗೆ ಸಂಕೀರ್ಣತೆ ಒದಗಿದೆ. ದೊಡ್ಡವರ ಬದುಕನ್ನು ಎಳೆಯ ಮನಸ್ಸು ಪರಿಭಾವಿಸುವ ಬಗೆಯನ್ನು ಈ ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ. ಮನುಷ್ಯನೊಳಗಿನ ಕಾಡುತನವನ್ನು, ಕ್ರೌರ್ಯವನ್ನು ಚಿತ್ರಿಸುವ 'ಕಾಡು' ಕಾದಂಬರಿ ಒಂದು ದುರಂತ ಕತೆಯನ್ನು ಪ್ರಸ್ತುತಪಡಿಸುತ್ತದೆ. ಹಳ್ಳಿಯ ಸಂತಸ, ಸಂಭ್ರಮಗಳನ್ನು ಕಟ್ಟಿಕೊಡುವುದರೊಂದಿಗೆ ಅಲ್ಲಿನ ಜಾತಿ ವ್ಯವಸ್ಥೆ, ಅಕ್ರಮ ಸಂಬಂಧಗಳು, ಯಜಮಾನ್ಯ ಸಂಸ್ಕೃತಿ, ದಬ್ಬಾಳಿಕೆ, ದ್ವೇಷ, ಅಸೂಯೆ, ಮುಗ್ಧತೆ – ಈ ಬಗೆಯ ಸಂಗತಿಗಳು ಹಳ್ಳಿಗಳನ್ನು ಹೇಗೆ ನಾಶಮಾಡುತ್ತವೆ ಎನ್ನುವುದನ್ನು ಕಾದಂಬರಿಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ.

ಮೇಲುನೋಟಕ್ಕೆ ಇದೊಂದು ಕ್ರೌರ್ಯದ ಕತೆ, ಆದರೆ ಬರಹಗಾರರ ತಂತ್ರ, ಸಂಕೇತ, ಪ್ರತಿಮೆಗಳಿಂದ ಇದು ನವ್ಯ ಕಾಲದ ಮಹತ್ವದ ಕಾದಂಬರಿ ಎನಿಸಿದೆ. ಈ ಕಾದಂಬರಿಯ ಕೇಂದ್ರ ಪಾತ್ರವೆನಿಸಿದ ಕಿಟ್ಟಿಯ ನೋಟದಲ್ಲೆ ಇಡೀ ಕತೆ ನಿರೂಪಿತಗೊಳ್ಳುತ್ತದೆ. ಕಿಟ್ಟಿ ಕಾದಂಬರಿಯುದ್ದಕ್ಕೂ ಶಾಲೆಗೆ ಹೋಗುವುದನ್ನು ನಿರಾಕರಿಸುತ್ತಾನೆ. ಆತನಿಗೆ ಅದೊಂದು ಹಿಂಸೆಯ ಕೆಲಸವಾಗಿದೆ. ಈ ಚಿಂತನೆಗಳ ಹಿನ್ನೆಲೆಯಲ್ಲಿ ಕಾದಂಬರಿಕಾರರ ಮನೋಪ್ರವೃತ್ತಿಗಳನ್ನು ನಾವು ವಿಶ್ಲೇಷಣೆ ಮಾಡಬಹುದಾಗಿದೆ. ಸ್ವಾತಂತ್ರ್ಯದ ಕನಸೊತ್ತುಕೊಂಡಿದ್ದ ಭಾರತದಲ್ಲಿ ಕಲಿಯುವುದು ಬಿಡುಗಡೆಯ ರೂಪದಂತೆ ಚಿತ್ರಿತಗೊಂಡಿದೆ. ಸ್ವಾತಂತ್ರ್ಯಗೊಂಡ ಭಾರತದ ಮುಂದೆ ಎದುರಾದ ಅಸಂಖ್ಯಾತ ಸಮಸ್ಯೆಗಳಲ್ಲಿ ಅನಕ್ಷರತೆ ಕೂಡ ಒಂದು. ಇಂಥ ಸಂದರ್ಭದಲ್ಲಿ ಶಾಲೆಗೆ ಹೋಗುವುದು, ವಿದ್ಯೆಯನ್ನು ಕಲಿಯುವುದು, ಬದುಕನ್ನು ಹಸನಾಗಿಸಿಕೊಳ್ಳುವ ಆ ಮೂಲಕ ಸಮಾಜದ ಬದುಕನ್ನು ಸಹನೀಯವಾಗಿಸುವ ಮಾರ್ಗವಾಗಿದ್ದವು. ಈ ತೆರನಾದ ಚಿಂತನೆಗಳೇ ನವೋದಯ ಕಾಲಘಟ್ಟದ ಸಾಹಿತ್ಯದ ಮುಖ್ಯ ಲಕ್ಷಣಗಳಾಗಿದ್ದವು.

ಭಾರತೀಯ ಸಾಮಾಜಿಕ ಮತ್ತು ರಾಜಕೀಯ ಬದುಕು ಬದಲಾದ ಸನ್ನಿವೇಶದಲ್ಲಿ ಬ್ರಿಟಿಷರು ರೂಪಿಸಿದ ಶಾಲೆಗಳು ಕಲಿಯುವ ಕ್ರಿಯೆಯ ಏಕತಾನತೆಯನ್ನು ಉಂಟು ಮಾಡಿರುವುದನ್ನು ಗಮನಿಸಬಹುದು. ಶ್ರೀಕೃಷ್ಣ ಆಲನಹಳ್ಳಿ ಅವರು ರೂಪಿಸಿದ ಕಿಟ್ಟಿಗೆ ಶಾಲೆಗೆ ಹೋಗುವುದೆಂದರೆ 'ಕಷ್ಟದ ಕೆಲಸ'. ಇದು ಕೇವಲ ಕಿಟ್ಟಿಯ ಅನಿಸಿಕೆ ಮಾತ್ರವಾಗಿರದೆ ಗ್ರಾಮೀಣ ಭಾಗದ ಒಂದು ತಲೆಮಾರು ಈ ಬಗೆಯ ಸಂದಿಗ್ಧತೆಯನ್ನು ಹಾದುಬಂದಿದೆ. 'ಕಲಿಕೆ' ಚೇತೋಹಾರಿಯಾಗಿರಬೇಕಾದ ಸಂದರ್ಭದಲ್ಲಿ ಅದು ಬಂಧನದಂತೆ ಗೋಚರಿಸಿದೆ. ಇದು 'ಶಾಲೆ'ಯ ಬದಲಾದ ಚಿತ್ರಣವನ್ನು ನೀಡುತ್ತದೆ. ಹಾಗಾಗಿ ಕಿಟ್ಟಿಗೆ ಊರಿನ ಇತರ ಕೆಲಸ ಕಾರ್ಯಗಳಲ್ಲಿ ತೊಡಗುವುದು ಇಷ್ಟದ ಕೆಲಸವೆನಿಸಿದರೆ ಶಾಲೆಗೆ ಹೋಗುವುದು ಕಷ್ಟದ ಕೆಲಸವಾಗುತ್ತದೆ.

> ಮೆಲ್ಲಗೆ ಹೋಗಿ ಗೋಡೆ ಬೀರುವಿನ ಬಾಗಿಲು ತೆರೆದ. ಸದ್ದಾಗದಂತೆ ಗೆಜ್ಜುಗಗಳನ್ನೆಲ್ಲ ಏಣಿಸಿದ ಇಪ್ಪತ್ತು ಒಡ್ಡಿಯಾಗಿದ್ದವು. ಆಯಿತವಾರ ಯಾವತ್ತು ಅಂತ ಯೋಚಿಸಿದ, ದರಿದ್ರದ ಸ್ಕೂಲಿಗೆ ಒಂದೇ ದಿನ ರಜ. ಶನಿವಾರವೂ ಒಪ್ಪೊತ್ತು ಹೋಗಲೇ ಬೇಕು. ಅವತ್ತೆ ತೋಟದಲ್ಲಿ ನಳ್ಳಿ ಹಿಡಿಯುವುದು; ಹಕ್ಕಿ ಹಿಡಿಯಲು ಸಿಡಿ ಒಡ್ಡುವುದು; ಎಮ್ಮೆ ಗುಂಡಿಯಲ್ಲಿ ಈಜಾಡುವುದು – ಹೀಗೆ ಏನೇನೋ ಮಾಡಬೇಕಾದ್ದನ್ನೆಲ್ಲ ಯೋಚಿಸುತ್ತ ನಿಂತ್ (ಪುಟ ೨೦)

ಹೀಗೆ ಕಿಟ್ಟಿಗೆ ರಜೆ ಬಂದರೇ ಸಂಭ್ರಮ. ಶಾಲೆಗೆ ಹೋಗುವುದೆಂದರೆ ನರಕಕ್ಕೆ ಪ್ರವೇಶಿಸಿದಂತೆ ಆಗುತ್ತಿತ್ತು. ಅದಕ್ಕೆ ಬದಲಾಗಿ ಆತನಿಗೆ ಒಂದು ಕಾಲಮಾನಕ್ಕೆ ಹೊಸ

ಕಾಲದ ಜ್ಞಾನ-ವಿಜ್ಞಾನದ ಪ್ರಸಾರಕ್ಕೆ ರೂಪುಗೊಂಡ ಶಾಲೆಗಳು ಅನಂತರದಲ್ಲಿ ಮಕ್ಕಳ ಸೃಜನಶೀಲತೆಯನ್ನು ಬೆಳೆಸುವಲ್ಲಿ ಸೋತವು. ಅಷ್ಟೇ ಅಲ್ಲ, ಮಗುವಿಗೆ ತನ್ನ ಪರಿಸರದಲ್ಲಿ ದೊರೆಯಬಹುದಾದ ಜ್ಞಾನಕ್ಕೆ ಶಾಲೆಯ ಶಿಕ್ಷಣದಲ್ಲಿ ಯಾವ ಮಾನ್ಯತೆಯೂ ದೊರೆಯದಂತಾಯಿತು. ಹಾಗಾಗಿ 'ಕಾಡು' ಕಾದಂಬರಿಯ ಕಿಟ್ಟಿಗೆ ಶಾಲೆಗೆ ಹೋಗಿ ಕಲಿಯುವುದಕ್ಕಿಂತ ಹಕ್ಕಿ ಹಿಡಿಯುವುದು, ಎಮ್ಮೆ ಗುಂಡಿಯಲ್ಲಿ ಈಜಾಡುವುದು ಅತ್ಯಂತ ಖುಷಿಯ ಕೆಲಸಗಳಾಗಿದ್ದವು.

> 'ನೋಡಿ ಆಗ್ಲೆ ತಿರಗಕ್ಕೆ ವೋಗವ್ನೆ, ಇನ್ನೂ ಸರಿಯಾಗಿ ಕೈ ವಾಸಿನೇ ಆಗಿಲ್ಲ' ಎಂದರು, ಕಿಟ್ಟಿ ತಕ್ಷಣ 'ಇಲ್ಲ ವಸೀನೂ ನೋವಿಲ್ಲ ಎಂದು ಒದರಿ ತೋರಿಸಿದ'. ಮಾವ ಕಿಟ್ಟಿಗೆ 'ಅಂಗಿದ್ರ ನಾಳೆಗೆ ಸ್ಕೂಲಿಗೆ ವೋಗು' ಅಂದೊಡನೆ ಪೆಚ್ಚಾಗಿ ನಿಂತ. ತನ್ನ ಮಾತಿಗೆ ಇಂಥ ಶಿಕ್ಷೆ ಸಿಕ್ಕುತ್ತೆ, ಅಂತ ಕಿಟ್ಟಿ ನಿರೀಕ್ಷಿಸಿರಲಿಲ್ಲ[೧೦] (ಪು ೬೯)

ಕಿಟ್ಟಿ ಹೇಗಾದರೂ ಮಾಡಿ ಶಾಲೆಯಿಂದ ತಪ್ಪಿಸಿಕೊಳ್ಳಬೇಕೆಂದು ಯಾವಾಗಲೂ ಬಯಸುತ್ತಾನೆ. ಶಾಲೆಗೆ ಹೋಗಲೇ ಬೇಕಾದ ಸಂದರ್ಭಗಳು ಎದುರಾದರೆ ಅದು ತನಗೆ ಒದಗಿದ ಸಂಕಷ್ಟ ಎಂದುಕೊಳ್ಳುತ್ತಾನೆ. ಸ್ವಾತಂತ್ರ್ಯಾನಂತರದ ಭಾರತದಲ್ಲಿ ಸಾಕ್ಷರತೆಯನ್ನು ಸಾಧಿಸಬೇಕೆಂದು ಹೊರಟ ಸರ್ಕಾರಗಳ ಶೈಕ್ಷಣಿಕ ಯೋಜನೆಗಳ ವೈಫಲ್ಯಗಳನ್ನು ಈ ಬಗೆಯ ಕಥಾನಕಗಳಿಂದ ಗುರುತಿಸಬಹುದಾಗಿದೆ. ಯಾವ ಬಗೆಯ ಶಿಕ್ಷಣವನ್ನು ಯಾರಿಗೆ? ಎಷ್ಟು? ಕಲಿಸಬೇಕು ಎನ್ನುವುದರ ಬಗ್ಗೆ ನಿಖರತೆ ಇಲ್ಲದ ಕಾರಣಕ್ಕೆ ಕಲಿಕೆ ಮಗುವಿನಲ್ಲಿ ಒತ್ತಡವನ್ನು ಸೃಷ್ಟಿಸಿದೆ. ಬ್ರಿಟಿಷರು ಈ ದೇಶವನ್ನು ಬಿಟ್ಟು ಹೋದ ಅನಂತರದಲ್ಲೂ ಅವರು ರೂಪಿಸಿದ ಶಿಕ್ಷಣ ನೀತಿಗಳೇ ಭಾರತದ ಭವಿಷ್ಯವನ್ನು ರೂಪಿಸುವ ಮಾನದಂಡಗಳಾಗಿವೆ. ಹಾಗಾಗಿ ಒಂದು ತಲೆಮಾರಿನವರಿಗೆ ಶಿಕ್ಷಣ ಎಂದರೆ ಶಿಕ್ಷೆ ಎನ್ನುವ ಹಾಗಿತ್ತು. ಒಂದಷ್ಟು ಜನ ಅಕ್ಷರವಂತರಾದರೂ ಬಹುತೇಕ ಮಂದಿ ಕಲಿಯುವ ಆಸಕ್ತಿ ಇದ್ದರೂ ಕಲಿಯಲಾರದೆ ಹೋದರು, ಕಲಿಕೆ ಮಗುವಿನ ಮನಸ್ಸಿಗೆ ಉಲ್ಲಾಸದಾಯಕವಾಗಿರದೆ ಹೊರೆ ಅನ್ನಿಸಿದಾಗ ಈ ರೀತಿಯ ಪರಿಣಾಮಗಳಾಗುತ್ತವೆ. ಹೀಗೆ 'ಕಾಡು' ಕಾದಂಬರಿಯ 'ಕಿಟ್ಟಿ'ಯ ಪಾತ್ರ ಇಪ್ಪತ್ತನೇ ಶತಮಾನದ ಎಂಬತ್ತು – ತೊಂಬತ್ತರ ದಶಕದ ಅಸಂಖ್ಯಾತ ಜನರನ್ನು ಪ್ರತಿನಿಧಿಸುತ್ತದೆ.

ಆಧುನಿಕತೆಯಿಂದ ದೊರಕಿದ ಅನುಕೂಲಗಳು ಅಪಾರ. ಅಂತೆಯೇ ಅದರಿಂದ ಉಂಟಾದ ವಿಕೃತಿಗಳ ಸಂಖ್ಯೆಯೂ ಕಡಿಮೆಯಿಲ್ಲ. ಈ ರೀತಿಯಲ್ಲಿ ನಡೆದ ಚರ್ಚೆ ವಿಸ್ತಾರವಾದುದು. ಶ್ರೀಕೃಷ್ಣ ಆಲನಹಳ್ಳಿಯವರ 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯೂ ಈ ರೀತಿಯ ಚರ್ಚೆಯನ್ನು ಕೇಂದ್ರವಾಗಿಸಿಕೊಂಡಿರುವ ಕಾದಂಬರಿಯಾಗಿದೆ. ಮರಂಕಿ, ಗೆಂಡೆತಿಮ್ಮ ಹಾಗೂ ಗೌವ್ವಳ್ಳಿಯ ಬದುಕಿಗೆ ಆಧುನಿಕತೆ ಸಾಗಿಬರಲು ಸೇತುವೆಯಾದವಳು.

ಹೀಗೆ ವಸ್ತುಗಳ ರೂಪದಲ್ಲಿ ಕಾಲಿಟ್ಟ ಹೊಸತನ ಉಂಟುಮಾಡಿದ ತಲ್ಲಣ ಹಾಗೂ ಆ ಕಾರಣಗಳಿಂದಾಗಿ ನಾಶವಾದ ಗೆಂಡೆತಿಮ್ಮ ಮತ್ತು ಮರಂಕಿಯರ ದುರಂತ ಬದುಕಿನ ಕಥನ 'ಪರಸಂಗದ ಗೆಂಡೆತಿಮ್ಮ' ಕಾದಂಬರಿ. ವಸಾಹತುಶಾಹಿಯ ರೂಪಗಳಾದ ಆಧುನಿಕ ವಸ್ತುಗಳು ಸಾಲುಂಡಿ ಹಾಗೂ ಗೌವ್ವಳ್ಳಿಯನ್ನು ಪ್ರವೇಶ ಮಾಡಿದಾಗ ಎದುರಾದ ತಲ್ಲಣಗಳೇ ಕಾದಂಬರಿಯ ಕೇಂದ್ರವಾಗಿವೆ.

ಅನಕ್ಷರಸ್ಥನಾದ ಗೆಂಡೆತಿಮ್ಮ ಹಳ್ಳಿಯ ಮುಗ್ಧತೆಯ ಸಂಕೇತ. ಆತ ಯಾರಿಗೂ ಕೇಡು ಬಯಸದೆ ಎಲ್ಲರಿಂದಲೂ ಮೆಚ್ಚುಗೆ ಗಳಿಸಿಕೊಂಡವನು. ಇಂಥ ವ್ಯಕ್ತಿತ್ವದ ಗೆಂಡೆತಿಮ್ಮ – ಕೊನೆಗೆ ಗೌವ್ವಳ್ಳಿಯ ಜನರ ಸಿಟ್ಟಿಗೆ ಕಾರಣನಾಗುತ್ತಾನೆ. ಒಮ್ಮೆ ಗೌವ್ವಳ್ಳಿಯ 'ಮುದ್ದ'ನ ಜತೆಗೆ ಮಾತನಾಡುತ್ತ ಗೆಂಡೆತಿಮ್ಮ 'ನಾನೇನಾದ್ರೂ ಮೇಷ್ಟ್ರಾಗಿದ್ರೆ ನೋಡ್ಬೇಕಿತ್ತು ಯಂಗಿರ್ತಾ ಇದ್ದೆ ಅಂತ' ಎಂದಾಗ ಆ ಮಾತಿಗೆ ಉತ್ತರವಾಗಿ 'ಥೂ... ನಿನ್ನ ನಿಮ್ಜಾತಿಯವ್ರು ಮೇಸ್ಟ್ರಾಯ್ತರ? ನೀವೇನು ಅಯ್ನೋರವ್ರ? ಎಂದು ಮುದ್ದನು ಪ್ರಶ್ನಿಸುತ್ತಾನೆ. ಎಳೆಯ ಹುಡುಗನ ತಿಳುವಳಿಕೆಯಲ್ಲಿಯೂ ಶಿಕ್ಷಕನಾಗಲು ಶಿಕ್ಷಣದ ಅರ್ಹತೆಗಿಂತ ಜಾತಿಯ ಅರ್ಹತೆ ಮುಖ್ಯ ಎಂಬುದು ಮನೆ ಮಾಡಿದೆ. ಅಂದರೆ ಶಾಲೆಗಳು ಆರಂಭವಾಗಿ ಎಲ್ಲ ಜಾತಿಯ ಜನರಿಗೂ ಶಿಕ್ಷಣ ದೊರೆಯುವ ಅವಕಾಶ ದೊರೆತರೂ ಆರಂಭದ ಕಾಲಕ್ಕೆ ಅದರ ಫಲಾನುಭವಿಗಳು ಮೇಲ್ಜಾತಿಯವರೇ ಆಗಿದ್ದರೂ ಎಂಬುದಕ್ಕೆ ಕಾದಂಬರಿಯ ಈ ಸನ್ನಿವೇಶ ನಿದರ್ಶನವಾಗಿದೆ.

'ಕಾಡು' ಕಾದಂಬರಿಯ ಕಿಟ್ಟಿಗೆ ಶಾಲೆಗೆ ಹೋಗುವುದು ಎಂದರೆ ಹಿಂಸೆಯಾಗುತ್ತಿತ್ತು. ಆ ಕಾಲಕ್ಕಾಗಲೇ ಶಾಲೆ ತನ್ನ ಆಕರ್ಷಣೆಯನ್ನು ಕಳೆದುಕೊಂಡು ಶಿಕ್ಷೆಯನ್ನು ನೀಡುವ ಸ್ಥಳವೆನಿಸಿತ್ತು. ಅಲ್ಲದೆ ಬಂಧನದಲ್ಲಿ ಇಡುವ ಬಂಧಿಖಾನೆಯಂತೆ ಗೋಚರವಾಗುತ್ತಿತ್ತು. ಶಿಕ್ಷಣ ಪಡೆದವರು ಸಮಾಜದ ಒಳಿತಿಗಾಗಿ ಶ್ರಮಿಸುತ್ತಾರೆ. ಶಿಕ್ಷಿತರಾದವರು ಇತರರಿಗಿಂತ ಸಜ್ಜನರಾಗಿರುತ್ತಾರೆ ಎನ್ನುವ ನಂಬಿಕೆಗಳು ಸುಳ್ಳಾದವು. 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯಲ್ಲಿ ಬರುವ ಸ್ಕೂಲಿನ ಮಾಸ್ಟರ್ ಶಿವಣ್ಣನ ಪಾತ್ರ ಇದಕ್ಕೆ ಉದಾಹರಣೆ.

ಮರಂಕಿಯು ನವೀನತೆಯನ್ನು ಬಯಸುವ ಮನಸ್ಸಿನವಳು, ಗೆಂಡೆತಿಮ್ಮನನ್ನು ಮದುವೆಯಾಗುವ ಮುನ್ನವೇ ಪರಪುರುಷನಿಂದ ಲೈಂಗಿಕ ಸುಖ ಪಡೆದವಳು. ಇತರರಂತೆ ತನ್ನ ಗಂಡನೂ ನೋಡಲು 'ಚೆಂದಗೆ' ಕಾಣಬೇಕೆಂದು ಬಯಸಿದಳು. ಅದಕ್ಕಾಗಿ ಅವನ ರೂಪು, ಉಡುಪು, ವರ್ತನೆಗಳನ್ನು ಬದಲು ಮಾಡುವ ಹಲವು ಪ್ರಯತ್ನಗಳನ್ನು ಮಾಡಿದಳು. ಅದೇ ಸಂದರ್ಭಕ್ಕೆ ತನ್ನದೇ ಊರಿನವನಾದ ಶಿಕ್ಷಕ ವೃತ್ತಿಯ ಶಿವಣ್ಣನ ಪರಿಚಯವಾಗಿ, ಪರಿಚಯ ಪ್ರೇಮಕ್ಕೆ ತಿರುಗಿ ಅವನೊಂದಿಗೆ ಅನೈತಿಕ ಸಂಬಂಧ ಹೊಂದಿದಳು. ಇದೇ ಮುಂದೆ ಗೆಂಡೆತಿಮ್ಮ ಮರಂಕಿಯರ ದುರಂತ ಸಾವಿಗೆ ಕಾರಣವಾಯಿತು.

ಶಿಕ್ಷಣ ಪಡೆದ ವ್ಯಕ್ತಿಯೊಬ್ಬ ಅದರಲ್ಲೂ ಸಮಾಜಕ್ಕೆ ಒಳಿತನ್ನು ಹೇಳಿಕೊಡುವ ಶಿಕ್ಷಕ ತನ್ನ ಮನೋಬಯಕೆಯಿಂದಾಗಿ ಮರಂಕಿಯ ದೌರ್ಬಲ್ಯವನ್ನು ತನ್ನ ಲಾಭಕ್ಕೆ ಬಳಸಿಕೊಂಡನು. ಯಾವ ತಪ್ಪನ್ನು ಮಾಡದ ಗೆಂಡೆತಿಮ್ಮನಂತಹ ಮುಗ್ಧನ ಬದುಕು ನಾಶವಾಗಲು ಕಾರಣವಾದನು. ಹೀಗೆ ಶ್ರೀಕೃಷ್ಣ ಆಲನಹಳ್ಳಿಯವರು ಸಾಹಿತ್ಯ ರಚಿಸುವ ಕಾಲಕ್ಕೆ ನವೋದಯದ ಆದರ್ಶ ಚಿಂತನೆಗಳು ಮರೆಯಾಗಿದ್ದವು. ಕಲಿತವರಿಂದ ಕುಟುಂಬ, ಸಮಾಜ ಉದ್ಧಾರವಾಗುತ್ತದೆ ಎಂಬುದು ಕೇವಲ ನಂಬಿಕೆಯ ಮಾತಾಗಿತ್ತು. ಹಾಗಾಗಿ ಆಧುನಿಕ ಶಿಕ್ಷಣ – ಉಂಟುಮಾಡಿದ ತಲ್ಲಣಗಳನ್ನು 'ಕಾಡು' ಮತ್ತು 'ಪರಸಂಗದ ಗೆಂಡೆತಿಮ್ಮ' ಕಾದಂಬರಿಗಳು ಕಟ್ಟಿಕೊಟ್ಟಿವೆ. ಕಾನೂರಿನ ಹೂವಯ್ಯ ತಾನು ಕಲಿತ ಅಕ್ಷರದಿಂದ ತನ್ನ ಸಮುದಾಯದ ತಿಳಿವಳಿಕೆಯನ್ನು ಹೆಚ್ಚಿಸಬೇಕೆಂದು ಬಯಸುತ್ತಾನೆ. 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯ ಶಿವಣ್ಣ ತನ್ನ ಕಲಿಕೆಯಿಂದ ಯಾವ ರೀತಿಯ ಘನತೆಯನ್ನು ಬೆಳೆಸಿಕೊಳ್ಳದೆ ಒಂದು ಕುಟುಂಬದ ದುರಂತಕ್ಕೆ ಕಾರಣವಾಗುತ್ತದೆ.

**೬.೫ ಚಂದ್ರಶೇಖರ ಕಂಬಾರರ 'ಕರಿಮಾಯಿ'**

ಬೆಳಗಾವಿ ಜಿಲ್ಲೆಯ 'ಶಿವಾಪುರ' ಎಂಬ ಹಳ್ಳಿಯಲ್ಲಿ ನಡೆಯುವ ಸ್ವಾತಂತ್ರ್ಯ ಪೂರ್ವ ಕಾಲದ ಕಥನವೇ 'ಕರಿಮಾಯಿ' ಕಾದಂಬರಿ. 'ಶಿವಾಪುರ' ಚಂದ್ರಶೇಖರ ಕಂಬಾರರ ಸಾಹಿತ್ಯದ ಕೇಂದ್ರ, ಪುರಾಣ, ಇತಿಹಾಸ, ಜನಪದ ಎಲ್ಲವನ್ನು ಮೇಳೈಸಿಕೊಂಡಿರುವ 'ಶಿವಾಪುರ'ಕ್ಕೆ ಆಧುನಿಕತೆಯ ಪ್ರವೇಶದಿಂದ ಉಂಟಾಗುವ ಬದಲಾವಣೆ ಹಾಗೂ ಪರಿಣಾಮಗಳ ಚಿತ್ರಣ 'ಕರಿಮಾಯಿ' ಕಾದಂಬರಿಯ ವಸ್ತು.

'ಶಿವಾಪುರ' ಕೇವಲ ಗತಕಾಲದ ನಂಟಿನೊಂದಿಗೆ ಉಳಿದುಹೋದ ಊರಲ್ಲ. ಕಾಲದಿಂದ ಕಾಲಕ್ಕೆ ಬದಲಾಗುವ ಚಲನಶೀಲತೆಯನ್ನು ಹೊಂದಿರುವ ಗ್ರಾಮ. ಶಿವಾಪುರದ ಬದುಕು ಸಂಘಟಿತವಾದದ್ದು. ಈ ಸಂಘಟನೆಗೆ ಮೂಲ ಕಾರಣ ಶಿವಾಪುರದ ದೈವ ಕರಿಮಾಯಿ. ಈ ಕರಿಮಾಯಿಯೇ ಆ ಊರಿನ ಶಕ್ತಿ ಹಾಗೂ ದೌರ್ಬಲ್ಯ. ಊರಿನ ಪರಗೌಡ, ದತ್ತಪ್ಪ, ಲಗುಮವ್ವ, ದೇವರೇಸಿ, ನಿಂಗೂ, ನಾಯೆಲ್ಯಾ ಮುಂತಾದವರಿಗೆ ಕರಿಮಾಯಿಯ ಬಗ್ಗೆ ಅವರದೇಯಾದ ಭಯ, ಭಕ್ತಿ ಇದೆ. ಇಡೀ ಊರಿನ ಶಕ್ತಿಯಾಗಿ, ಭಕ್ತಿಯಾಗಿ, ಪರಂಪರಾಗತವಾಗಿ ಸಾಗಿ ಬಂದಿರುವ ನಂಬಿಕೆಗಳ ಸಾಕ್ಷಿಪ್ರಜ್ಞೆಯಾಗಿ ಕರಿಮಾಯಿ ದೈವವಿದೆ.

ಊರಿನ ಹಿರಿಯರಾದ ಪರಗೌಡ ಮತ್ತು ದತ್ತಪ್ಪರ ಮುಂದಾಳುತನದಲ್ಲಿ 'ಶಿವಾಪುರ' ಮುನ್ನಡೆಯುತಿತ್ತು. ಊರಿಗೆ ಊರೇ ಪರಗೌಡ ಮತ್ತು ದತ್ತಪ್ಪರ ನಿರ್ಧಾರಗಳಿಗೆ, ನಂಬಿಕೆಗಳಿಗೆ, ಆದೇಶಗಳಿಗೆ ತಲೆಬಾಗುತ್ತಿತ್ತು. ಊರಿನ ಹಬ್ಬ, ಹುಣ್ಣಿಮೆ, ಓಕುಳಿ, ಪಾರಿಜಾತ ಹೀಗೆ ಎಲ್ಲವೂ ವರ್ಷಂಪ್ರತಿ ಸಾಂಪ್ರದಾಯಿಕವಾಗಿ, ನಿರ್ವಿಘ್ನವಾಗಿ ನಡೆಯುತ್ತಿದ್ದವು. ಸಮಷ್ಠಿ ಪ್ರಜ್ಞೆಯಿಂದಲೂ, ತನ್ನದೇ ಲೋಕ ನಡಾವಳಿಕೆಯಿಂದಲೂ

ಸಾಗುತ್ತಿದ್ದ ಶಿವಾಪುರದ ಬದುಕಿಗೆ 'ದೇಶಾದ್ಯಂತ' ನಡೆಯುತಿದ್ದ ಸ್ವಾತಂತ್ರ್ಯ ಚಳವಳಿಯ ಪ್ರಭಾವವಾಗಿರಲಿಲ್ಲ.

ಶಿವಾಪುರಕ್ಕೆ ನಿಧಾನವಾಗಿ ಆಧುನಿಕತೆಯ ಪ್ರವೇಶವಾಗುತ್ತದೆ. ಅದೂ 'ಶಿವಾಪುರ'ದವನೇ ಆದ 'ಗುಡಸ್ಯಾಗೋಳ'ನ ಮೂಲಕ. 'ಗುಡಸ್ಯಾ' ಎಂಬ ಅಡ್ಡ ಹೆಸರಿನಿಂದ ಕರೆಸಿಕೊಳ್ಳುತ್ತಿದ್ದ ಈತ ಬೆಳಗಾವಿಯಲ್ಲಿ ಎಲ್.ಎಲ್.ಬಿ. ಮುಗಿಸಿ ಊರಿಗೆ ಮರಳಿದ್ದ. ಅದು ಸ್ವಾತಂತ್ರ್ಯ ಚಳವಳಿಯ ಕಾಲವಾಗಿದ್ದರಿಂದ 'ಗಾಂಧೀಜಿ'ಯವರ 'ಹಳ್ಳಿ'ಗೆ ಮರುಳುವ ಸಿದ್ಧಾಂತವನ್ನು ನಂಬಿ 'ಗುಡಸ್ಯಾ' ತನ್ನ ಹಳ್ಳಿ ಶಿವಾಪುರಕ್ಕೆ ಮರಳಿ ಬಂದಿದ್ದ. 'ಶಿವಾಪುರ'ದಂಥ ಚಿಕ್ಕ ಊರಲ್ಲಿ ವಕೀಲಿ ಮಾಡುವುದು ಸಾಧ್ಯವಿಲ್ಲವಾದ್ದರಿಂದ ಹೊಲಮನೆ ನೋಡಿಕೊಂಡು ಊರಿನಲ್ಲೇ ಇದ್ದ.

'ಗುಡಸ್ಯಾ' ಊರಿನಲ್ಲಿ ನೆಲೆಸುವುದಕ್ಕೂ, ಊರಿನ ಜನಸಂಖ್ಯೆ ಹೆಚ್ಚಾದುದರಿಂದ ಅಲ್ಲಿ ಗ್ರಾಮಪಂಚಾಯ್ತಿ ಆರಂಭಿಸಬೇಕೆಂದು ಸರ್ಕಾರದಿಂದ ಕಾಗದ ಬರುವುದಕ್ಕೂ ಸರಿಯಾಯಿತು. ಪರಗೌಡ ಮತ್ತು ದತ್ತಪ್ಪರು ಇಂಗ್ರೇಜಿ (ಇಂಗ್ಲಿಷ್) ಭಾಷೆ ಕಲಿತಿರದಿದ್ದರಿಂದ 'ಗುಡಸ್ಯಾ' ಅದನ್ನು ತಿಳಿದವನಾದ್ದರಿಂದ ಅವನನ್ನೇ ಅವಿರೋಧವಾಗಿ ಪಂಚಾಯ್ತಿಯ 'ಚೇರಮನ್'ನ್ನಾಗಿ ಆರಿಸಲು ತೀರ್ಮಾನಿಸಿದ್ದರು. ಗುಡಸ್ಯಾ ಎಲ್.ಎಲ್.ಬಿ. ಪಾಸಾಗಿದ್ದಾಗ ಸ್ವತಃ ಊರಿಗೆಲ್ಲ ಸಕ್ಕರೆ ಹಂಚಿ ಅಭಿಮಾನ ಪಟ್ಟಿದ್ದ ಗೌಡನೇ ಈ ತೀರ್ಮಾನಕ್ಕೆ ಬಂದಿದ್ದ. ಆದರೆ ಈ ತೀರ್ಮಾನಕ್ಕೆ ದತ್ತಪ್ಪ ಮತ್ತು ಇತರರು 'ಏನಂಬೋ ಮಾತು ಗೌಡರ, ಇನ್ನs ತಲೀಮ್ಯಾಲಿನ ಮಾಂಸ ಆರಿಲ್ಲ. ಅವಕ್ಕೆಲ್ಲಾ ಇಂಥ ಜವಾಬ್ದಾರಿ ಹೊರಿಸಿದರ ತಡದಾವೇನ್ರೀ?' ಎಂದು ಪ್ರತಿಕ್ರಿಯಿಸಿದ್ದರು. ಊರು ಮುಂದೆ ಇಂತಹ ಹೊಸಬರಿಂದಲೇ ನಡೆಯಬೇಕಲ್ಲವೇ ಎಂದು ಪರಗೌಡರು ಇತರರನ್ನು ಸಮಾಧಾನಪಡಿಸಿದ್ದರು.

'ಗುಡಸ್ಯಾಗೋಳ'ನೇ ಊರಿನ ಪಂಚಾಯ್ತಿಯ ಸರಪಂಚ(ಚೇರ್ಮನ್)ನಾದನು. ಅವನೊಡನೆ ಅದೇ ಊರಿನ ಅರ್ಧಂಬರ್ಧ ಶಾಲೆ ಕಲಿತ ನಾಲ್ವರು ಸದಸ್ಯರಾದರು. ಆರಂಭದಲ್ಲಿ ಇದರಿಂದ ಊರಿನಲ್ಲಿ ಕೆಲವು ಮಾರ್ಪಾಡುಗಳಾದವು. ಅವುಗಳಲ್ಲಿ ಮೊದಲನೆಯದು ಗುಡಸ್ಯಾಗೋಳನ ಹೆಸರು ಜಿ.ಎಚ್.ಗುಡಸೀಕರ ಬಿ.ಎ., ಎಲ್.ಎಲ್.ಬಿ. ಎಂದಾಯಿತು. ಇಂಗ್ಲಿಷು ಭಾಷೆ ಊರಿನಲ್ಲಿ ತನಗೊಬ್ಬನಿಗೇ ಮಾತ್ರ ತಿಳಿಯುವುದೆಂಬ ಕಾರಣದಿಂದ 'ಗುಡಸೀಕರ' ತನಗೇ ತಾನೇ ಪ್ರತಿಷ್ಠಿತನೆಂದು ಭಾವಿಸಿದ್ದನು. ಈ ಪ್ರತಿಷ್ಠೆಯನ್ನು ಕಂಡ ಊರ ಜನರು ಅವನು ಓದಿದ, ತಿರುಗಾಡಿದ, ಬದುಕಿದ ಬಗ್ಗೆ ಹಲವು ಕಥೆಗಳನ್ನು ಕಟ್ಟಿದರು. ಅವೆಲ್ಲವೂ ಇಂಗ್ಲಿಷಿನ ಕಾರಣದಿಂದಲೇ ಸೃಷ್ಟಿಯಾದ ಕತೆಗಳಾಗಿದ್ದವು.

ಈ ಎಲ್ಲದರಿಂದ ಗುಡಸೀಕರನಿಗೆ 'ಅರ್ಧರಾತ್ರೀಲಿ ಐಶ್ವರ್ಯ ಬಂದರೆ ಕೊಡೆ ಹಿಡಿದರಂತೆ' ಎಂಬಂತಾಯಿತು. ಊರನ್ನು ಅಭಿವೃದ್ಧಿಗೊಳಿಸಬೇಕು, ಅದನ್ನು ಬೆಳಗಾವಿ ನಗರದ ಹಾಗೆ ರೂಪುಗೊಳಿಸಬೇಕು ಅಂದುಕೊಂಡು ತನ್ನ ಪಂಚಾಯ್ತಿಯ ಸದಸ್ಯರೊಡನೆ

ಊರಿಗೇ ಹೊಸದಾದ ರೀತಿಯಲ್ಲಿ ಮೀಟಿಂಗು(ಸಭೆ)ಗಳನ್ನು ನಡೆಸತೊಡಗಿದ. ಸ್ವಭಾವತಃ ಒಳ್ಳೆಯವನಾದ ಗುಡಸೀಕರ್‌ನ ಮನಸ್ಸಿನಲ್ಲಿ ಊರಿನ ನಾಯಕರಲ್ಲಿ ತಾನೂ ಒಬ್ಬನಾಗಬೇಕೆಂಬ ಬಯಕೆ ಉಂಟಾಯಿತು. ಊರಿನ ಹಿರಿಯರಾದ ಪರಗೌಡ ಮತ್ತು ದತ್ತಪ್ಪರಿಗೆ ಊರಿನಲ್ಲಿ ದೊರಕುವ ಮರ್ಯಾದೆ ಮತ್ತು ಗೌರವಗಳು ತನಗೂ ಸಿಗಬೇಕೆಂದು ಹಂಬಲಿಸಿದನು. ಈ ಹಂಬಲವೇ ಊರಿನ ಅಭಿವೃದ್ಧಿಯ ಬಗ್ಗೆ ಯೋಚಿಸುವ ಈತನ ಬುದ್ಧಿಗೆ ಮುಂದೆ 'ಸ್ವಾರ್ಥ'ದ ಮಂಕು ಕವಿಯುವಂತೆ ಮಾಡುತ್ತದೆ.

ಊರಿನಲ್ಲಿ ಗುಡಸೀಕರನ ಮಾತುಗಳಿಗೆ ಬೆಲೆ ದೊರಕದೇ ಆತನ ಸ್ವಪ್ರತಿಷ್ಠೆಗೆ ಧಕ್ಕೆಯಾಗುವಂತಹ ಹಲವು ಘಟನೆಗಳು ಜರುಗಿದವು (ಗುಡಸೀಕರನ ನಡೆಸಿದ ಸಭೆಗಳು, ನಿಂಗೂ ತನ್ನ ಹೆಂಡತಿ ಮತ್ತು ಅಪ್ಪನನ್ನು ಕೊಂದ ಪ್ರಸಂಗ, ಹೋಳೀ ಹಬ್ಬ ಮುಂತಾದವು). ಅವುಗಳ ಪರಿಣಾಮವಾಗಿ ಊರಿನ ಹಿತವೇ ಮುಖ್ಯವೆಂದು ಭಾವಿಸಿದ್ದ ಪರಗೌಡ ಮತ್ತು ದತ್ತಪ್ಪರು ಒಂದು ಗುಂಪಾದರು. ತನ್ನ ಪ್ರತಿಷ್ಠೆಯೇ ಮುಖ್ಯವೆಂದು ತಿಳಿದ ಗುಡಸೀಕರ ಮತ್ತು ಆತನ ಸಹಚರರು ಮತ್ತೊಂದು ಗುಂಪಾದರು. ಹೀಗಾಗಿ ಊರಿನಲ್ಲಿ ಎರಡು ಗುಂಪುಗಳಾದವು.

ಗುಡಸೀಕರ ನಗರಕ್ಕೆ ಹೋಗಿ ಬಿ.ಎ.,ಎಲ್.ಎಲ್.ಬಿ. ಓದಿದವನು. ಆದರೂ ಆತನಿಗೆ ಜೀವನಾನುಭವದ ಕೊರತೆಯಿತ್ತು. ಅವನ ವ್ಯಕ್ತಿತ್ವದಲ್ಲಿ ಇರಬೇಕಾಗಿದ್ದ 'ಉದಾರತೆ' ಇಲ್ಲವಾಗಿತ್ತು. ಅದನ್ನು ಅವನೇ ನಡೆಸುವ ಪಂಚಾಯ್ತಿ ಸಭೆಯಲ್ಲಿ ಊರಿನ ಹಿರಿಯರಾದ ಪರಗೌಡ, ದತ್ತಪ್ಪ ಸಭೆಗೆ ಬಂದಿದ್ದ ಶಾಲಾ ಇನ್ಸ್‌ಪೆಕ್ಟರ್ ಇವರ್‍ಯಾರಿಗೂ ಖುರ್ಚಿ ಕೊಡದೇ, ಇದ್ದ ಒಂದೇ ಖುರ್ಚಿಯಲ್ಲಿ ತಾನೇ ಕುಳಿತುಕೊಳ್ಳುವ ಪ್ರಸಂಗದಿಂದ ವ್ಯಕ್ತಗೊಂಡಿದೆ.

ತನ್ನ ಹೆಂಡತಿ ಮತ್ತು ತನ್ನ ಅಪ್ಪನ ನಡುವಿನ ಅನೈತಿಕ ಸಂಬಂಧವನ್ನು ಸಹಿಸದ ನಿಂಗೂ (ತೃತೀಯಲಿಂಗಿ) ಅವರನ್ನು ಕೊಂದಾಗ, ನಿಂಗೂನನ್ನು ಕಾಪಾಡಲು ಪರಗೌಡ ಮತ್ತು ದತ್ತಪ್ಪರು ಪ್ರಯತ್ನಿಸುತ್ತಾರೆ. ಆದರೆ ಗುಡಸೀಕರ ಕಾಯಿದೆ, ಕಾನೂನಿನ ಮಾತನಾಡಿ ಅವನಿಗೆ ಶಿಕ್ಷೆಯಾಗಬೇಕೆಂದು ಪ್ರತಿಪಾದಿಸುತ್ತಾನೆ. ಪರಿಣಾಮವಾಗಿ ಬೆಳಗಾವಿಗೆ ಹೋಗಿ ದೂರು ನೀಡುತ್ತಾನೆ. ಆದರೆ ಪರಗೌಡ, ದತ್ತಪ್ಪರು ಇಲ್ಲಿ ತೋರುವ ಜಾಣತನವನ್ನು, ಕಾನೂನು ಕಲಿತ ಗುಡಸೀಕರನು ತೋರಲಾಗದೆ ದಡ್ಡತನವನ್ನು ಪ್ರದರ್ಶಿಸುತ್ತಾನೆ. ಇದರಿಂದ ಅವನ ವಿದ್ಯೆ 'ಪುಸ್ತಕದ ಬದನೆಕಾಯಿ'ಯಾಗುತ್ತದೆಯೇ ಹೊರತು, ಅದರೊಡನೆ ಬೇಕಾದ ಲೋಕಾನುಭವವನ್ನು ಹೊಂದಿರುವುದಿಲ್ಲ. ಇದರಿಂದ ಊರಿನಲ್ಲಿ ನಡೆದ ಇಂಥ ಹಲವು ಘಟನೆಗಳಲ್ಲಿ ತನ್ನ ಪ್ರಯತ್ನಗಳಿಂದ ವಿಫಲವಾದಾಗಲೂ ಗುಡಸೀಕರ ವಿಚಲಿತನಾಗುವುದಿಲ್ಲ. ಕಲಿತವನ ಕೈಯಲ್ಲಿ ಪಂಚಾಯ್ತಿ ನೀಡಿದರೆ, ಊರಿಗೆ ಒಳ್ಳೆಯದಾಗುತ್ತದೆ ಎಂಬ ಗೌಡನಿಗೆ 'ಹುಡುಗನ ಮನಸ್ಸು ಆರೋಗ್ಯದಿಂದಿಲ್ಲವೆಂದು' ಅರ್ಥವಾಗಿತ್ತು. ದತ್ತಪ್ಪನಿಗೆ 'ತನ್ನ

ಪ್ರತಿಷ್ಠೆಗಾಗಿ ಊರನ್ನೇ ಬಲಿ ಕೊಡುವನು' ಎಂಬುದು ಖಾತರಿಯಾಗಿತ್ತು. ಇದನ್ನು 'ಕರಿಮಾಯಿ'ಯ ಕಥೆ ಹೇಳುವ ಲಗುಮವ್ವ ಅರ್ಥಮಾಡಿಕೊಂಡು ಹೋಳಿ ಹಬ್ಬದಂದು ಪದಕಟ್ಟಿ ಹೀಗೆ ಹಾಡಿದ್ದಾಳೆ.

"ಕಲಿಯುಗ ಕಾಲಿಟ್ಟಿತು ಧರ್ಮ
ಉಳಿಯಲಿಲ್ಲ ಚೂರಾ!
ಕಲಿತವರ ಕಾಲಾಗ ಲೌಕಿಕವೆಂಬೋದು
ಅಧರ್ಮವಾಯಿತು ಪೂರಾ !!"[೧೧]

ಈ ಪದದ ಅರ್ಥದಂತೆ ಗುಡಸೀಕರ 'ಶಿವಾಪುರ'ಕ್ಕೆ ಕಲಿಯುಗದ ಪ್ರವೇಶಿಕನಾಗಿದ್ದ. ಕಲಿತವರು 'ಕೋತಿ'ಗಳಂತಾಗುತ್ತಾರೆ ಎಂಬುದಕ್ಕೆ ಸಾಕ್ಷಿಯಾಗುತ್ತಿದ್ದ. ಗುಡಸೀಕರನ ಎದುರಿಗೆ ಈ ಹಾಡನ್ನು ಹಾಡಲಾಗುತ್ತದೆ. ಇದಕ್ಕೆ ಊರಿನ ಮುದುಕರು ಸಾಥ್ ಕೊಡುತ್ತಾರೆ. ಗುಡಸೀಕರನ ಬಗೆಗಿನ ಅಸಹನೆ ಇಡಿಯಾಗಿ ಓದಿಕೊಂಡವರನ್ನು ಹೀಯಾಳಿಸುವ ಮೂಲಕ ವ್ಯಕ್ತಗೊಂಡಿದೆ.

ಊರಿನಲ್ಲಿ ತಾನು ಅಂದುಕೊಂಡಂತೆ ತನ್ನ ಕಾರುಬಾರು ನಡೆಯಬೇಕೆಂದರೆ ಒಂದು 'ಸೆರೇದಂಗಡಿ' ತೆರೆಯಬೇಕೆಂದು ತನ್ನ ಸಂಗಡಿಗರಾದ ಕಳ್ಳ ಸಿದ್ದರಾಮ, ರಮೇಶ, ಆಯೀಮರೆಮಿಂಡ, ಜಿಗಸು ಸಾತೀರ ಮೊದಲಾದವರೊಂದಿಗೆ ತೀರ್ಮಾನಿಸುತ್ತಾನೆ. ಆ ಸೆರೇದಂಗಡಿಗೆ ಬೆಳಗಾವಿಯಿಂದ 'ಹೆಣ್ಣೊಬ್ಬಳನ್ನು' ತಂದು ಕೂರಿಸಿದರಾಯ್ತು ಎಂದುಕೊಳ್ಳುತ್ತಾನೆ. ಇದು 'ಶಿವಾಪುರ'ವನ್ನು 'ಬೆಳಗಾವಿ' ಮಾಡುವ ಅವನ ಮೊದಲ ಪ್ರಯತ್ನವಾಗಿತ್ತು. ಗೌಡ ಮತ್ತು ದತ್ತಪ್ಪರು ಆಡಿಸುವ 'ಬಯಲಾಟ'ಕ್ಕೆ ಪ್ರತಿಯಾಗಿ 'ಸೀತಾಪಹರಣ' ನಾಟಕವಾಡಿಸಲು ಪ್ರಯತ್ನಿಸಿ ವಿಫಲನಾಗುತ್ತಾನೆ. ಸೆರೇಯಂಗಡಿ ತೆರೆಯಲು ಸಾಧ್ಯವಾಗದಿದ್ದಾಗ ವಿದೇಶಿ 'ಬ್ರಾಂಡು'ಗಳನ್ನು ತಂದು ಊರಿನ ಕೆಲವರಿಗೆ ಪರಿಚಯಿಸುತ್ತಾನೆ. ಕೊನೆಗೆ 'ಟೀ' ಅಂಗಡಿಯನ್ನಾದರೂ ತೆಗೆಯಬೇಕೆಂದು ಯೋಚಿಸಿ ಅದನ್ನು ಪ್ರಾರಂಭಿಸಿ ಅಲ್ಲಿ 'ಚಿಮಣಾ'ಳನ್ನು ಕೂರಿಸಿದ. ಆದರೆ, ಊರಿನವರು 'ಟೀ'ಯ ಚಟಕ್ಕೆ ಬೀಳಲೇ ಇಲ್ಲ. ಪರಿಣಾಮವಾಗಿ 'ಟೀ' ಅಂಗಡಿ ಖಾಲಿಯಾಗಿ ಅದು ಬೆಳಗಾವಿಯಿಂದ ತಂದಿದ್ದ 'ಚಿಮಣಾ'ಳಿಗೂ ಅವಳೊಡನೆ ಬಂದಿದ್ದ 'ಬಸವರಾಜ'ನಿಗೂ ಆಶ್ರಯ ತಾಣವಾಯಿತು.

ಊರಿಗೆ ಚಿಮಣಾ ಮತ್ತು ಬಸವರಾಜರ ಆಗಮನ ಗುಡಸೀಕರನ ಯೋಚನೆಗಳಿಗೆ, ಕಾರ್ಯಗಳಿಗೆ ಬಲತಂದಿತ್ತು. ಗುಡಸೀಕರ 'ಶಿವಾಪುರ'ದವನೇ ಆದರೂ ಊರಿನ ಅಂತರಾಳವನ್ನು ಅರಿತಿರಲಿಲ್ಲ. ಆದರೆ, ಓದಿದ್ದ, ಪಟ್ಟಣ ಸುತ್ತಿದ್ದ, ಶೋಕಿ ಕಲಿತಿದ್ದ 'ಬಸವರಾಜ' ಕ್ರಮೇಣ ಊರಿನ 'ಅಂತರಂಗ'ವನ್ನು ತಿಳಿದುಕೊಂಡ. ಊರಿನವರಿಗೆ 'ಕರಿಮಾಯಿ'ಯೇ ಶಕ್ತಿ ಮತ್ತು ದೌರ್ಬಲ್ಯವೆಂಬುದು ಅವನ ಗ್ರಹಿಕೆಗೆ

ನಿಲುಕಿತ್ತು. ಬಸವರಾಜನಿಗೆ 'ಕರಿಮಾಯಿ' ತನ್ನ ಕೆಲಸಗಳಿಗೆ, ಲಾಭಗಳಿಗೆ, ಒಂದು 'ಸಾಧನ'ದಂತೆ ಮಾತ್ರ ಕಂಡಳು. ಕಲಿತಿದ್ದ ಗುಡಸೀಕರನಿಗೆ 'ಕರಿಮಾಯಿ'ಯ ಬಗ್ಗೆ ಮೌಢ್ಯಗಳೇನೂ ಇರಲಿಲ್ಲ. ಹಾಗೆಯೇ ತುಂಬು ಭಕ್ತಿಯೂ ಇರಲಿಲ್ಲ.

ಯು.ಆರ್. ಅನಂತಮೂರ್ತಿಯವರ 'ಭಾರತೀಪುರ' ಕಾದಂಬರಿಯ ಜಗನ್ನಾಥ ತನ್ನ ಊರಿನ ಜನರ ನಂಬಿಕೆಯಾದ. 'ಮಂಜುನಾಥ'ನನ್ನು ಬಳಸಿಕೊಂಡು ದಲಿತರ ಉದ್ಧಾರಕ್ಕೆ ಪ್ರಯತ್ನಿಸುತ್ತಾನೆ. 'ಮಂಜುನಾಥ'ನ ಹೆಸರಿನಲ್ಲಾಗುವ ಆಚರಣೆಗಳನ್ನು ತಿರಸ್ಕರಿಸಿ ಪ್ರತಿಭಟಿಸುತ್ತಾನೆ. ಇಲ್ಲಿ ಗುಡಸೀಕರ 'ಕರಿಮಾಯಿ'ಯ ಹೆಸರಿನಲ್ಲಾಗುವ ಯಾವ ಮೌಢ್ಯವನ್ನು, ಆಚರಣೆಗಳನ್ನು, ಸಂಪ್ರದಾಯಗಳನ್ನು ಪ್ರಶ್ನಿಸುವುದಿಲ್ಲ. ಅದನ್ನು ಸುಧಾರಿಸಲು ಯೋಚಿಸುವುದಿಲ್ಲ. ಊರಿನವರಿಗೆಲ್ಲಾ 'ಕರಿಮಾಯಿ' ಕೇಂದ್ರಬಿಂದುವಾದರೆ, ಗುಡಸೀಕರನಿಗೆ ಅದು ಏನೂ ಅಲ್ಲವಾಗುತ್ತದೆ. ಆದರೆ, ಜಗನ್ನಾಥನ ಪಾತ್ರಕ್ಕೆ ವೈದೃಶ್ಯವಾಗಿ ಇಲ್ಲಿ ಬಸವರಾಜ 'ಕರಿಮಾಯಿ' ದೈವವನ್ನೇ ಬಳಸಿಕೊಂಡು ಸಮುದಾಯದ ಒಳಿತಿಗಿಂತ ತನ್ನ ಚತುರತೆ, ಕಪಟತೆಗಳಿಂದ ವೈಯುಕ್ತಿಕ ನೆಲೆಯಲ್ಲಿ ಲಾಭ ಮಾಡಿಕೊಂಡು, ಇಡೀ ಊರನ್ನು, ಊರಿನ ನಂಬಿಕೆಯನ್ನು ತಲೆಕೆಳಗು ಮಾಡುತ್ತಾನೆ. ಇದಕ್ಕೆ 'ಕರಿಮಾಯಿ'ಯಂತೆಯೇ ಗುಡಸೀಕರ, ದುರ್ಗಾ, ಚಿಮಣಾ, ಗಿರಿಜೆ, ದೇವರೊಸಿ, ನಿಂಗೂ ಈ ಮುಂತಾದವರು ಸಾಧನವಾಗುತ್ತಾರೆ. ಈ ಸಂಗತಿಗಳ ಅರಿವು ಊರಿನವರ ಗಮನಕ್ಕೆ ಬಾರದಂತೆ ನಡೆದುಕೊಳ್ಳುತ್ತಾನೆ. ಅಂತಿಮವಾಗಿ ಊರಿನಲ್ಲಿ ನಡೆದ ಅನಾಹುತಗಳಿಗೆ ಕಾರಣನಾಗುತ್ತಾನೆ.

ಗುಡಸೀಕರನಿಂದ ಊರಿಗೆ ಉಳಿಗಾಲವಿಲ್ಲ ಎಂಬುದರ ಅರಿವಾದಾಗ ದತ್ತಪ್ಪ ಪಂಚಾಯ್ತಿಯ 'ಸರಪಂಚ' (ಚೇರ್ಮನ್) ಸ್ಥಾನಕ್ಕೆ ರಾಜೀನಾಮೆ ನೀಡುವಂತೆ ಕೇಳುತ್ತಾನೆ. ಆದರೆ ಗುಡಸೀಕರ ರಾಜೀನಾಮೆ ನೀಡದೆ ಮುಂದಿನ ಚುನಾವಣೆ ಎದುರಿಸುವ ಮಾತಾಡುತ್ತಾನೆ. ಚುನಾವಣೆಗೆ ಗೌಡರ ಗುಂಪು ಮತ್ತು ಗುಡಸೀಕರನ ಗುಂಪುಗಳೆರಡೂ ನಿಲ್ಲುತ್ತವೆ. ಬಸವರಾಜನ ಚಿತಾವಣೆ ಮತ್ತು ತಂತ್ರದಿಂದ ಚುನಾವಣೆಯ ಭರಾಟೆ ಜೋರಾಗುತ್ತದೆ. ಈಗಾಗಲೇ ಗುಡಸೀಕರನ ಮೂಲಕ ವಿದೇಶೀ ಬ್ರಾಂಡ್, ಸಿಗರೇಟು, ಬಸವರಾಜನ ರೇಡಿಯೋ ಮೂಲಕ ಆಧುನಿಕತೆಯ ಪ್ರವೇಶವಾಗಿದ್ದ 'ಶಿವಾಪುರ'ಕ್ಕೆ ಮೈಕು ಭಾಷಣ, ಓಟು ಪಡೆಯಲು ಹೆಣ್ಣು ಮಕ್ಕಳಿಗೆ 'ಬ್ರಾ' ವಿತರಿಸುವ ಇತರ ವಿಚಾರಗಳು ಪ್ರವೇಶವಾಗಿ ಪೋಲೀಸರ ಆಗಮನವಾಗುತ್ತದೆ. ಸ್ವಾತಂತ್ರ್ಯ ಚಳವಳಿಯ ಹೋರಾಟಗಾರನೂ, ಪರಗೌಡನ ಗೆಳೆಯನೂ ಆಗಿದ್ದ 'ಮುದುಕಪ್ಪಗೌಡ' 'ಗೌಡ'ರ ಮನೆಯಲ್ಲಿ ತಲೆಮರೆಸಿಕೊಂಡಿದ್ದಾಗ 'ಹಣ'ದ ಆಸೆಗೆ ಅವನ ಸುಳಿವು ನೀಡಿ ಅವನನ್ನು ಕೊಲ್ಲಿಸಲಾಗುತ್ತದೆ. ಚಿಮಣಾ ಮತ್ತು ಬಸವರಾಜುವಿನ ಕುತಂತ್ರದಿಂದ 'ಚಿಮಣಾ'ಳ ಗರ್ಭಕ್ಕೆ 'ಗೌಡ'ನೇ ಕಾರಣ ಎಂಬುದನ್ನು ಪೋಜುದಾರರ ಮುಂದೆ ನಿರ್ಧಾರವಾಗುವಂತೆ ಮಾಡಿ ಗೌಡ ಮತ್ತು ಆತನ ಮಗ ಶಿವನಿಂಗನ ವ್ಯಕ್ತಿತ್ವಕ್ಕೆ ಮಸಿ ಬಳಿಯಲೆತ್ನಿಸಲಾಗುತ್ತದೆ. ಮನನೊಂದ ಶಿವನಿಂಗ ಯಾರಿಗೂ ತಿಳಿಯದ ಹಾಗೆ ಊರುಬಿಟ್ಟು ಹೊರಡುತ್ತಾನೆ.

ಇವೆಲ್ಲದರ ಪರಿಣಾಮವಾಗಿ ಒಂದು ಸಂಘಟಿತವಾಗಿದ್ದ 'ಶಿವಾಪುರ'ದ ಬದುಕು ಛಿದ್ರವಾಗುತ್ತದೆ, ಮೊದಲಿದ್ದ ಸೊಬಗನ್ನು ಕಳೆದುಕೊಂಡು ಕಳೆಗುಂದುತ್ತದೆ. ಊರಿನಲ್ಲಿ ಸಂಭ್ರಮ, ಲವಲವಿಕೆ ಇಲ್ಲವಾಗುತ್ತದೆ. ಗೌಡ, ದತ್ತಪ್ಪ, ಲಗುಮವ್ವರಿಗೆ ಊರಿನಲ್ಲಿ ಅನಾಹುತವಾಗುವ ಸೂಚನೆ ಸಿಗುತ್ತದೆ. ಅದರಂತೆ 'ಕರಿಮಾಯಿ'ಯ ವಿಗ್ರಹ ಚಿಮಣಾ ಮತ್ತು ಬಸವರಾಜು ಅವರು ಹೆಣೆದ ತಂತ್ರಕ್ಕೆ ಸಿಲುಕಿ ಮುರಿದು ಬೀಳುತ್ತದೆ. 'ಕರಿಮಾಯಿ'ಗೆ ಹಾಕಿದ್ದ ಪರಂಪರಾಗತವಾಗಿದ್ದ 'ಬಂಗಾರದ ಮುಖ'ವನ್ನು ಗಡಸೀಕರ ರಕ್ಷಿಸಿರುತ್ತಾನೆ. ಆದರೆ ಅದನ್ನು ಗಡಸೀಕರನಿಗೆ ತಿಳಿಯದಂತೆ ಬಸವರಾಜು ಕದ್ದುಕೊಂಡು ಹೋಗುತ್ತಾನೆ.

ಈ ಎಲ್ಲ ಘಟನೆಗಳಿಗೆ 'ಗುಡಸೀಕರ'ನೇ ಕೇಂದ್ರವಾಗುತ್ತಾನೆ. ಅವನನ್ನು ಚಿಮ್ಮ ಹಲಗೆ ಮಾಡಿಕೊಳ್ಳುವುದು ಬಸವರಾಜ ಮತ್ತು ಚಿಮಣಾ.

ಗುಡಸೀಕರನ ಪಾತ್ರವನ್ನು ವಿಶ್ಲೇಷಿಸುವುದಾದರೆ, ಕಾದಂಬರಿಯ ನಿರೂಪಕನ ಪ್ರಕಾರ ಅವನು 'ಖಳನಾಯಕನಲ್ಲ'.

> ಕಲಿತಿದ್ದರ ಬಗ್ಗೆ ಒಂದಿಷ್ಟು ಧಿಮಾಕಿತ್ತು. ಕಲಿತವರೇ ಇಲ್ಲದಲ್ಲ ಅದು ಹೆಚ್ಚಲ್ಲ. ಪ್ರಾಯದ ಮದ ಇತ್ತು; ಆ ವಯಸ್ಸಿಗೆ ಅದೂ ಹೆಚ್ಚಲ್ಲ. ಅಪ್ಪ ಗಳಿಸಿದ ದುಡ್ಡಿತ್ತು; ಆದರೆ ಧಾರಾಳತನವೂ ಇತ್ತು.[೧೨]

ಕಲಿತ ಹುರುಪಿನಲ್ಲಿ, ಆದರ್ಶದ ಕಾವಿನಲ್ಲಿ ಊರನ್ನು ಸುಧಾರಣೆ ಮಾಡಬೇಕೆಂಬ ಆಸೆಯಿತ್ತು. ಹೊಸದನ್ನು ಸೃಷ್ಟಿಸಬೇಕೆಂಬ ಬಯಕೆಯಿತ್ತು. ತಾನೊಬ್ಬನೇ ಕಲಿತವನಾದ್ದರಿಂದ ಇತರರಿಗಿಂತ ಊರಿನಲ್ಲಿ ತನ್ನ ಜವಾಬ್ದಾರಿ ಹೆಚ್ಚೆಂಬ ಭಾವವಿತ್ತು. ತನ್ನ ಹಳ್ಳಿಯನ್ನು ಅಭಿವೃದ್ಧಿಗೊಳಿಸಬೇಕೆಂಬ ಹಂಬಲವಿತ್ತು.

> ಕೈಯಲ್ಲಿ ಗಾಂಧೀ ಫೋಟೋ, ತಲೆಯಲ್ಲಿ ಹಳವಂಡ ಹೊತ್ತುಕೊಂಡು ಹಳ್ಳಿಗೆ ಬಂದ. ಆದರೆ ಹಳ್ಳಿಯಲ್ಲಿ ಜನ ಕಾಣಿಸಲಿಲ್ಲ; ಪ್ರಾಣಿಗಳಿದ್ದವು. ಅಂಕುಡೊಂಕಾದ ರಸ್ತೆಗಳು, ಗಟಾರಿಲ್ಲದ 'ಓಣಿಗಳು', ಕೊಳೆತ ಎಲ್ಲೆಂದರಲ್ಲಿ ನಾರುವ ತಿಪ್ಪೆಗಳು, ಧೂಳಿನಲ್ಲಿ ಉರುಳಾಡುವ ಕೂಸುಗಳು, ಕುನ್ನಿಗಳು, ಬೇಕಾಬಿಟ್ಟಿ ಅಡ್ಡಾಡುವ ನಾಯಿಗಳು, ದನಗಳು, ಜನಗಳು, ಕಂಡು ಅಪಾರ ಕರುಣೆ ಬಂತು. ಕೊಳೆ ತೊಳೆಯಬೇಕಾದದ್ದೇ ಮೊದಲ ಕೆಲಸವೆಂದುಕೊಂಡ. ಅದಕ್ಕ ಅವಕಾಶವೂ ಸಿಕ್ಕಿತು.[೧೩]

ಗುಡಸೀಕರನು ಊರಿನ ಸರಪಂಚನಾದ. ಆದರೆ, ಸರಪಂಚನಾದ ಈತನ ಯಾವ ಮಾತುಗಳಿಗೂ ಊರಿನಲ್ಲಿ ಮನ್ನಣೆ ಸಿಗದ ಕಾರಣ ಅವನ ಮನಸ್ಸು ಮೊಂಡು ಬಿದ್ದಿತು. ಗೌಡ ಮತ್ತು ದತ್ತಪ್ಪರ ಮೇಲೆ ವಿನಾಕಾರಣ ಶತ್ರುತ್ವ ಬೆಳೆಸಿಕೊಂಡ. ಅದಕ್ಕಾಗಿ ಅವರಿಗೆ ನೋವಾಗುವ, ಅವರ ಮರ್ಯಾದೆ ತೆಗೆಯುವ ಕಾರ್ಯಗಳನ್ನು ಮಾಡತೊಡಗಿದ.

ತನಗೆ ಕಲಿಸಿದ್ದ ಶಾಲಾ ಮಾಸ್ತರರನ್ನು (ಪ್ರಶ್ನೋತ್ತರ ಮಾಸ್ತರ) ಅಪಮಾನಿಸಿದ. ವಿದೇಶಿ ಬ್ರಾಂಡನ್ನು ಗೌಡರ ಮನೆಯ ಕೆಲಸದವನಾದ 'ನಾಯಲ್ಯಾ'ನಿಗೆ ಕುಡಿಸಿ, ಅವನ ಸಾವಿಗೆ ಕಾರಣನಾದ. ಊರಿಗೆ ಪೊಲೀಸರು, ಚುನಾವಣೆಗಳು ಬರುವುದಕ್ಕೆ ಕಾರಣನಾದ. 'ಟೀ' ಅಂಗಡಿಯ ಹೆಸರಿನಲ್ಲಿ ಬಸವರಾಜು ಮತ್ತು ಚಿಮಣಾರನ್ನು ತಂದು ಊರಿನ ಶಾಂತಿ ಕದಡಿದ. ಇವರ ತಂತ್ರದಿಂದಲೇ 'ಗೌಡ'ನೇ 'ಚಿಮಣಾ'ಳ ಬಸರಿಗೆ ಕಾರಣನೆಂದ. ಆದರೆ ಊರಿಗೇ ತಿಳಿದಂತೆ 'ಚಿಮಣಾ'ಳ ಸಂಗ ಮಾಡಿದ್ದವನು 'ಗುಡಸೀಕರ'ನೇ ಆಗಿದ್ದ. ಗೌಡನ ಮೇಲೆ ಅಪವಾದ ಹೊರೆಸಿದ ಸಂದರ್ಭದಲ್ಲಿ ಗೌಡ ಗುಡಸೀಕರನ ಮುಂದೆ ನಿನ್ನೊಡನೆ ವೈರ ಮಾಡುವ ವಯಸ್ಸು ತನ್ನದಲ್ಲವೆಂದು ಕೇಳಿಕೊಂಡನು.

> ಈ ಊರಿಗೆ ನಮ್ಮಥಾ ಮುದುಕರಲ್ಲಪ್ಪಾ, ನೀ ಬೇಕು, ನಿನ್ನಂಥವ ಬೇಕು .... ನಮ್ಮ ಮ್ಯಾಲಿನ ಸಿಟ್ಟಲೆ ಊರ್ಯಾಕ ಹಾಳಾಗಬೇಕೊ ಎಣ್ಣಾ? ಖರೆ ಹೇಳೋ ತಮ್ಮ ನಾ ಆ ಚಿಮಣಾನ ಬಸರು ಮಾಡಿದ್ದ ಖರೆ ಮಾತ? ಸಾಯೊ ಕಾಲದಾನ ನನ್ನ ಮ್ಯಾಲ ದೂರನ್ನು ಹೊರಸಬ್ಯಾಡ[೧೪] ಎಂದು ಕೈಮುಗಿದಿದ್ದ.

ಈ ಮಾತುಗಳಿಗೆ ಕರಗಿದ್ದ ಗುಡಸೀಕರ ಮತ್ತೆ ತನ್ನ ತಪ್ಪುಗಳನ್ನೆಲ್ಲ ತಿಳಿದು ಪಶ್ಚಾತ್ತಾಪಪಟ್ಟು ತನ್ನೊಬ್ಬನಿಂದ ಊರು, ಊರಿನ ಪುರಾಣ ಹಾಳಾಗುವುದು ಅವನಿಗೆ ಬೇಕಿರಲಿಲ್ಲ. ಕರಿಮಾಯಿಯ ಬಂಗಾರದ ಮುಖವನ್ನು ಗೌಡನಿಗೆ ಒಪ್ಪಿಸಬೇಕೆಂದಿದ್ದ. ಆದರೆ ಎಲ್ಲವೂ ಕೈಮೀರಿದ ಘಟನೆಗಳಾಗಿ ಅನಾಹುತಗಳಾಗಿದ್ದವು. 'ಶಿವಾಪುರ' ಆಧುನಿಕತೆಯ ಭರಾಟೆಗೆ ಸಿಕ್ಕಿ ನಲುಗಿತ್ತು. ಆದರೂ ಹುಚ್ಚಿಯಾಗಿದ್ದ ಚಿಮಣಾ ಹೆಣ್ಣು ಮಗುವಿಗೆ ಜನ್ಮ ನೀಡುವ ಘಟನೆ ಹೊಸತನದ ಆಶಯವಾಗಿದೆ. ಆಧುನಿಕತೆ ಪ್ರವೇಶಿಸಿದಂತೆ ಸ್ಥಳೀಯ ಅಥವಾ ದೇಶೀಯ ಬದುಕಿನಲ್ಲಿ ಹಲವು ಮಾರ್ಪಾಡುಗಳಾಗುತ್ತವೆ. ಅಂದರೆ ಅದರಿಂದ ತೊಡಕುಂಟಾಗುತ್ತದೆ ಎಂದು ಅರ್ಥವಲ್ಲ. ಯಾವುದೇ ಸಮುದಾಯ ಹೊಸತನಕ್ಕೆ ಹೊಂದಿಕೊಳ್ಳುವಾಗ ಅಲ್ಲಿನ ಸ್ಥಿತಿಯಲ್ಲಿ ತಲ್ಲಟವುಂಟಾಗುತ್ತದೆ. ಆ ತಲ್ಲಣಕ್ಕೆ ಶಿವಾಪುರ ಸಾಕ್ಷಿಯಾಗಿದೆ.

ನವೋದಯ ಕಾಲದ ಕಥನಗಳಲ್ಲಿ ಅಥವಾ ಆ ಕಾಲದ ಹಲವು ಕಾದಂಬರಿಗಳಲ್ಲಿ ವಿದ್ಯಾವಂತ ತರುಣರು ತಮ್ಮ ಊರುಗಳನ್ನು, ಕೇರಿಗಳನ್ನು, ಕುಟುಂಬಗಳನ್ನು ಸುಧಾರಿಸುವ ಪ್ರಯತ್ನ ಮಾಡುತ್ತಾರೆ. ಅದೇ ನವ್ಯಕಾಲಕ್ಕೆ ಅಂತಹ ವಿದ್ಯಾವಂತ ತರುಣರು ಹಲವು ಸಂಕೀರ್ಣಗಳಲ್ಲಿ, ದ್ವಂದ್ವಗಳಲ್ಲಿ ಕಳೆದುಹೋಗುತ್ತಾರೆ. ತಮ್ಮ ಗುರಿಗಳ ಕಡೆಗೆ ಅವರಿಗೆ ನಿಖರತೆ ಇರುವುದಿಲ್ಲ. ಈ ಹಿನ್ನಲೆಯಲ್ಲಿ ಭಾರತೀಪುರದ 'ಜಗನ್ನಾಥ' ಒಂದೆಡೆಯಾದರೇ ಕರಿಮಾಯಿಯ ಗುಡಸೀಕರ ಮತ್ತೊಂದೆಡೆಗೆ ದಾರಿ ತಪ್ಪಿದ ತರುಣರಾಗಿ ಕಾಣುತ್ತಾರೆ.

ವಿದ್ಯಾವಂತನಾದ ಗುಡಸೀಕರನ ಓದು, ತಿಳಿವಳಿಕೆ ಯಾರಿಗೂ ಉಪಕಾರ ಮಾಡುವುದಿಲ್ಲ. ಗುಡಸೀಕರನಲ್ಲಿ ಆದರ್ಶಗಳಿದ್ದವು. ಆದರೆ ಅವುಗಳನ್ನು ಅನುಷ್ಠಾನಗೊಳಿಸುವಲ್ಲಿ ಆತ ಸೋಲುತ್ತಾನೆ. ಹಳ್ಳಿಗೆ ಆದರ್ಶವಾಗಬೇಕಾಗಿದ್ದ ವಿದ್ಯಾವಂತರು ಹಳ್ಳಿಯ ಬದುಕಿನ ತಾಕಲಾಟಗಳಿಗೆ ಕಾರಣವಾಗುವ ಬಗೆಯನ್ನು 'ಕರಿಮಾಯಿ' ಕಾದಂಬರಿ ಸಶಕ್ತವಾಗಿ ಕಟ್ಟಿಕೊಟ್ಟಿದೆ.

ಚಂದ್ರಶೇಖರ ಕಂಬಾರರು 'ಶಿವಾಪುರ'ದ ಪುರಾಣ, ಚರಿತ್ರೆ, ಜನಪದವನ್ನು ಕಟ್ಟುತ್ತಲೇ ಆಧುನಿಕ ಶಿಕ್ಷಣದಿಂದಾಗಿ ಆ ಊರಿನಲ್ಲಾದ ಬದಲಾವಣೆಗಳನ್ನು ಚಿತ್ರಿಸಿದ್ದಾರೆ. ಗುಡಸೀಕರ, ಬಸವರಾಜನಂತಹ ಶಿಕ್ಷಿತ ಪಾತ್ರಗಳಿಂದಲೇ ಸಮುದಾಯದ ಬದುಕು ಅನಾಹುತಗಳಿಗೊಳಗಾಗುವ ಬಗೆಯನ್ನು ನಿರೂಪಿಸಿದ್ದಾರೆ. ಕಂಬಾರರು ಗುಡಸೀಕರನ ಬದುಕಿನ ವಿಫಲತೆಯನ್ನು ಸಮಷ್ಟಿಯೊಳಗೆ ತಂದು ಅಲ್ಲಿ ಅವನ ವ್ಯಕ್ತಿತ್ವಕ್ಕೆ ಸೋಲಾಗುವುದನ್ನು ಕಟ್ಟಿಕೊಟ್ಟಿದ್ದಾರೆ.

ಈ ರೀತಿಯಲ್ಲಿ ನವ್ಯ ಪಂಥದ ಈ ಕಾದಂಬರಿಗಳು ಆಧುನಿಕ ಶಿಕ್ಷಣ ಉಂಟುಮಾಡಿದ ತಲ್ಲಣಗಳನ್ನು ವಿವರಿಸಿವೆ. 'ಬಿರುಕು' ಕಾದಂಬರಿಯ ಬಸವರಾಜ ಉನ್ನತ ಶಿಕ್ಷಣ ಪಡೆದವನಾದರೂ ತನ್ನ ಬದುಕನ್ನು ಕಟ್ಟಿಕೊಳ್ಳಲು ವಿಫಲನಾಗುತ್ತಾನೆ. ಭಾರತೀಪುರದ 'ಜಗನ್ನಾಥ' ವಿದೇಶದಲ್ಲಿ ಓದಿ ಬಂದವನು. ತನ್ನ ಅರಿವಿನಿಂದ ಭಾರತೀಪುರ ಬದುಕಿನಲ್ಲಿ ಹೊಸತನ ತರುವ ಪ್ರಯತ್ನ ಮಾಡುತ್ತಾನೆ. ಅವನ ಆದರ್ಶಗಳು ಕಾರ್ಯರೂಪಕ್ಕೆ ಬರುವಲ್ಲಿ ಸೋಲುತ್ತವೆ. 'ಕರ್ವಾಲೋ' ಕಾದಂಬರಿಯಲ್ಲಿ ಸಸ್ಯ ವಿಜ್ಞಾನಿಯ ಓದಿನ ತಿಳುವಳಿಕೆ ಮತ್ತು ಮಂದಣ್ಣನ ಸಹಜವಾದ ಅರಿವುಗಳಲ್ಲಿ ಯಾವುದು ಮೀಸಲಾದುದು ಎನ್ನುವ ಜಿಜ್ಞಾಸೆಯಲ್ಲಿ ಮಂದಣ್ಣನ ತಿಳಿವಿಗೆ ಮಹತ್ವ ದೊರೆತಿದೆ. ಹೊಸ ಶಿಕ್ಷಣ ಕ್ರಮದ ಎದುರಿಗೆ ತೇಜಸ್ವಿಯವರು ಪರಂಪರೆಯ ಜ್ಞಾನಕ್ಕೆ ಮನ್ನಣೆ ಸಿಗುವಂತೆ ಮಾಡುತ್ತಾರೆ. 'ಕಾಡು' ಕಾದಂಬರಿಯ ಕಿಟ್ಟಿಗೆ ಶಾಲೆಗೆ ಹೋಗುವುದು ಎಂದರೆ ಇಷ್ಟವಿಲ್ಲದ ಕೆಲಸ. ಶಾಲಾ ಮಾಸ್ತರ ಶಿವಣ್ಣ, ಮರಂಕಿ ಮತ್ತು ಗೆಂಡೆತಿಮ್ಮರ ಬದುಕಿನ ಅವಸಾನಕ್ಕೆ ಕಾರಣವಾದ ಬಗೆಯನ್ನು 'ಪರಸಂಗದ ಗೆಂಡೆತಿಮ್ಮ' ಕಾದಂಬರಿ ಚಿತ್ರಿಸಿದೆ. ಕಂಬಾರರ 'ಕರಿಮಾಯಿ' ಕಾದಂಬರಿಯ ಗುಡಸೀಕರ ಎಲ್.ಎಲ್.ಬಿ. ಕಲಿತವನಾದರೂ ಊರಿಗೆ ವಿದೇಶಿ ಮದ್ಯ ತರುತ್ತಾನೆ. ಊರಿನ ಶಾಂತಿ ಕದಡುತ್ತಾನೆ. ನಗರದಿಂದ ಬಂದ ಬಸವರಾಜು ಮತ್ತು ಚಿಮಣಾ 'ಶಿವಾಪುರ'ದ ನೆಮ್ಮದಿ ಹಾಳಾಗಲು ಕಾರಣರಾಗುತ್ತಾರೆ.

ಹೀಗೆ ಅಕ್ಷರ ಕಲಿತವರು ಸಮಾಜದ ಸುಧಾರಣೆಗೆ ಪ್ರಯತ್ನ ಪಡುತ್ತಾರೆ ಎಂದು ಕೊಳ್ಳಲಾಗಿತ್ತು. ಆದರೆ ಕಲಿತ ವ್ಯಕ್ತಿಗಳು ಗ್ರಾಮ ಬದುಕಿನ ಪಲ್ಲಟಕ್ಕೆ ಕಾರಣರಾಗುತ್ತಾರೆ. ಈ ಹಿನ್ನೆಲೆಯಲ್ಲಿ ಆಧುನಿಕ ಶಿಕ್ಷಣದ ಬಗ್ಗೆ ಈ ಕಾದಂಬರಿಕಾರರ ನಿರಾಕರಣೆಯನ್ನು ಗ್ರಹಿಸಬಹುದಾಗಿದೆ.

**ಕೊನೆಟಿಪ್ಪಣಿಗಳು**

೧. ಲಂಕೇಶ್ ಪಿ., 'ಬಿರುಕು' , ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೬, ಪುಟ ೪.

೨. ಅದೇ, ಪುಟ ೨೪.

೩. ಅದೇ, ಪುಟ ೩೭.

೪. ಅನಂತಮೂರ್ತಿ ಯು.ಆರ್., 'ಭಾರತೀಪುರ', ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೮, ಪುಟ ೨೫.

೫. ಅದೇ, ಪುಟ ೭೬.

೬. ಅದೇ, ಪುಟ ೧೯೭.

೭. ಅದೇ, ಪುಟ ೬೩.

೮. ಪೂರ್ಣಚಂದ್ರ ತೇಜಸ್ವಿ, ಕರ್ವಾಲೋ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೮೩, ಪುಟ ೨೨೦.

೯. ಶ್ರೀಕೃಷ್ಣ ಆಲನಹಳ್ಳಿ, ಕಾಡು, ಭಾರತೀ ಪ್ರಕಾಶನ, ಮೈಸೂರು, ೨೦೦೮, ಪುಟ ೨೩.

೧೦. ಅದೇ, ಪುಟ ೭೨.

೧೧. ಚಂದ್ರಶೇಖರ ಕಂಬಾರ, ಕರಿಮಾಯಿ, ಅಂಕಿತ ಪ್ರಕಾಶನ, ಬೆಂಗಳೂರು, ೨೦೧೧, ಪುಟ ೬೬.

೧೨, ಅದೇ, ಪುಟ ೧೧೩.

೧೩, ಅದೇ, ಪುಟ ೧೧೩.

೧೪. ಅದೇ, ಪುಟ ೧೭೪

# ಸಮಾರೋಪ

ಆಧುನಿಕ ಕನ್ನಡ ಸಾಹಿತ್ಯವು ಆರಂಭದಿಂದಲೂ ಭಿನ್ನಮತೀಯ ಪರಂಪರೆಯನ್ನು ಬೆಳೆಸಿಕೊಂಡು ಬಂದಿದೆ. ಸ್ವವಿಮರ್ಶೆ, ಅನ್ಯ ಸಂಸ್ಕೃತಿ ಬಗೆಗಿನ ಎಚ್ಚರ ಮತ್ತು ಕಾಳಜಿಯನ್ನು ಮೈಗೂಡಿಸಿಕೊಂಡಿದೆ. ಸ್ವಕೀಯ ಅನುಭವಗಳು ಹಾಗೂ ಪರಕೀಯ ಪ್ರಭಾವಗಳ ನಡುವೆ ಕನ್ನಡ ಸಾಹಿತ್ಯ ಸಮನ್ವಯತೆಯನ್ನು ಕಾಯ್ದುಕೊಂಡು ಬೆಳೆದಿದೆ.

'ವಸಾಹತು ಶಿಕ್ಷಣ : ಕನ್ನಡ ಸಾಹಿತ್ಯದ ಪ್ರತಿಕ್ರಿಯೆ ಹಾಗೂ ನಿರ್ವಚನ' ಈ ವಿಷಯದ ಬಗ್ಗೆ ಹೊಸಗನ್ನಡ ಸಾಹಿತ್ಯದ ನವೋದಯ ಪೂರ್ವ, ನವೋದಯ, ನವ್ಯ ಸಾಹಿತ್ಯ ಪಂಥಗಳ ಆಯ್ದ ಕಾದಂಬರಿಗಳನ್ನು ಅಧ್ಯಯನ ನಡೆಸಲಾಗಿದೆ. ಭಿನ್ನ ಕಾಲಘಟ್ಟಗಳ ವಿಭಿನ್ನ ಧೋರಣೆಗಳ ಸಾಹಿತ್ಯ ಪಂಥಗಳು ವಸಾಹತು ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆಗಳನ್ನು ನಿರ್ವಚಿಸುವ ಪ್ರಯತ್ನ ಪ್ರಸ್ತುತ ಅಧ್ಯಯನದಲ್ಲಿ ನಡೆದಿದೆ.

ಕನ್ನಡ ಸಾಹಿತ್ಯವು ವಸಾಹತುಶಾಹಿ ನಿಲುವುಗಳನ್ನು ಶತ್ರುವೆಂಬಂತೆ ನೋಡಲಿಲ್ಲ. ಪಾಶ್ಚಾತ್ಯ ಆಧುನಿಕತೆಯ ಪರಿಕರಗಳು ಮತ್ತು ಚಿಂತನಾಕ್ರಮ ಭಾರತ ಪ್ರವೇಶಿಸಿತು. ಆಗ ಸ್ಥಳೀಯರಿಗೆ ಅದರ ವಿರುದ್ಧವಾಗಿ ತಮ್ಮ ಸಂಸ್ಕೃತಿ ಮತ್ತು ಧಾರ್ಮಿಕ ನಂಬಿಕೆಗಳನ್ನು ಉಳಿಸಿಕೊಳ್ಳುವ ಅನಿವಾರ್ಯತೆ ಸೃಷ್ಟಿಯಾಯಿತು. ಭಾರತೀಯ ಸನಾತನ ಧರ್ಮದ ಕಂದಾಚಾರಗಳನ್ನು ಮುಂದುಮಾಡಿ ಕ್ರೈಸ್ತಪಾದ್ರಿಗಳು ಮತಾಂತರದಲ್ಲಿ ತೊಡಗಿದರು. ಅದೇ ಕಾಲಕ್ಕೆ ಭಾರತೀಯ ಸುಧಾರಕರು ಹಿಂದೂ ಧರ್ಮದ ಪುನರುಜ್ಜೀವನದ ಕಾರ್ಯದಲ್ಲಿ ತೊಡಗಿದರು.

ಪ್ರಸ್ತುತ ಅಧ್ಯಯನಕ್ಕೆ ಪೂರ್ವ ಪೀಠಿಕೆಯಂತೆ ರಾಷ್ಟ್ರೀಯ ಚಿಂತಕರ ಶಿಕ್ಷಣ ಕುರಿತ ಚಿಂತನೆಗಳ ಅಧ್ಯಯನ ನಡೆಸಲಾಗಿದೆ. ರಾಜರಾಮ್ ಮೋಹನ್‌ರಾಯ್, ರವೀಂದ್ರನಾಥ ಠಾಕೂರ್, ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧಿ, ಶ್ರೀ ಅರವಿಂದರು ಹಾಗೂ ರಾಮ ಮನೋಹರ ಲೋಹಿಯಾ – ಈ ನಾಯಕರು 'ಭಾರತದ' ನಿರ್ಮಾಣಕ್ಕೆ ಶ್ರಮಿಸಿದ ಮುತ್ಸದ್ಧಿಗಳು. ಸಾಮಾಜಿಕ ಮತ್ತು ಧಾರ್ಮಿಕ ಸುಧಾರಕರಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ, ರಾಜಕೀಯ ಚಿಂತಕರಾಗಿ ತಮ್ಮ ತಮ್ಮ ಕ್ಷೇತ್ರಗಳಲ್ಲಿ ದುಡಿದು ತಮ್ಮ ಜ್ಞಾನದ ದೆಸೆಯಿಂದ ಭಾರತದ ಬೌದ್ಧಿಕ ಪರಂಪರೆಯನ್ನು ಬೆಳೆಸಿದವರು.

ಈ ಎಲ್ಲಾ ಚಿಂತಕರು ಮೂಲತಃ ಬರಹಗಾರರು, ತಮ್ಮ ಬರಹಗಳಿಂದ ಭಾಷಣಗಳಿಂದ ಭಾರತೀಯರನ್ನು ಭಾರತೀಯ ಸಾಹಿತ್ಯವನ್ನು ಪ್ರಭಾವಿಸಿದ್ದಾರೆ. ಈ ನಾಯಕರ ಚಿಂತನೆಗಳಲ್ಲಿ ವಸಾಹತು ಶಿಕ್ಷಣವನ್ನು ಕುರಿತ ಅವರ ಅಭಿಪ್ರಾಯಗಳನ್ನು ಮಾತ್ರ ಇಲ್ಲಿ ಪರಾಮರ್ಶಿಸಲಾಗಿದೆ

ಸಮಾಜ ಸುಧಾರಕರಾದ ರಾಜರಾಮ್ ಮೋಹನ್ ರಾಯ್ ಅವರು ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಜಾರಿಗೊಳ್ಳಬೇಕೆಂದು ಒತ್ತಾಯಿಸಿದರು. ಅವರು ಭಾರತೀಯ ಸಾಂಪ್ರದಾಯಿಕ ವಿದ್ಯಾಭ್ಯಾಸದಿಂದ ಯಾವ ಪ್ರಯೋಜನವೂ ಇಲ್ಲ ಎನ್ನುವುದನ್ನು ಪ್ರತಿಪಾದಿಸಿದರು. ಅದಕ್ಕಾಗಿ ಯುರೋಪಿನ ಜ್ಞಾನ ಪರಂಪರೆ ಭಾರತೀಯರಿಗೆ ದೊರಕಬೇಕೆಂಬ ಒತ್ತಾಸೆಯಿಂದ ಇಂಗ್ಲಿಷ್ ಶಿಕ್ಷಣದ ಜಾರಿಗೆ ಬೆಂಬಲಿಸಿದರು.

ದೇಶಿಯ ನಾಯಕರ ಒತ್ತಡ, ಬ್ರಿಟಿಷ್ ಸರ್ಕಾರದ ಒತ್ತಾಸೆ ಇವುಗಳಿಂದ ಇಂಗ್ಲಿಷ್ ಶಿಕ್ಷಣ ಜಾರಿಗೊಂಡಿತು. ಇದು ಭಾರತೀಯರ ಬದುಕಿಗೆ ಹೊಸ ಬೆಳಕನ್ನು ನೀಡಿತು. ಇಲ್ಲಿದ್ದ ತರತಮಗಳಿಂದ ಕೂಡಿದ್ದ ಶಿಕ್ಷಣ ಪದ್ಧತಿಗಳಿಗೆ ಪ್ರತಿರೋಧ ಉಂಟಾಯಿತು. ಸಮಾಜದ ಎಲ್ಲ ವರ್ಗದ ಜನರಿಗೆ ಕಲಿಯುವ ಅವಕಾಶಗಳು ದೊರೆತವು.

'ಮತಾಂತರ'ದ ಉದ್ದೇಶಕ್ಕಾಗಿ ಶಾಲೆ ಮತ್ತು ಅಸ್ಪತ್ರೆಗಳನ್ನು ಕ್ರೈಸ್ತ ಮಿಶನರಿಗಳು ತೆರೆದವು. ದೇಶಿಯ ಜನ ಮತಾಂತರದ ಬಗ್ಗೆ ಉತ್ಸಾಹ ತೋರದಿದ್ದರೂ ಶಾಲೆ, ಆಸ್ಪತ್ರೆಗಳನ್ನು ತಮ್ಮ ಉಪಯೋಗಕ್ಕೆ ಬಳಸಿಕೊಂಡರು. ಹೀಗೆ ಭಾರತೀಯರು ವಸಾಹತುಶಾಹಿಗೆ ಆತಂಕಗೊಳ್ಳದೆ ಅದರಲ್ಲಿರುವ ಸ್ವೀಕರಿಸುವ ಹಾಗೂ ನಿರಾಕರಿಸುವ ವಿಷಯಗಳ ಬಗ್ಗೆ ಅರಿವು ಪಡೆದಿದ್ದರು.

ಇಂಗ್ಲಿಷ್ ಶಿಕ್ಷಣ ಭಾರತದ ಪ್ರಗತಿಶೀಲತೆಗೆ ಪ್ರೇರಣೆಯಾಗುತ್ತದೆ ಎಂದು ನಂಬಲಾಗಿತ್ತು. ಆದರೆ ಅರ್ಧ ಶತಮಾನಗಳ ತರುವಾಯ ಅದರ ಲೋಪ ದೋಷಗಳು, ಭಾರತೀಯ ಪರಿಸರಕ್ಕೆ ಹೊಂದಿಕೆಯಾಗದ ಅದರ ನೀತಿಗಳು ಬಹಿರಂಗವಾದವು. 'ಶಿಕ್ಷಣ' ಮಾನವನ ಸರ್ವಾಂಗೀಣ ಬೆಳವಣಿಗೆಗೆ ಪೂರಕ ಎಂದುಕೊಳ್ಳಲಾಗಿತ್ತು. ಹೊಸ ಶಿಕ್ಷಣ ಕೇವಲ ನೌಕರಿಗೆ ತಯಾರು ಮಾಡುವ ಕಾರ್ಖಾನೆಯಂತೆ ಗುರುತಿಸಿಕೊಂಡಿತು. ಅನಂತರದಲ್ಲಿ ಕಲಿತವರು – ಕಲಿಯದವರು ಎನ್ನುವ ಹೊಸ ಶ್ರೇಣಿ ವ್ಯವಸ್ಥೆ ರೂಪುಗೊಂಡಿತು. ಇಂತಹ ಸಂದರ್ಭದಲ್ಲಿ ಭಾರತೀಯ ಸುಧಾರಕರು ಇಂಗ್ಲಿಷ್ ಶಿಕ್ಷಣದ ಲೋಪಗಳನ್ನು ವಿವರಿಸಿದರು. ಅದರ ಬದಲಾಗಿ ಮಗುವಿಗೆ ಕಲಿಸಬೇಕಾದ ಶಿಕ್ಷಣ ಪದ್ಧತಿಯ ಬಗ್ಗೆ ವಿಚಾರಗಳನ್ನು ಮಂಡಿಸಿದರು.

ರವೀಂದ್ರನಾಥ ಠಾಕೂರರಿಂದ ಆರಂಭಗೊಂಡ ವಸಾಹತು ಶಿಕ್ಷಣದ ವಿಮರ್ಶೆ ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧಿ, ಶ್ರೀ ಅರವಿಂದರು, ರಾಮಮನೋಹರ ಲೋಹಿಯಾ – ಈ ಚಿಂತಕರ ವಿಶ್ಲೇಷಣೆಯಲ್ಲಿ ಮುಂದುವರಿದಿದೆ. ಭಾರತೀಯ ಸಂದರ್ಭಕ್ಕೆ ಇಂಗ್ಲಿಷ್ ಶಿಕ್ಷಣ ಕ್ರಮ ಹೊಂದಿಕೆಯಾಗದ ಶಿಕ್ಷಣ ಪದ್ಧತಿಯಾಗಿದೆ. ಅದು ಭಾರತೀಯರ ಜ್ಞಾನವೃದ್ಧಿಗೆ, ಬೌದ್ಧಿಕ ವಿಕಸನಕ್ಕೆ ನೆರವಾಗುವುದಿಲ್ಲ. ಅದು ನೌಕರಿ ಪಡೆಯುವುದನ್ನು ಮುಖ್ಯ ಉದ್ದೇಶವನ್ನಾಗಿಸಿಕೊಂಡಿರುವ ಶಿಕ್ಷಣ ಕ್ರಮ. ಆದ್ದರಿಂದ ಭಾರತೀಯತೆಯನ್ನು ಒಳಗೊಂಡ ಶಿಕ್ಷಣ ಕ್ರಮವನ್ನು ರೂಪಿಸಬೇಕೆಂಬುದು ಇವರೆಲ್ಲರ ಪ್ರತಿಪಾದನೆಯಾಗಿದೆ.

ರವೀಂದ್ರನಾಥ ಠಾಕೂರರು 'ವ್ಯಕ್ತಿ ಪಡೆದ ಶಿಕ್ಷಣವು ಅವನ ಮುಂದಿನ ಬದುಕಿಗೆ ಉಪಯೋಗಕ್ಕೆ ಬರಬೇಕು. ಆದರೆ ಹೊಸ ಶಿಕ್ಷಣವು ಮಗುವನ್ನು ಅದರ ನೈಜ ಕಲಿಕೆಯಿಂದಲೆ ದೂರವಾಗಿಸುತ್ತದೆ' ಎಂಬುದನ್ನು ಪ್ರತಿಪಾದಿಸುತ್ತಾರೆ. 'ಇಂಗ್ಲಿಷ್ ಭಾಷೆ ಕೆಲಸದ ಭಾಷೆಯಷ್ಟೆ; ಭಾವದ ಭಾಷೆಯಲ್ಲ' ಎಂಬುದನ್ನು ಅವರ ಸಾಹಿತ್ಯ ಕೃತಿಗಳ ಮುಖೇನ ವ್ಯಕ್ತಪಡಿಸಿದ್ದಾರೆ. ತಮ್ಮ ಚಿಂತನೆಗಳ ಪ್ರಯೋಗಕ್ಕಾಗಿ 'ಶಾಂತಿನಿಕೇತನವನ್ನು' ಆರಂಭಿಸುತ್ತಾರೆ. ಮಗುವನ್ನು ನಾಲ್ಕು ಗೋಡೆಗಳ ನಡುವೆ ಬಂಧಿಸಿ ಕಲಿಸುವ ಕ್ರಿಯೆಯನ್ನು ವಿರೋಧಿಸಿ ಮಗು ಪರಿಸರದೊಂದಿಗೆ ಬೆರೆತು ಕಲಿಯಬೇಕೆಂದು ಪ್ರತಿಪಾದಿಸಿದ್ದಾರೆ. ಶಿಕ್ಷಣದಲ್ಲಿ ಮಾತೃಭಾಷೆಗೆ ಪ್ರಾಧಾನ್ಯತೆ ದೊರೆಯಬೇಕು ಎಂದಿದ್ದಾರೆ.

ಸ್ವಾಮಿ ವಿವೇಕಾನಂದರು 'ವಿಷಯ ಸಂಗ್ರಹಣೆಯೇ' ಶಿಕ್ಷಣವಲ್ಲ ಹಾಗಾಗಿದ್ದರೆ ಪುಸ್ತಕ ಭಂಡಾರಗಳೇ ಮಹಾಮುನಿಗಳಾಗಿರುತ್ತಿದ್ದವು ಎಂದು ಮಾರ್ಮಿಕವಾಗಿ ನುಡಿದಿದ್ದಾರೆ. ಅವರು ಶೀಲವನ್ನು ರೂಪಿಸುವ, ಮಾನಸಿಕ ಶಕ್ತಿಯನ್ನು ವೃದ್ಧಿಗೊಳಿಸುವ ಮತ್ತು ಬುದ್ಧಿಯನ್ನು ವಿಕಾಸಗೊಳಿಸುವ ಶಿಕ್ಷಣಬೇಕೆಂದು ಆಶಿಸಿದ್ದಾರೆ. 'ವಿದ್ಯೆ' ಮತ್ತು 'ಶಿಕ್ಷಣ' ಇವೆರಡು ಬೇರೆ ಬೇರೆ ಎನ್ನುವ ಸ್ವಾಮಿ ವಿವೇಕಾನಂದರು 'ಪುರುಷಸಿಂಹರನ್ನಾಗಿ ಮಾಡುವ' ಶಿಕ್ಷಣ ಪದ್ಧತಿ ಬೇಕು. ವ್ಯಕ್ತಿಯ ಸಾಧನೆಗಿಂತ ದೇಶಕ್ಕೆ ಒಳಿತಾಗುವ ಶಿಕ್ಷಣ ವ್ಯವಸ್ಥೆ ಇರಬೇಕೆಂದು ಹೇಳಿದ್ದಾರೆ.

ಮಹಾತ್ಮಗಾಂಧಿಯವರು 'ವಸಾಹತು ಶಿಕ್ಷಣ'ವು ಭಾರತೀಯ ಪರಂಪರೆಯೊಂದಿಗಿನ ಸಂಪರ್ಕವನ್ನು ಕಡಿದುಹಾಕಿದೆ ಎಂದಿದ್ದಾರೆ. ಅದರಿಂದ ಪಾರಾಗಲು ಹೊಸ ಶಿಕ್ಷಣ ಪದ್ಧತಿಯ ಅವಶ್ಯಕಯಿದೆ ಎಂದಿರುವ ಅವರು 'ಮೂಲ ಶಿಕ್ಷಣದ' ಪರಿಕಲ್ಪನೆಯನ್ನು ರೂಪಿಸಿದ್ದಾರೆ. ಈ ಶಿಕ್ಷಣ ವ್ಯವಸ್ಥೆಯಲ್ಲಿ ಮಗುವಿನ ದೇಹ, ಮನಸ್ಸು ಮತ್ತು ಆತ್ಮಗಳ ಉತ್ತಮ ಶಕ್ತಿಗಳು ವಿಕಾಸಗೊಳ್ಳುತ್ತವೆ ಅಲ್ಲದೆ ಮಗುವು ಕಲಿಕೆಯ ಕಾಲದಲ್ಲೆ ಸ್ವಾವಲಂಬನೆ ಪಡೆಯುತ್ತದೆ ಎಂಬುದನ್ನು ಗಾಂಧೀ ಚಿಂತನೆ ನಮ್ಮ ಮುಂದಿಡುತ್ತದೆ.

ಇಂಗ್ಲಿಷ್ ಶಿಕ್ಷಣವು ಮಕ್ಕಳ ಶರೀರ, ಮನಸ್ಸು ಮತ್ತು ಗುಣಶೀಲಗಳ ಮೇಲೆ ದುಷ್ಪರಿಣಾಮಗಳನ್ನು ಉಂಟುಮಾಡುತ್ತದೆ. ಆದ್ದರಿಂದ ಆಧುನಿಕತೆಗೆ ತಕ್ಕಂತೆ ಜ್ಞಾನಕ್ಕೆ ಬೇಕಾದ ಸಲಕರಣೆಗಳನ್ನು ಸಜ್ಜುಗೊಳಿಸಿ ಪರಿಣಾಮಕಾರಿಯಾದ ಶಿಕ್ಷಣ ನೀಡಬೇಕು ಎಂದಿದ್ದಾರೆ ಶ್ರೀ ಅರವಿಂದರು.

ಒಟ್ಟಾರೆ ಮಾನವನ ಶ್ರೇಯೋಭಿವೃದ್ಧಿ ಶ್ರೀ ಅರವಿಂದರ ಚಿಂತನೆಗಳ ಕೇಂದ್ರ. ವಿದ್ಯಾರ್ಥಿಗಳಿಗೆ ಮಾತೃಭಾಷೆಯಲ್ಲಿ ಶಿಕ್ಷಣ ನೀಡಬೇಕು ಎಂದಿದ್ದಾರೆ. ಉದಾತ್ತ ಚಿಂತನೆಗಳನ್ನು ಕಲಿಸಿಕೊಡುವ ನೈತಿಕ ಶಿಕ್ಷಣದ ಅಗತ್ಯವನ್ನು ಒತ್ತಿ ಹೇಳಿದ್ದಾರೆ.

ಸ್ವಾತಂತ್ರ್ಯ ಭಾರತದಲ್ಲಿ ಇಂಗ್ಲಿಷ್ ಭಾಷೆಯಿಂದ ಭಾರತೀಯ ಭಾಷೆಗಳ ಹಾಗೂ ಶಿಕ್ಷಣದ ಮೇಲೆ ಉಂಟಾದ ಪರಿಣಾಮಗಳ ಬಗ್ಗೆ ಕಟು ವಿಮರ್ಶೆ ಮಾಡಿದವರು ರಾಮ

ಮನೋಹರ ಲೋಹಿಯಾ. ಅವರು 'ಇಂಗ್ಲಿಷ್ ತೊಲಗಿಸಿ' ಚಳವಳಿಯನ್ನು ರೂಪಿಸಿದವರು. ಭಾರತದಲ್ಲಿ ಇಂಗ್ಲಿಷ್ ಯಜಮಾನಿಕೆಯ ಭಾಷೆಯಾಗಿದೆ ಅಲ್ಲದೆ ಬಡವ – ಶ್ರೀಮಂತ, ತಾರತಮ್ಯ ಮತ್ತು ಜಾತಿ ವ್ಯವಸ್ಥೆ ಬಲಗೊಳ್ಳಲು ಇಂಗ್ಲಿಷ್ ಕಾರಣವಾಗುತ್ತದೆ ಎಂಬುದನ್ನು ವಿವರಿಸಿದರು.

ಈ ರೀತಿಯಲ್ಲಿ ವಸಾಹತು ಶಿಕ್ಷಣದ ದೋಷಗಳನ್ನು ಹಲವು ನಾಯಕರು ವಿವರಿಸಿದ್ದಾರೆ. ಅದಕ್ಕೆ ಬದಲಾಗಿ ತಮ್ಮದೇಯಾದ ಶಿಕ್ಷಣ ಚಿಂತನೆಗಳನ್ನು ನಿರೂಪಿಸಿದ್ದಾರೆ. ಬದಲಾದ ಕಾಲದಲ್ಲಿ ಶಿಕ್ಷಣದೊಂದಿಗೆ ನೌಕರಿಯನ್ನು ಸಮೀಕರಿಸುವುದರಿಂದ 'ವ್ಯಕ್ತಿತ್ವ ರೂಪಿಸುವ ಶಿಕ್ಷಣ' ಎಂಬುದು ಮನ್ನಣೆ ಗಳಿಸುತ್ತಿಲ್ಲ.

ಈ ಎಲ್ಲ ಚಿಂತಕರ ಚಿಂತನೆಗಳು ಕನ್ನಡದ ಬರಹಗಾರರನ್ನು ಪ್ರಭಾವಿಸಿವೆ. ಕನ್ನಡದ ಬಹುತೇಕ ಬರಹಗಾರರು ಈ ರಾಷ್ಟ್ರೀಯ ಚಿಂತಕರು ಮಂಡಿಸಿದ ಜ್ಞಾನ ಪರಂಪರೆಯ ಪ್ರಭಾವಕ್ಕೆ ಒಳಗಾಗಿದ್ದಾರೆ.

ಪ್ರಸ್ತುತ ಅಧ್ಯಯನಕ್ಕೆ ಕನ್ನಡದ ಆರಂಭದ ಮೂರು ಕಾದಂಬರಿಗಳನ್ನು ಅಧ್ಯಯನ ನಡೆಸಲಾಯಿತು. ಈ ಅಧ್ಯಯನದಲ್ಲಿ ಇಂಗ್ಲಿಷ್ ಶಿಕ್ಷಣದ ಸ್ವೀಕಾರ ಮತ್ತು ನಿರಾಕರಣೆಯ ಜಿಜ್ಞಾಸೆ ನಡೆದಿದೆ. ಪಾಶ್ಚಾತ್ಯರ ಸಂಪರ್ಕದಿಂದ ಭಾರತೀಯ ಪರಿಸರಕ್ಕೆ ಒದಗಿ ಬಂದ ಹೊಸ ಹೊಸ ವಿಷಯಗಳನ್ನು ದೇಶಿಯ ಜನರಿಗೆ ತಿಳಿಸಬೇಕೆನ್ನುವ ಭಾವನೆ ಆರಂಭದ ಕಾದಂಬರಿಕಾರರದ್ದಾಗಿತ್ತು. ಈ ಆಲೋಚನೆಯನ್ನು ಆಧುನಿಕ ಕನ್ನಡದ ಮೂರು ಕಾದಂಬರಿಗಳು ಹೊಂದಿವೆ.

ಬಾಲ್ಯದಲ್ಲೇ ವಿಧವೆಯಾದ 'ಇಂದಿರಾಬಾಯಿ' ಹೊಸ ಶಿಕ್ಷಣ ಪಡೆದು ವಿದ್ಯಾವಂತನಾದ ಭಾಸ್ಕರರಾಯನನ್ನು ಮದುವೆಯಾಗುತ್ತಾಳೆ. ಮಡಿವಂತ ಸಮಾಜದಲ್ಲಿ ವಿಧವಾ ವಿವಾಹ ಹಾಗೂ ಸ್ತ್ರೀ ಶಿಕ್ಷಣದ ಇಂತಹ ಆಧುನಿಕ ವಿಚಾರಗಳನ್ನು ಮಂಡಿಸುವುದು ಸವಾಲಿನ ಕೆಲಸ. ಆರಂಭದ ಕನ್ನಡ ಕಾದಂಬರಿಗಳು ಈ ಸವಾಲನ್ನು ಎದುರಿಸಿವೆ. ಇದೇ ಕಾದಂಬರಿಯ ಅಂಬಾಬಾಯಿ ಮತ್ತು ಭೀಮರಾಯರು 'ಇಂಗ್ಲಿಷ್' ಜಾತಿ ಕೆಡಿಸುವುದಕ್ಕೆ ಬ್ರಿಟಿಷರು ರೂಪಿಸಿದ ತಂತ್ರವೆಂದು ವಾದಿಸುತ್ತಾರೆ. ಇಂಗ್ಲಿಷ್ ಕಲಿತವರು ಕುಲ ಭ್ರಷ್ಟರಾಗುತ್ತಾರೆ ಎನ್ನುವುದು ಆ ಕಾಲದ ಒಂದು ವರ್ಗದವರ ನಂಬಿಕೆಯಾಗಿತ್ತು. ಈ ಜಿಜ್ಞಾಸೆಯ ನಡುವೆಯೂ ಗುಲ್ವಾಡಿ ವೆಂಕಟರಾಯರು ಹೊಸ ಶಿಕ್ಷಣವನ್ನು ಸ್ವಾಗತಿಸುತ್ತಾರೆ. 'ಇಂದಿರಾ' ಕಾದಂಬರಿಯ ಇಂದಿರೆ, ರಮಾಕಾಂತ ದೇವಯಾನಿ – ಈ ಪಾತ್ರಗಳು ವಸಾಹತು ಶಿಕ್ಷಣದ ಪರವಾದವು. ಗುಲ್ವಾಡಿ ವೆಂಕಟರಾಯರು ಹಾಗೂ ಕೆರೂರು ವಾಸುದೇವಾಚಾರ್ಯರಿಗೆ 'ಇಂಗ್ಲಿಷ್ ಶಿಕ್ಷಣ' ಸ್ಥಳೀಯರ ಧಾರ್ಮಿಕ ಆಚರಣೆ ಹಾಗೂ ನಂಬಿಕೆಗಳನ್ನು ಮೈಲಿಗೆಗೊಳಿಸುತ್ತದೆ ಎನ್ನುವುದಕ್ಕಿಂತ ಅದರಿಂದ ದೊರೆಯುವ ಹೊಸ ಜ್ಞಾನದ ಬಗೆಗೆ ಒಲವಿದೆ. ಆದುದರಿಂದ ಈ ಮೂರು ಕಾದಂಬರಿಗಳು ಇಂಗ್ಲಿಷ್

ಶಿಕ್ಷಣದ ಸ್ವೀಕಾರ ಮತ್ತು ನಿರಾಕರಣೆಯ ಚರ್ಚೆಯನ್ನು ಮುಂದುಮಾಡುತ್ತವೆ. ಅಂತಿಮವಾಗಿ ಭಾರತೀಯ ಸಮಾಜಕ್ಕೆ ಹಾಗೂ ಸ್ತ್ರೀ ಸಮುದಾಯಕ್ಕೆ ಶಿಕ್ಷಣದ ಅವಶ್ಯಕತೆ ಇದೆ ಎಂಬುದನ್ನು ಪ್ರತಿಪಾದಿಸುತ್ತವೆ.

ಭಾರತದ ತರತಮಭೇದದ ಸಾಂಪ್ರದಾಯಿಕ ಶಿಕ್ಷಣದ ಎದುರಲ್ಲಿ ಬ್ರಿಟಿಷ್ ಶಿಕ್ಷಣ ಜಾರಿಗೊಂಡಿತ್ತು. ಈ ಬದಲಾವಣೆಯಿಂದ ರಾಜರಾಮ ಮೋಹನರಾಯರಂತಹ ಸುಧಾರಕರು ಸಂತೃಪ್ತಗೊಂಡಿದ್ದರು. ಇಂಗ್ಲಿಷ್ ಶಿಕ್ಷಣವು ಭಾರತೀಯ ಯುವಕರನ್ನು ಜ್ಞಾನವಂತರನ್ನಾಗಿಸುತ್ತದೆ ಎಂಬ ಹಂಬಲ ಹೊಂದಿದ್ದರು. ಹೀಗೆ ಹೊಸ ಶಿಕ್ಷಣ ಕ್ರಮ ಜಾರಿಗೊಂಡಾಗ ಭಾರತೀಯ ಪರಿಸರದಲ್ಲಿ ಉಂಟಾದ ಪಲ್ಲಟಗಳು 'ಮಲೆಗಳಲ್ಲಿ ಮದುಮಗಳು' ಕಥನದಲ್ಲಿ ಚಿತ್ರಿತಗೊಂಡಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಪ್ರಾದೇಶಿಕ ಕಥನವನ್ನು ಹೇಳುತ್ತಿದೆ. ಅದೇ ಕಾಲಕ್ಕೆ ಇದು ಭಾರತೀಯ ಕತೆಯಾಗಿಯೂ ಧ್ವನಿಸುತ್ತದೆ. ವಸಾಹತುಶಾಹಿ ನೀತಿಯಿಂದಾಗಿ ಹೋಟೆಲ್ಲು, ಕಾಫಿ, ಆಸ್ಪತ್ರೆ, ಬೈಸಿಕಲ್ಲು, ಇಸ್ಕೂಲು ಇವೆಲ್ಲ ಮಲೆನಾಡಿಗೆ ಕಾಲಿರಿಸಿದಾಗ ದೇಶಿ ಜನರಲ್ಲಿ ಕೌತುಕ ಮತ್ತು ಗಾಬರಿಗಳು ಉಂಟಾಗುತ್ತವೆ. ಒಟ್ಟು ಭಾರತೀಯ ಮನಸ್ಥಿತಿಯೇ ಹಾಗಿತ್ತು ಎಂಬುದನ್ನು ಈ ಕಾದಂಬರಿ ಸೂಚಿಸಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಆಧುನಿಕ ಶಿಕ್ಷಣದ ಆರಂಭದ ಹೆಜ್ಜೆಗಳಿವೆ. ಆದರೆ ಈ ಕಥನ ಕಟ್ಟುವ ಕಾದಂಬರಿಕಾರ ಆಧುನಿಕ ಶಿಕ್ಷಣ ಪದ್ಧತಿಗಳಿಂದ ಕಲಿತವನಾಗಿದ್ದಾನೆ. ಈ ಹಿನ್ನೆಲೆಯಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ಅದು ದೊರೆಯಬಹುದಾದ 'ಇಸ್ಕೂಲಿನ' ಆರಂಭಕ್ಕೆ ಮುಕುಂದಯ್ಯ ಪಾದ್ರಿಗಳಿಗೆ ನೆರವಾಗುವುದಾಗಿ ಹೇಳುತ್ತಾನೆ. ಇದೇ ಮುಕುಂದಯ್ಯ ಕ್ರೈಸ್ತ ಪಾದ್ರಿಗಳು ಮಲೆನಾಡಿನಲ್ಲಿ ಮತಾಂತರದ ಕೆಲಸದಲ್ಲಿ ತೊಡಗಿಕೊಂಡಿದ್ದನ್ನು ತೀವ್ರವಾಗಿ ವಿರೋಧಿಸುತ್ತಾನೆ. ಆದುದರಿಂದ ವಸಾಹತುಶಾಹಿ ಚಿಂತನೆಗಳಲ್ಲಿ ಯಾವುದನ್ನು ಮತ್ತು ಎಷ್ಟನ್ನು ಸ್ವೀಕರಿಸಬೇಕು ಎನ್ನುವ ಆಲೋಚನೆ ಕುವೆಂಪು ಅವರ ಚಿಂತನ ಕ್ರಮದಲ್ಲಿತ್ತು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮುಂದುವರಿದ ಕಥನ 'ಕಾನೂರು ಹೆಗ್ಗಡಿತಿ'. ಈ ಕಾದಂಬರಿಯ ಹೂವಯ್ಯ ಆಧುನಿಕ ಶಿಕ್ಷಣದ ಫಲಾನುಭವಿ. ಮೈಸೂರಿನಲ್ಲಿ ಕಾಲೇಜು ಕಲಿತು ಮರಳಿ ಊರಿಗೆ ಬಂದ ಹೂವಯ್ಯನ ನೋಟದ ಕ್ರಮವೇ ಬೇರೆಯದು. ಮರಳಿ ಊರಿಗೆ ಬಂದಾಗ ಎಲ್ಲವೂ ಮೊದಲಿನಂತೆ ಕಾಣಿಸುತ್ತದೆ. ಆದರೆ ಅವನು ಮಾತ್ರ ಮೊದಲಿನಂತಿರುವುದಿಲ್ಲ. ಈ ಬದಲಾವಣೆಗೆ ಕಾರಣವಾದುದು ಆಧುನಿಕ ಶಿಕ್ಷಣ. ಇಂಥ ಹೂವಯ್ಯ ಮತ್ತೆ ನಗರಕ್ಕೆ ಹೋಗದೇ ಕಾನೂರಿನಲ್ಲಿಯೇ ಉಳಿಯಬೇಕಾಗಿ ಬರುತ್ತದೆ. ಕಲಿತ ಹೂವಯ್ಯ 'ಪೌರುಷ, ಆಧ್ಯಾತ್ಮಿಕತೆ, ಅಂತರ್ಮುಖತೆ, ರಸಿಕತೆ, ಮೇಧಾಶಕ್ತಿಗಳಿಂದ ಭವ್ಯವ್ಯಕ್ತಿಯಾಗಿದ್ದನು. ಈ ಪಾತ್ರದ ನಿರೂಪಕನೂ

ಹೊಸಶಿಕ್ಷಣದ ಫಲಾನುಭವಿ. ಹೀಗೆ ರಾಜರಾಮ ಮೋಹನರಾಯರು ಬಯಸಿದ್ದ ವ್ಯಕ್ತಿತ್ವವಾಗಿ ಹೂವಯ್ಯ ಚಿತ್ರಿತಗೊಂಡಿದ್ದಾನೆ. ಹೂವಯ್ಯ ಕಾನೂರಿನ ಹಲವು ಬದಲಾವಣೆಗಳಿಗೆ ಕಾರಣನಾದ. ಈ ಎಲ್ಲ ಧನಾತ್ಮಕತೆಯನ್ನು ಇಂಗ್ಲಿಷ್ ಶಿಕ್ಷಣ ಕ್ರಮಕ್ಕೆ ಆರೋಪಿಸಿದರೆ ತಪ್ಪಾಗಲಾರದು. ಇದೇ ಸಂದರ್ಭದಲ್ಲಿ ಈ ಹೊಸ ಶಿಕ್ಷಣ ಪದ್ಧತಿಯ ವಿಫಲತೆಯ ರೂಪಕದಂತೆ ರಾಮಯ್ಯನ ಪಾತ್ರ ಚಿತ್ರಗೊಂಡಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಹೊಸ ಬದಲಾವಣೆಗೆ ಕಾರಣವಾಗುತ್ತದೆ ಎಂದು ನಂಬಲಾಗಿದ್ದ ಇಂಗ್ಲಿಷ್ ಶಿಕ್ಷಣ ಸ್ವಾತಂತ್ರ್ಯ ನಂತರದಲ್ಲಿ ವಿಫಲಗೊಂಡಿತು. ಈ ಎರಡು ಬಗೆಯ ಸಾಫಲ್ಯ ಮತ್ತು ವೈಫಲ್ಯಗಳನ್ನು ಕುವೆಂಪು ಕಾನೂರು ಹೆಗ್ಗಡಿತಿಯಲ್ಲಿ ಚಿತ್ರಿಸಿದ್ದಾರೆ. ಕುವೆಂಪು ಅವರ ಕಾವ್ಯವಂತೂ ಇಂಗ್ಲಿಷ್ ಶಿಕ್ಷಣದಿಂದ ಉಂಟಾಗುತ್ತಿರುವ ಹಾನಿಯ ಬಗೆಗೆ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದೆ. ಅವರ ವೈಚಾರಿಕ ಬರಹಗಳು ಆಧುನಿಕ ಶಿಕ್ಷಣದಿಂದ ಭಾರತೀಯ ದೇಶ ಭಾಷೆಗಳಿಗೆ ಒದಗುತ್ತಿರುವ ದುಃಸ್ಥಿತಿಯನ್ನು ನಿರೂಪಿಸಿದೆ. ಈ ರೀತಿಯಲ್ಲಿ ವಸಾಹತು ಶಿಕ್ಷಣ ಕುರಿತಂತೆ ಕುವೆಂಪು ಪ್ರಜ್ಞೆ, ಸಮಚಿತ್ತದ ಧೋರಣೆ ಹೊಂದಿರುವುದು ಮನನವಾಗುತ್ತದೆ.

ಶಿವರಾಮ ಕಾರಂತರು ರವೀಂದ್ರನಾಥ ಠಾಕೂರರ ಚಿಂತನೆಗಳಿಂದ ಪ್ರಭಾವಿತರಾದವರು. ಠಾಕೂರರಂತೆಯೇ ಕನ್ನಡದ ಸಂದರ್ಭದಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ಹಲವು ಪ್ರಯೋಗಗಳನ್ನು ಮಾಡಿದವರು. ಅವರ ಶೈಕ್ಷಣಿಕ ಚಿಂತನೆಗಳು ಮತ್ತು ಪ್ರಯೋಗಗಳು ವಸಾಹತು ಶಿಕ್ಷಣದ ವೈಫಲ್ಯವನ್ನು ಪ್ರಚುರಗೊಳಿಸಿವೆ. ತಾವು ಗುರುತಿಸಿದ ಈ ದೋಷಗಳಿಂದ ಉಂಟಾಗುತ್ತಿರುವ ಪರಿಣಾಮಗಳ ಬಗ್ಗೆಯೂ ಅವರು ಚಿಂತಿಸಿದ್ದಾರೆ. ಆ ಚಿಂತನೆಗಳು ಅವರ ಕಾದಂಬರಿಗಳ ಕೆಲವು ಪಾತ್ರಗಳಾಗಿ ಚಿತ್ರಣಗೊಂಡಿವೆ.

'ಸರಸಮ್ಮನ ಸಮಾಧಿ', 'ಮೂಕಜ್ಜಿಯ ಕನಸುಗಳು', 'ಮರಳಿ ಮಣ್ಣಿಗೆ', 'ಬೆಟ್ಟದ ಜೀವ' ಈ ಕಾದಂಬರಿಗಳು ಆಧುನಿಕ ಶಿಕ್ಷಣದಿಂದ ಉಂಟಾದ ಪ್ರತಿಕೂಲಗಳನ್ನು ಚಿತ್ರಿಸಿವೆ. ಸ್ವಾಮಿ ವಿವೇಕಾನಂದ, ಗಾಂಧೀಜಿ, ಅರವಿಂದರು ಗುರುತಿಸಿದ ಲೋಪಗಳು ಈ ಕಥನಗಳಲ್ಲಿ ಧ್ವನಿತಗೊಂಡಿವೆ.

'ಮರಳಿ ಮಣ್ಣಿಗೆ' ಕಾದಂಬರಿಯ ಲಕ್ಷ್ಮೀನಾರಾಯಣ ಇಂಗ್ಲಿಷ್ ಶಿಕ್ಷಣ ಪಡೆಯಲು ನಗರಕ್ಕೆ ಹೋದವನು ಅಲ್ಲಿ ಅನೇಕ ಚಟಗಳಿಗೆ ದಾಸನಾಗುತ್ತಾನೆ. ತನ್ನ ಆಸೆಗಳ ಈಡೇರಿಕೆಗಾಗಿ ತಂದೆಯು ಸಂಪಾದಿಸಿದ್ದ ಆಸ್ತಿಯನ್ನು ಕಳೆಯುತ್ತಾನೆ. ಅಲ್ಲದೇ ಹೆಂಡತಿ ಮಕ್ಕಳನ್ನು ನೋಡಿಕೊಳ್ಳದೆ ತನ್ನ ಬದುಕನ್ನು ನಾಶಮಾಡಿಕೊಳ್ಳುತ್ತಾನೆ. 'ಬೆಟ್ಟದ ಜೀವ' ಕಾದಂಬರಿಯ ಗೋಪಾಲಯ್ಯ ತನ್ನ ಮಗ 'ಶಂಭೂ'ವನ್ನು ಹೊಸ ಶಿಕ್ಷಣಕ್ಕಾಗಿ ನಗರಕ್ಕೆ ಕಳುಹಿಸುತ್ತಾನೆ. ಹಾಗೇ ನಗರಕ್ಕೆ ಹೋದ 'ಶಂಭೂ' ತನ್ನ ತಾಯಿ ತಂದೆಯಿಂದ ದೂರವೇ ಉಳಿದು ಮರಳಿ ಊರಿಗೆ ಬರುವುದಿಲ್ಲ. ಶಿಕ್ಷಣಕ್ಕಾಗಿ ಊರು ತೊರೆದ ಲಕ್ಷ್ಮೀನಾರಾಯಣ ಮತ್ತು 'ಶಂಭೂ' ಇವರಿಬ್ಬರು ಶಿಕ್ಷಣದ ವೈಫಲ್ಯಕ್ಕೆ ಉದಾಹರಣೆಯಾಗಿದ್ದಾರೆ

'ಸರಸಮ್ಮನ ಸಮಾಧಿ' ಕಾದಂಬರಿಯ ಅಣ್ಣಪ್ಪಕಮ್ತಿ ಹಾಗೂ ಆತನ ಹೆಂಡತಿ ಸುನಾಲಿನಿಯ ದಾಂಪತ್ಯದ ಬದುಕಿನ ವಿರಸಕ್ಕೆ ಸುನಾಲಿನಿ ಇಂಗ್ಲಿಷ್ ಕಲಿತದ್ದೇ ಕಾರಣ ಎಂದು ಬಿಂಬಿತಗೊಂಡಿದೆ. 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಸೀತೆ ತನ್ನ ಮೈದುನ ನಾರಾಯಣನಿಗೆ ಬಿ.ಎ. ಓದಿರುವ ಹುಡುಗಿಯನ್ನು ಮದುವೆ ಮಾಡಲು ಒಪ್ಪುವುದಿಲ್ಲ. ಹೆಣ್ಣುಮಕ್ಕಳು ಕಲಿಯುವುದು ಪರಂಪರಾಗತ ಸಂಪ್ರದಾಯದ ವಿರೋಧಿ ನಿಲುವು ಎನ್ನುವುದನ್ನು ಈ ಪಾತ್ರಗಳು ನಂಬಿವೆ. ಇಂಥಹದೊಂದು ಸಮಾಜಿಕ ನಂಬಿಕೆಯನ್ನು ಶಿವರಾಮ ಕಾರಂತರು ವಿಶ್ಲೇಷಣೆಗೆ ಒಳಗು ಮಾಡಿದ್ದಾರೆ. ಇವರ ಒಟ್ಟು ಚಿಂತನೆ ಇಂಗ್ಲಿಷ್ ಶಿಕ್ಷಣದ ಲೋಪಗಳನ್ನು ವಿವರಿಸುತ್ತದೆ. ಅಲ್ಲದೆ ಠಾಕೂರರ ಚಿಂತನೆಗೆ ಸಮೀಪವಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ವಸಾಹತು ಶಿಕ್ಷಣದಿಂದ ಒದಗಬಹುದಾದ ಜ್ಞಾನದ ಬಗೆಗೆ ಭಾರತೀಯರಿಗೆ ಬೆರಗಿತ್ತು. ಸ್ವಾತಂತ್ರ್ಯ ಅನಂತರದ ಭಾರತ ಎದುರಿಸುತ್ತಿರುವ ಅಸಂಖ್ಯ ಸಮಸ್ಯೆಗಳಿಗೆ ಆಧುನಿಕ ವಿದ್ಯಾಭ್ಯಾಸ ಪಡೆದವರಿಂದ ಪರಿಹಾರಗಳು ದೊರೆಯುತ್ತವೆ ಎಂದು ನಂಬಲಾಗಿತ್ತು. ಕಾಲಾಂತರದಲ್ಲಿ ಆ ನಂಬಿಕೆಗಳು ಸುಳ್ಳಾದವು. ಈ ಹಿನ್ನೆಲೆಯಲ್ಲಿ ನವ ಶಿಕ್ಷಿತರ ಬದುಕಿನ ತಾಕಲಾಟಗಳನ್ನು ಕನ್ನಡದ ನವ್ಯ ಕಾದಂಬರಿಗಳು ಚಿತ್ರಿಸಿವೆ.

'ಬಿರುಕು' ಕಾದಂಬರಿಯ 'ಬಸವರಾಜ' ಉನ್ನತ ಶಿಕ್ಷಣ ಪಡೆದವನಾದರೂ ತನ್ನ ಬದುಕನ್ನು ಉನ್ನತಗೊಳಿಸಿಕೊಳ್ಳಲಾರದೆ ಸೋಲುತ್ತಾನೆ. 'ಬಿರುಕು' ಎನ್ನುವ ಶೀರ್ಷಿಕೆ ಕಲಿತವರು ಮತ್ತು ಕಲಿಯದವರ ನಡುವಿನ ಬಿರುಕನ್ನು, ಇಂಗ್ಲಿಷ್ ಬರುವವರು ಮತ್ತು ಇಂಗ್ಲಿಷ್ ಬಾರದಿರುವವರ ನಡುವಿನ ಬಿರುಕನ್ನು, ಹಳ್ಳಿ ಮತ್ತು ನಗರಗಳ ನಡುವಿನ ಬಿರುಕನ್ನು ಸಂಕೇತಿಸುತ್ತದೆ. ಭಾರತೀಪುರದ 'ಜಗನ್ನಾಥ' ಭಾರತೀಪುರವನ್ನು ಅದರ ಮೌಢ್ಯದಿಂದ ಬಿಡುಗಡೆಗೊಳಿಸುತ್ತೇನೆ ಎಂದುಕೊಂಡವನು ವಿಫಲನಾಗುತ್ತಾನೆ. ಇವರಿಬ್ಬರ 'ಕಲಿಕೆ' ಯಾವ ಸಾರ್ಥಕತೆಯನ್ನು ಉಂಟು ಮಾಡುವುದಿಲ್ಲ.

ಇಂಥ ಸಂದರ್ಭದಲ್ಲಿ ಶಾಲೆಯ ಕಲಿಕೆ ಮತ್ತು ಪಾರಂಪರಿಕ ಜ್ಞಾನ ಇವುಗಳಲ್ಲಿ ಯಾವುದು ಶ್ರೇಷ್ಠ ಎನ್ನುವ ಪ್ರಶ್ನೆಯನ್ನು ಮುಂದು ಮಾಡುವ ಪೂರ್ಣಚಂದ್ರ ತೇಜಸ್ವಿಯವರು ಕರ್ವಾಲೋ ಹೊಂದಿರುವ ಜ್ಞಾನಕ್ಕೆ ಮಂದಣ್ಣನ ತಿಳಿವು ಸಮನಾದುದು ಎನ್ನುವುದನ್ನು ಪ್ರತಿಪಾದಿಸುತ್ತಾರೆ. ಆ ಮೂಲಕ ತೇಜಸ್ವಿ ತಾವು ಕಲಿತ ಶಿಕ್ಷಣವನ್ನೆ ಮರುಮೌಲ್ಯಮಾಪನಕ್ಕೆ ಒಳಪಡಿಸುತ್ತಾರೆ.

'ಕಾಡು' ಕಾದಂಬರಿಯ 'ಕಿಟ್ಟಿಗೆ' ಶಾಲೆ ಎಂದರೆ ಇಷ್ಟವಿಲ್ಲ. ಒಂದು ಕಾಲಕ್ಕೆ ಆಕರ್ಷಣೆಯ ಕೇಂದ್ರವಾದ ಶಾಲೆ ಅನಂತರ ಬಂಧನದಂತೆ ಗೋಚರಿಸುತ್ತದೆ. 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯ ಶಿಕ್ಷಕ ಶಿವಣ್ಣ ಮುಗ್ಧ ಗೆಂಡೆತಿಮ್ಮನ ಬದುಕಿನ ನಾಶಕ್ಕೆ ಕಾರಣನಾಗುತ್ತಾನೆ. 'ಕರಮಾಯಿ'ಯ 'ಗುಡಸೀಕರ' ಓದಿಕೊಂಡವನು ತನ್ನ

ಊರಿಗೆ ವಿದೇಶಿ ಮದ್ಯ ಬರಲು, ಚುನಾವಣೆ ನಡೆಯಲು ಕಾರಣನಾಗಿ ಊರು ಹಾಳಾಗಲು ಕಾರಣನಾಗುತ್ತಾನೆ. ಹೀಗೆ ನವ್ಯದ ಪ್ರಮುಖ ಕಾದಂಬರಿಕಾರರು ಆಧುನಿಕ ಶಿಕ್ಷಣದ ವಿಫಲತೆಯನ್ನು ಅವರ ಕಾದಂಬರಿಗಳಲ್ಲಿ ನಿರ್ವಚಿಸಿದ್ದಾರೆ.

ಈ ಒಟ್ಟು ಅಧ್ಯಯನ ಇಂಗ್ಲಿಷ್ ಶಿಕ್ಷಣದ ಸಾಪಲ್ಯತೆ, ವಿಫಲತೆ – ಇವುಗಳ ನಡುವೆ ಭಾರತೀಯರಿಗೆ ಅಗತ್ಯವಾಗಿ ಬೇಕಾದ ಶಿಕ್ಷಣವನ್ನು ಚರ್ಚಿಸಿದೆ. ಈ ಎಲ್ಲಾ ಪ್ರಶ್ನೆಗಳಿಗೆ ನಿರ್ಧಿಷ್ಟವಾದ ಒಂದು ಉತ್ತರವಿಲ್ಲ. ಆದರೆ 'ಶಿಕ್ಷಣ'ದ ಬಗ್ಗೆ ಭಾರತೀಯ ಚಿಂತಕರ ಹಾಗೂ ಬರಹಗಾರರ ಆಲೋಚನೆಗಳು ಉದಾತ್ತ ಭಾವವನ್ನು ಹೊಂದಿವೆ. ಮಾನವನ ಒಟ್ಟು ವ್ಯಕ್ತಿತ್ವದ ವಿಕಸನಕ್ಕೆ ಶಿಕ್ಷಣ ನೆರವಾಗಬೇಕೆಂದು ಬಯಸುತ್ತಾರೆ.

**ಫಲಿತಗಳು**

ಈವರೆಗೆ ವಸಾಹತು ಶಿಕ್ಷಣವನ್ನು ಕುರಿತ ಪ್ರತಿಕ್ರಿಯೆಗಳನ್ನು ನವೋದಯಪೂರ್ವ, ನವೋದಯ ಹಾಗೂ ನವ್ಯ ಸಾಹಿತ್ಯ ಪಂಥಗಳ ಆಯ್ದ ಕಾದಂಬರಿಗಳ ಮೂಲಕ ಚರ್ಚಿಸಲಾಯಿತು. ಕೆಲವು ಮಿತಿಗಳನ್ನು ಮೀರಿಯೂ ಪ್ರಸ್ತುತ ಅಧ್ಯಯನ ಹೆಚ್ಚು ವಿಶ್ಲೇಷಣಾತ್ಮಕವಾಗಿ ನಡೆದಿದೆ ಎಂದು ಭಾವಿಸಲಾಗಿದೆ. ಕನ್ನಡ ಕಾದಂಬರಿಗಳಲ್ಲಿ ನಿರೂಪಿತಗೊಂಡಿರುವ ಅನುಭವಗಳು ಸಮಕಾಲೀನ ಸಮಾಜದ ಅನುಭವ ಎಂದು ಹೇಳುವುದು ಸಮರ್ಥನೀಯವಲ್ಲ. ಆದರೂ ಒಂದು ಸಮುದಾಯದ ಚಿಂತನಾ ಕ್ರಮ ಕಾದಂಬರಿಗಳ ಕಥನದ ಮೇಲೆ ಪ್ರಭಾವ ಬೀರಿವೆ ಎಂಬುದಂತು ಸ್ಪಷ್ಟ.

ಕಳೆದು ಹೋದ ಕಾಲದ ಸಮುದಾಯದ ಬದುಕು ಎದುರಿಸಿದ ಸಂಭ್ರಮ ಮತ್ತು ಸಂಕಷ್ಟಗಳು ವರ್ತಮಾನದ ಬದುಕನ್ನು ಪ್ರಭಾವಿಸುತ್ತವೆ. ವರ್ತಮಾನದ ಆಲೋಚನ ಕ್ರಮವು ಭವಿಷ್ಯದ ಬದುಕಿನ ರೂಪುರೇಷೆಯಾಗಿರುತ್ತದೆ. ಈ ವಿಚಾರಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ನಡೆಸಲಾಗಿದೆ.

ಆಧುನಿಕ ಬದುಕಿನಲ್ಲಿ 'ಶಿಕ್ಷಣ' ಮಹತ್ವದ ಸ್ಥಾನ ಪಡೆದುಕೊಂಡಿದೆ. ಶಿಕ್ಷಣ ಕ್ರಮ, ಶಿಕ್ಷಣ ಪದ್ಧತಿ ಈ ವಿಚಾರಗಳ ಬಗೆಗಿನ ಜಿಜ್ಞಾಸೆ ನಿರಂತರವಾಗಿ ನಡೆಯುತ್ತಲೇ ಬಂದಿದೆ, ಶಿಕ್ಷಣದಲ್ಲಿ ಭಾಷಾ ಮಾಧ್ಯಮದ ಚರ್ಚೆ ಶತಮಾನದಿಂದಲೂ ನಡೆಯುತ್ತಿದೆ. 'ಜ್ಞಾನ'ದ ಅರ್ಥ ಸ್ವರೂಪಗಳೇ ಇಂದು ಬದಲಾಗುತ್ತಿದೆ. ಈ ವಿಚಾರಗಳ ಹಿನ್ನೆಲೆಯಲ್ಲಿ ಕನ್ನಡದ ಬಹಗಾರರು ಶಿಕ್ಷಣದ ವಿಚಾರವಾಗಿ ನಡೆಸಿರುವ ಚಿಂತನಕ್ರಮವನ್ನು ಅರ್ಥೈಸುವ ದಿಸೆಯಲ್ಲಿ ಈ ಅಧ್ಯಯನ ನಡೆದಿದೆ. ಸೀಮಿತ ವ್ಯಾಪ್ತಿಯಲ್ಲಿ ನಡೆಸಿದ ಪ್ರಸ್ತುತ ಅಧ್ಯಯನದ ಫಲಿತಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

ಭಾರತದಲ್ಲಿ 'ಗುಮಾಸ್ತರನ್ನು ಸೃಷ್ಟಿಸಲು' ಇಂಗ್ಲಿಷ್ ಶಿಕ್ಷಣ ಜಾರಿಗೊಂಡಿತು ಎನ್ನುವ ಸಾರ್ವತ್ರಿಕ ನಂಬಿಕೆಯೊಂದಿದೆ. ಆದರೆ ಈ ಕಾರಣದ ಜೊತೆಗೆ ಇಂಗ್ಲಿಷ್ ಶಿಕ್ಷಣ

ಜಾರಿಗೊಳ್ಳಲು ಭಾರತೀಯ ಒತ್ತಾಸೆಗಳು ಕಾರಣವಾಗಿದ್ದವು. ಸ್ಥಳೀಯ ನಾಯಕರು ಭಾರತದಲ್ಲಿ ಯೂರೋಪಿಯನ್ ಮಾದರಿಯ ಶಿಕ್ಷಣದ ಜಾರಿಗಾಗಿ ಒತ್ತಾಯಿಸಿದರು.

ಈ ಅಧ್ಯಯನದಲ್ಲಿ ಶೋಧಿಸಿರುವಂತೆ ಹಲವು ಕಾರಣಗಳಿಂದ ಭಾರತದಲ್ಲಿ ಜಾರಿಗೊಂಡ 'ವಸಾಹತು ಶಿಕ್ಷಣ' ಭಾರತೀಯ ಸಾಮಾಜಿಕ ಮತ್ತು ಶೈಕ್ಷಣಿಕ ವಲಯಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳಿಗೆ ಕಾರಣವಾಯಿತು. ಭಾರತದ ಎಲ್ಲ ಜಾತಿ, ವರ್ಗಗಳ ಜನರಿಗೆ ಶಿಕ್ಷಣ ದೊರಕಲು ಈ ಶಿಕ್ಷಣ ಕ್ರಮ ಅವಕಾಶ ಕಲ್ಪಿಸಿತು.

ವಸಾಹತುಶಾಹಿ ಆಧುನಿಕತೆಯಿಂದಾದ ಹಲವು ವಿಷಯಗಳಲ್ಲಿ ಸ್ಥಳೀಯರು ಶಿಕ್ಷಣವನ್ನು ಬಹುಬೇಗ ತಮ್ಮದಾಗಿಸಿಕೊಂಡರು. ಮುಂದೆ ಬ್ರಿಟಿಷರ ಬಂಧನದಿಂದ ಮುಕ್ತರಾಗಲೂ ಈ ಶಿಕ್ಷಣ ಕ್ರಮವೇ ಸಹಾಯಕವಾಯಿತು. ಭಾರತೀಯ ಕಲೆ, ಸಾಹಿತ್ಯ ಮೊದಲಾದ ವಿಷಯಗಳು ಜಾಗತಿಕ ಮನ್ನಣೆ ಪಡೆಯಲು ಈ ಶಿಕ್ಷಣ ಕ್ರಮ ಕಾರಣವಾಯಿತು.

ಆರಂಭದ ಕಾಲಘಟ್ಟದಲ್ಲಿ ಈ ಶಿಕ್ಷಣ ಪದ್ಧತಿಯನ್ನು ಅರೆ ಮನಸ್ಸಿನಿಂದಲೇ ಒಪ್ಪಿಕೊಳ್ಳಲಾಯಿತು. ಸಾಂಪ್ರದಾಯಿಕ ಮನಸ್ಸುಗಳಂತು 'ಇಂಗ್ಲಿಷ್ ಶಿಕ್ಷಣ'ವನ್ನು ಧರ್ಮಭ್ರಷ್ಟಗೊಳಿಸುವ ಸಂಚು ಎಂದು ಭಾವಿಸಿದ್ದರು. ಅಂತಹ ಸಂದರ್ಭಗಳಲ್ಲಿ ಕಾದಂಬರಿಕಾರರು ತಮ್ಮ ಕಥನಗಳ ಮೂಲಕ ಆಧುನಿಕ ಶಿಕ್ಷಣದಿಂದ ದೊರೆಯುವ ಜ್ಞಾನದ ಮಹತ್ತನ್ನು ವಿವರಿಸಿದರು. ದೇಶೀಯರು ಕ್ರೈಸ್ತಧರ್ಮವನ್ನು ನಿರಾಕರಿಸಿದರು. ಅದರ ಭಾಗವಾದ ಇಂಗ್ಲಿಷ್ ಶಿಕ್ಷಣವನ್ನು ಸ್ವೀಕರಿಸಿದರು.

ಭಾರತ ಸ್ವಾತಂತ್ರ್ಯಗೊಳ್ಳುವ ಕಾಲಕ್ಕೆ ಹೊಸ ಶಿಕ್ಷಣದ ಬಗೆಗಿನ ಆಕರ್ಷಣೆ ಕಡಿಮೆಯಾಯಿತು. ದೇಶಾದ್ಯಂತ ಅಕ್ಷರಸ್ಥ ನಿರುದ್ಯೋಗಿಗಳ ಸಂಖ್ಯೆ ಬೆಳೆಯಿತು. ಇಂಗ್ಲಿಷ್ ಶಿಕ್ಷಣದ ಮಿತಿಗಳನ್ನು ಕುರಿತ ಚರ್ಚೆಗಳು ಆರಂಭಗೊಂಡವು. ರಾಷ್ಟ್ರೀಯ ಚಿಂತಕರು ವಸಾಹತುಶಾಹಿ ಪ್ರಭಾವಗಳನ್ನು ನಿರಾಕರಿಸಿದಂತೆ 'ಇಂಗ್ಲಿಷ್ ಶಿಕ್ಷಣ' ಪದ್ಧತಿಯನ್ನು ಅದರ ಲೋಪಗಳೊಂದಿಗೆ ನಿರಾಕರಿಸುವ ಪ್ರಯತ್ನ ಮಾಡಿದರು. ಇದಕ್ಕೆ ಪರ್ಯಾಯವಾಗಿ ಒಂದೊಂದು ಬಗೆಯ ಶಿಕ್ಷಣ ಪದ್ಧತಿಗಳನ್ನು ಪರಿಚಯಿಸಿದರು. ಆದರೆ ಅವುಗಳಿಗೆ ಸಾರ್ವತ್ರಿಕ ಮನ್ನಣೆ ದೊರೆಯಲಿಲ್ಲ. ಭಾರತೀಯ ಚಿಂತಕರು 'ಶಿಕ್ಷಣ' ಮನುಷ್ಯನ ಬದುಕಿನ ಸಾರ್ಥಕತೆಗೆ ಸಾಧನವಾಗಬೇಕು ಎಂದರು.

ಅಕ್ಷರದಿಂದ ದೊರೆತ 'ಜ್ಞಾನ' ಮತ್ತು ಪರಂಪರಾಗತವಾಗಿ ಬೆಳೆದು ಬಂದ 'ತಿಳಿವಳಿಕೆಗಳ' ನಡುವಿನ ಜಿಜ್ಞಾಸೆಗಳು ಬೆಳೆದವು. ಅಕ್ಷರದಾಚೆಗೂ ನಿಸರ್ಗದಿಂದ ಹಾಗೂ ತನ್ನ ಹಿಂದಿನ ತಲೆಮಾರಿನಿಂದ ಬಂದ ಕಲೆ ಹಾಗೂ ಇತರ ತಿಳಿವಿಗೂ ಮನ್ನಣೆ ದೊರಯಬೇಕು ಎನ್ನುವ ಚಿಂತನೆಗಳು ಬೆಳೆದವು.

ಶಿಕ್ಷಣವನ್ನು 'ನೌಕರಿ ಗಳಿಕೆಯ' ಸೀಮಿತ ಉದ್ದೇಶಕ್ಕೆ ಬಳಸುವುದು ಸರಿಯಲ್ಲ. ಅದರಾಚೆಗೂ ಮನುಷ್ಯನು ತಾನು ಕಲಿತ ವಿದ್ಯೆಯಿಂದ ತನ್ನ ಬೌದ್ಧಿಕ ಮತ್ತು ಭೌತಿಕ

ಬದುಕನ್ನು ಸುಂದರಗೊಳಿಸಿಕೊಳ್ಳಬೇಕು. 'ಕಲಿಕೆ' ಎನ್ನುವುದು ನಿರಂತರವಾಗಿ ನಡೆಯುವ ಕ್ರಿಯೆ. ಭಾರತೀಯರ ದೃಷ್ಟಿಯಲ್ಲಿ 'ಶಿಕ್ಷಣದ' ಅರ್ಥ ಮಹತ್ತರವಾದುದು. ಶಿಕ್ಷಣ ಪಡೆದವರು ತಮ್ಮ ಜ್ಞಾನವನ್ನು ತನ್ನ ಸುತ್ತಣ ಪರಿಸರದ ಒಳಿತಗಾಗಿ ಬಳಸಬೇಕು ಎನ್ನುವುದು ಸಮಾಜದ ಬೇಡಿಕೆಯಾಗಿರುತ್ತದೆ.

**ಮುನ್ನೋಟ**

'ಶಿಕ್ಷಣ' ಇಂದು ಸೇವಾ ವಲಯವಾಗಿರದೆ ಉದ್ಯಮವಾಗಿ ಬೆಳೆದಿದೆ. ಅದು ಬೆಳೆದಷ್ಟು ಅದರ ಜಟಿಲತೆಗಳು ಬೆಳೆಯುತ್ತವೆ. ನೂರಾರು ವಿಶ್ವವಿದ್ಯಾನಿಲಯಗಳು 'ಯಾವುದು ಸರಿಯಾದ ಶಿಕ್ಷಣ? ಎನ್ನುವ ಪ್ರಶ್ನೆಗೆ ಉತ್ತರಗಳನ್ನು ಹುಡುಕುತ್ತಿವೆ. ಸಮಾಜದ ಎಲ್ಲ ಕ್ಷೇತ್ರದವರು ಶಿಕ್ಷಣದ ಬಗೆಗೆ ಚಿಂತನೆ ನಡೆಸುವವರೇ ಆಗಿದ್ದಾರೆ. ಸರ್ಕಾರಗಳು ಹತ್ತಾರು ಶಿಕ್ಷಣ ನೀತಿಗಳನ್ನು ಪ್ರಕಟಿಸುತ್ತಲೇ ಇವೆ.

ಕನ್ನಡದ ಹಲವು ಬರಹಗಾರರು ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಿದವರು. ಶಿಕ್ಷಣದ ಬಗ್ಗೆ ಕೃತಿಗಳ ಮೂಲಕ ತಮ್ಮ ನಿಲುವುಗಳನ್ನು ಪ್ರಕಟಿಸಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಕಾಲಮಿತಿಯಿಂದಾಗಿ ಆಯ್ದ ಕಾದಂಬರಿಗಳಲ್ಲಿನ ಶಿಕ್ಷಣ ಚಿಂತನೆಗಳನ್ನು ಅಧ್ಯಯನ ಮಾಡಲಾಗಿದೆ. ಅಂತೆಯೇ ಆಧುನಿಕ ಕನ್ನಡ ಸಾಹಿತ್ಯದ ನಾಟಕ, ಸಣ್ಣಕತೆ, ಕಾವ್ಯ ಈ ಮೊದಲಾದ ಪ್ರಕಾರಗಳಲ್ಲಿ ವ್ಯಕ್ತಗೊಂಡಿರುವ ಶೈಕ್ಷಣಿಕ ಚಿಂತನೆಗಳನ್ನು ಅಧ್ಯಯನ ಮಾಡುವ ಅವಕಾಶಗಳಿವೆ. ಆ ಮೂಲಕ ಕನ್ನಡ ಬರಹಗಾರರ ಶೈಕ್ಷಣಿಕ ಚಿಂತನೆಗಳನ್ನು ಅರಿಯಲು ಹಾಗೂ ಶಿಕ್ಷಣ ಕ್ರಮಗಳಲ್ಲಿ ಆ ಚಿಂತನೆಗಳನ್ನು ಅಳವಡಿಸುವ ಅವಕಾಶಗಳಿವೆ. ಆದುದರಿಂದ ಸಾಹಿತ್ಯ ಮತ್ತು ಶಿಕ್ಷಣದ ನಡುವಿನ ಸಂಶೋಧನೆಗೆ ಸಾಕಷ್ಟು ಅವಕಾಶಗಳಿವೆ.

## ಅನುಬಂಧಗಳು

೧. ಆಯ್ದ ನಾಟಕಗಳು : ಶಿಕ್ಷಣ ಚಿಂತನೆಗಳು

ಅ) ಹೆಬ್ಬೆರಳು, ಬೆರಳ್‌ಗೆ ಕೊರಳ್, ಏಕಲವ್ಯ ನಾಟಕಗಳು : ಸಾಂಪ್ರದಾಯಿಕ ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆ

ಆ) ಟೊಳ್ಳುಗಟ್ಟಿ ಮತ್ತು ಪಂಜರಶಾಲೆ ನಾಟಕಗಳು : ಆಧುನಿಕ ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆ

೨. ಮೆಕಾಲೆ ವರದಿ

೩. ಆಕರ ಗ್ರಂಥಗಳು

೪. ಪರಾಮರ್ಶನ ಗ್ರಂಥಗಳು

ಅನುಬಂಧ-೧

# ಆಯ್ದ ನಾಟಕಗಳು : ಶಿಕ್ಷಣ ಚಿಂತನೆಗಳು

**ಅ) ಹೆಬ್ಬೆರಳು, ಬೆರಳ್‌ಗೆ ಕೊರಳ್ ಮತ್ತು ಏಕಲವ್ಯ ನಾಟಕಗಳು : ಸಾಂಪ್ರದಾಯಿಕ ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆ**

ಪರಂಪರೆ ಮತ್ತು ವರ್ತಮಾನದ ಸಂಘರ್ಷ ನಿರಂತರವಾದುದು. ಭೂತಕಾಲವನ್ನು ನಿರಾಕರಿಸಿ ಬದುಕುವುದಕ್ಕೆ ಸಾಧ್ಯವಿಲ್ಲ. ಅಂತೆಯೇ ಅದನ್ನು ಮರುಪ್ರಶ್ನಿಸದೆ ಒಪ್ಪಿಕೊಳ್ಳುವುದು ಸಹ ಅಸಾಧ್ಯ. ಒಂದು ಕಾಲಕ್ಕೆ 'ಮೌಲ್ಯ' ಎನಿಸಿಕೊಂಡಿದ್ದ ಹಲವು ಸಂಗತಿಗಳು ಕಾಲ ಮುನ್ನಡೆದಂತೆ ಮನುಷ್ಯತ್ವದ ವಿರೋಧಿಯಂತಾಗಿ ಕಾಣಿಸಿಕೊಳ್ಳುವುವು. ಇಂತಹ ಸಂದರ್ಭಗಳು ಎದುರಾದಾಗಲೆಲ್ಲ ಪರಂಪರೆಯನ್ನು ಪರೀಕ್ಷೆಗೆ ಒಡ್ಡುವ ಕಾರ್ಯ ನಿರಂತರವಾಗಿ ನಡೆದುಕೊಂಡು ಬಂದಿದೆ. ಪರಂಪರೆಯಲ್ಲಿರುವ ಮನುಷ್ಯ ಪರ ಚಿಂತನೆಗಳನ್ನು ಪುನಃರೂಪಿಸಿ, ಜನ ವಿರೋಧಿ ನೀತಿಗಳನ್ನು ತಿರಸ್ಕರಿಸುವ ಕಾರ್ಯ ನಿರಂತರವಾಗಿ ನಡೆದಿದೆ.

ಪುರಾಣ ಕಥೆಗಳ ಆಶಯ ಮತ್ತು ಮೌಲ್ಯಗಳು ಕಾಲ ಬದಲಾದಂತೆಲ್ಲ ಹಲವು ಪ್ರಶ್ನೆಗಳಿಗೆ ಮುಖಾಮುಖಿಯಾಗಿವೆ. ಈ ರೀತಿಯ ಘರ್ಷಣೆ ಸಮುದಾಯದ ಜೀವಂತಿಕೆಯ ಪ್ರತೀಕ. ಕನ್ನಡ ಸಾಹಿತ್ಯ ಈ ಬಗೆಯ ಪ್ರಶ್ನೆಗಳಿಗೆ ಉತ್ತರಿಸಿರುವ ಹಲವು ಉದಾಹರಣೆಗಳನ್ನು ಗಮನಿಸಬಹುದು. ವರ್ತಮಾನದ ಹಲವು ಸಂದಿಗ್ಧಗಳಿಗೆ ಭೂತಕಾಲದ ಚಿಂತನೆಗಳ ಮೂಲಕವೆ ಉತ್ತರ ನೀಡುವ ಪ್ರಯತ್ನಗಳನ್ನು ಗುರುತಿಸಬಹುದು. ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳಲ್ಲಿನ ಕಥನಗಳ ಆಶಯಗಳನ್ನು ಪ್ರಸ್ತುತಕ್ಕೆ ಸಮೀಕರಿಸುವ ಪ್ರಯತ್ನಗಳು ನಡೆದಿವೆ. ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಯ ಆಶಯಗಳಿಗೆ ತಕ್ಕಂತೆ ಪುರಾತನ ಮೌಲ್ಯಗಳನ್ನು ಪುನರ್‌ಮೌಲ್ಯೀಕರಿಸುವ ಹಾಗೂ ಸಮಕಾಲೀನ ಪ್ರತಿಕ್ರಿಯೆಗಳನ್ನು ದಾಖಲಿಸುವ ಕೆಲಸಗಳು ನಡೆದಿವೆ. ಹೀಗೆ ಮಾಡುವಾಗ ನಮ್ಮ ಪರಂಪರೆಯಲ್ಲಿನ ಅನೇಕ ತಪ್ಪುಗಳನ್ನು ಸರಿಪಡಿಸಲಾಗಿದೆ. ಈ ರೀತಿಯ ಚಿಂತನೆ ಆರೋಗ್ಯಕರ ಸಮಾಜ ಹಾಗೂ ಅಲ್ಲಿ ರೂಪುಗೊಳ್ಳುವ ಸಾಹಿತ್ಯಕ್ಕೆ ಅಗತ್ಯವಾದುದು. ಆಧುನಿಕ ಕನ್ನಡ ಸಾಹಿತ್ಯ ಈ ದೆಸೆಯಲ್ಲಿ ಪ್ರಯೋಗಶೀಲವಾದುದಾಗಿದೆ.

ಜೀವಪರವಾದ ಚಿಂತನೆಯು ಎಷ್ಟೇ ಪುರಾತನವಾಗಿದ್ದರೂ, ನವೀನವಾಗಿದ್ದರೂ ಸ್ವೀಕರಿಸಲೇ ಬೇಕಾದುದು ಸಾಮಾನ್ಯ ಧರ್ಮ. ಅಂತೆಯೇ ಜೀವ ವಿರೋಧಿಯಾದ ಯಾವ ಸಂಗತಿಯಾದರೂ ಅದು ಈಗಾಗಲೇ ಎಷ್ಟೇ ಮನ್ನಣೆ ಗಳಿಸಿದ್ದರೂ ಅದನ್ನು ತಿದ್ದುವುದು ಸಮಾಜದ ಮತ್ತು ಸಾಹಿತ್ಯದ ಮುಖ್ಯ ಜವಾಬ್ದಾರಿ. ಪ್ರಗತಿಮುಖಿಗಳಾದ ಕನ್ನಡದ ಹಲವು ಸಾಹಿತಿಗಳು ಎಲ್ಲ ಕಾಲದ ಪ್ರಭುತ್ವ ಮತ್ತು ಪುರೋಹಿತಶಾಹಿ ಮನೋಧರ್ಮಗಳ ಅಮಾನವೀಯ ತತ್ವಗಳಿಗೆ ಸಮಾನತೆ ಹಾಗೂ ಮಾನವತೆಯ ಆಶಯಗಳ ಮೂಲಕ ಉತ್ತರ ನೀಡುವುದನ್ನು ತಮ್ಮ ಸಾಹಿತ್ಯ ಕೃತಿಗಳ ಮುಖ್ಯ ಆಶಯವನ್ನಾಗಿಸಿಕೊಂಡಿದ್ದಾರೆ.

ಜಾತಿ ಮತ್ತು ವರ್ಗ ವ್ಯವಸ್ಥೆಗಳಲ್ಲಿ ಸಿಲುಕಿರುವ ಭಾರತ ಸಮಾಜದ ಬಿಡುಗಡೆಗೆ ಇರುವ ಏಕೈಕ ಮಾರ್ಗವೆಂದರೆ ಶಿಕ್ಷಣ. ಆದರೆ ಇಂದು 'ಶಿಕ್ಷಣ'ವನ್ನು ಪಡೆಯುವ ಹಕ್ಕು ಸಂಘರ್ಷಮಯವಾಗಿದೆ.

ಅದು ವರ್ಗ, ವರ್ಣ, ಉಳ್ಳವರು, ಇಲ್ಲದವರು, ಬಲಿಷ್ಠರು, ದುರ್ಬಲರು – ಈ ಬಗೆಯ ತಾರತಮ್ಯಗಳಿಂದ ಜಟಿಲ. ಇದು ಇಂದಿನ ಪ್ರಶ್ನೆಯಲ್ಲ. ಪುರಾತನ ಕಾಲದಿಂದಲೂ ಈ ಸಮಸ್ಯೆಯ ಭೂತ ಕಾಡುತ್ತಿದೆ. ಭಾರತೀಯ ಸಮಾಜದ ಹಲವು ಸುಧಾರಕರು ಇದನ್ನು ಪರಿಹರಿಸುವ ನಿಟ್ಟಿನಲ್ಲಿ ತೊಡಗಿದಂತಹ ಅನೇಕ ಸಂಗತಿಗಳು ಕನ್ನಡ ಸಾಹಿತ್ಯದಲ್ಲೂ ಚರ್ಚಿತಗೊಂಡಿವೆ.

ಮಹಾಭಾರತದ 'ಏಕಲವ್ಯ'ನ ಕತೆ ಜನಜನಿತವಾದುದು. ಈ ಕತೆಯಲ್ಲಿ ಎದುರಾಗುವ ವರ್ಗಸಂಘರ್ಷದ ಪ್ರಶ್ನೆ ಇಂದಿಗೂ ಮುಖ್ಯವಾಗಿದೆ. ಹೊಸಗನ್ನಡ ಸಾಹಿತ್ಯದಲ್ಲಿ ಈ ಕತೆಯನ್ನು ಆಕರವನ್ನಾಗಿಸಿಕೊಂಡು ಹಲವು ನಾಟಕಕಾರರು ತಮ್ಮ ತಮ್ಮ ಕಾಲಧರ್ಮದ ಬಿಕ್ಕಟ್ಟುಗಳಿಗೆ ಉತ್ತರ ನೀಡುವ ಪ್ರಯತ್ನ ಮಾಡಿದ್ದಾರೆ. ಈ ನಿಟ್ಟಿನಲ್ಲಿ ಗೋವಿಂದ ಪೈ ಅವರ 'ಹೆಬ್ಬೆರಳು', ಕುವೆಂಪು ಅವರ 'ಬೆರಳ್‌ಗೆ ಕೊರಳ್', ಸಿದ್ಧಲಿಂಗಯ್ಯ ಅವರ 'ಏಕಲವ್ಯ' ನಾಟಕಗಳಲ್ಲಿ ಚರ್ಚೆಯಾಗಿರುವ ಶಿಕ್ಷಣ ಕುರಿತ ಚಿಂತನೆಗಳನ್ನು ಪರಾಮರ್ಶಿಸುವ ಪ್ರಯತ್ನವನ್ನು ಇಲ್ಲಿ ಕೈಗೊಳ್ಳಲಾಗಿದೆ.

ಮಹಾಭಾರತದ 'ಏಕಲವ್ಯ'ನ ಕತೆಯನ್ನು ಈ ಮೂರು ನಾಟಕಗಳು ಆಕರವನ್ನಾಗಿಸಿಕೊಂಡಿದ್ದರೂ, ಇವುಗಳ ನಿರೂಪಣಾ ವಿಧಾನ, ಕಥನದ ಆಶಯ, ಪ್ರತಿಪಾದಿಸುವ ಮೌಲ್ಯಗಳ ಹಿನ್ನೆಲೆಯಲ್ಲಿ ಭಿನ್ನತೆಯನ್ನು ಹೊಂದಿವೆ. ಈ ವಿಚಾರಗಳು ನಾಟಕಕಾರರ ಮನೋಧರ್ಮ ಮತ್ತು ಕಾಲಧರ್ಮಗಳನ್ನು ಅವಲಂಬಿಸಿವೆ. ಈ ಹಿನ್ನೆಲೆಯಲ್ಲಿ ಈ ಮೂರು ನಾಟಕಗಳಲ್ಲಿನ ಶಿಕ್ಷಣ ಕುರಿತ ಚಿಂತನೆಗಳನ್ನು ಕ್ರೋಢೀಕರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ದ್ರೋಣಾಚಾರ್ಯರು ಏಕಲವ್ಯನಿಗೆ ಶಿಕ್ಷಣ ನೀಡಲು ನಿರಾಕರಿಸಲು ನೀಡುವ ಕಾರಣಗಳೇನು? ಆ ಸಂದರ್ಭದಲ್ಲಿ ದ್ರೋಣಾಚಾರ್ಯ ಹಾಗೂ ಅರ್ಜುನನ ಮನಃಸ್ಥಿತಿ ಹೇಗಿತ್ತು? ಏಕಲವ್ಯ ಬಿಲ್ವಿದ್ಯೆಯನ್ನು ಕಲಿತ ಬಗೆ, ಯಾವ ಮಾನದಂಡವನ್ನಾಧರಿಸಿ ದ್ರೋಣಚಾರ್ಯರು ಏಕಲವ್ಯನಲ್ಲಿ ಗುರುದಕ್ಷಿಣೆ ಕೇಳುತ್ತಾರೆ? ಹಾಗು ಅದರ ಪರಿಣಾಮಗಳೇನು? – ಈ ಸಂಗತಿಗಳು ಈ ನಾಟಕಗಳಲ್ಲಿ ವ್ಯಕ್ತಗೊಂಡಿರುವ ಬಗೆಯನ್ನು ಇಲ್ಲಿ ಅವಲೋಕಿಸಲಾಗಿದೆ.

ಪ್ರಭುತ್ವ ಮತ್ತು ಪುರೋಹಿತಶಾಹಿ ಮನೋಧರ್ಮಗಳು ಶಿಕ್ಷಣ ವ್ಯವಸ್ಥೆಯನ್ನು ಅನಾದಿ ಕಾಲದಿಂದಲೂ ನಿಯಂತ್ರಿಸುತ್ತಿವೆ. ಈ ನಾಟಕದಲ್ಲಿನ ದ್ರೋಣ, ಅರ್ಜುನನ ಪಾತ್ರಗಳ ಹಿಂದಿರುವ ಮನಃಸ್ಥಿತಿ ಇಂದಿಗೂ ಬದಲಾಗದ ಸನ್ನಿವೇಶಗಳಿವೆ. ಈ ಹಿನ್ನೆಲೆಯಲ್ಲಿ ಏಕಲವ್ಯನ ಕಥೆ ಆಧುನಿಕ ಎನಿಸಿಕೊಳ್ಳುತ್ತದೆ. ಮೂಲ ಕಥೆಯಲ್ಲಿ ವ್ಯಾಧನೆಂಬ ಕಾರಣದಿಂದಲೂ, ಉಳಿದ ಶಿಷ್ಯರಿಗೆ ಗಮನ ಕೊಡಬೇಕೆಂಬ ಉದ್ದೇಶದಿಂದಲೂ ದ್ರೋಣ ಏಕಲವ್ಯನನ್ನು ಶಿಷ್ಯನಾಗಿ ಸ್ವೀಕರಿಸಲಿಲ್ಲ.

ಕುವೆಂಪು ಅವರ 'ಬೆರಳ್‌ಗೆ ಕೊರಳ್' ನಾಟಕದಲ್ಲಿನ ದ್ರೋಣ, ಏಕಲವ್ಯ ಶೂದ್ರನೆಂದು ತಿಳಿದರೂ ತಿರಸ್ಕರಿಸದೆ ಅವನಿಗೆ ವಿದ್ಯೆ ಕಲಿಸಲು ಮುಂದಾಗುತ್ತಾನೆ. ಆದರೆ ಅರಸು ಮಕ್ಕಳ ಅಸೂಯೆ ಅಡ್ಡಬರುತ್ತದೆ. ಶೂದ್ರನೊಡನೆ ನಾವು ವಿದ್ಯೆ ಕಲಿಯುವುದಿಲ್ಲ ಎನ್ನುತ್ತಾರೆ ಅವರು. ಶೂದ್ರನಾದರೇನು, ಸಮರ್ಥನಾದ ಈತ ಕಲಿತ ಮೇಲೆ ನಿಮ್ಮ ಸೇವೆಗೆ ಸಲ್ಲುತ್ತಾನೆ ಎಂದು ಹೇಳುವ ದ್ರೋಣಾಚಾರ್ಯರ ಮಾತುಗಳಿಗೂ ಬೆಲೆ ಇಲ್ಲದಂತಾಗಿ ಏಕಲವ್ಯನನ್ನು ಹೊರಗಟ್ಟಿದಾಗ ಗುರು ಮರುಗುತ್ತಾನೆ.

**ಏಕಲವ್ಯ, ಅಳಲದಿರ್**
**ಆಸೆಗೆಡದಿರ್. ನೀನೆಮ್ಮ ಮನೆಯೊಳಾಳಾಗಿರು**

**ಈ ಗರಡಿಗೆನ್ನ ಸೇವೆಗೈತರುತೆ**
**ದೂರದಿಂ ಕಂಡು ಕಲಿ, ಕಲ್ತನಿತಂ**
**ಮತ್ತುಳಿದುದಂ ಮನೆಯೊಳ್ಗಿಯೆ ಕಲಿಯುವನೀತಂ**
**ಕಲಿಪೆನಶ್ವತ್ಥಾಮನೊಡನೆ**

– ಎಂದು ಏಕಲವ್ಯನನ್ನು ಸಮಾಧಾನ ಮಾಡುತ್ತಾನೆ.

ಗೋವಿಂದ ಪೈ ಅವರ ಹೆಬ್ಬೆರಳು ನಾಟಕದಲ್ಲಿ

ಬಿಲ್ವಿದ್ಯೆಯನ್ನು ಕಲಿಸಬೇಕಂತೆ. ಏನು ಉದ್ಧಟೆ. ಕಾಡಿನ ಹುಡುಗನಿಗೆ ವಿದ್ಯೆ ನಿಷಿದ್ಧ. ಕ್ಷತ್ರಿಯರೊಡನೆ ಶಿಕ್ಷಣವೇ? ಕುರುವೃದ್ಧನಾದ ಭೀಷ್ಮನು ನನಗೇನೆನ್ನುವನು? ಆದ್ದರಿಂದ ನಾನು ಕಲಿಸಲಾರೆ – ಎನ್ನುವ ತೀರ್ಮಾನ ದ್ರೋಣನದು.

ಕುರು ಕುವರರು ಒಪ್ಪಿದರೆ ಕಲಿಸಲು ಅಡ್ಡಿ ಇಲ್ಲವೆ? ಎಂಬ ಪ್ರಶ್ನೆ ಎದುರಾದಾಗ, ವಿಚಾರಿಸುತ್ತೇನೆ ಎನ್ನುತ್ತಾನೆ. ಆ ಸಂದರ್ಭದಲ್ಲಿ ಧರ್ಮರಾಯ ಏಕಲವ್ಯನಿಗೆ ವಿದ್ಯೆ ಕಲಿಸಬಹುದು ಎಂದರೆ, ಕರ್ಣನು ಇದು ತಪ್ಪು ಎನ್ನುತ್ತಾನೆ. ದುರ್ಯೋಧನ ಕಲಿಸಬಾರದು ಎಂದರೆ ಅರ್ಜುನ ತಲೆಬಾಗಿ ನೆಲ ಗೀರುತ್ತ ನಿರುತ್ತರನಾಗಿ ತನ್ನ ವಿರೋಧವನ್ನು ವ್ಯಕ್ತಪಡಿಸುತ್ತಾನೆ. ಏಕಲವ್ಯನೇ ದ್ರೋಣನನ್ನು ಕೇಳಿಕೊಂಡಾಗ

**ನೀ ಭಿಲ್ಲಶಾವಕಂ, ನೀನನಾರ್ಯ ಕಿಶೋರ**
**ನಿನಗೆ ಪಂಚಮ ವೇದವಂ ಕಲಿಸಲಾಸೆ !**

ಎನ್ನುತ್ತಾನೆ.

ಏಕಲವ್ಯನ ಶ್ರದ್ಧೆ, ಕೋರಿಕೆಗೆ ಮನಸೋತ ದ್ರೋಣನು ಕೊನೆಗೆ ಬೇರೆಲ್ಲಿಯಾದರು ಕಲಿ ಎಂದು ಹೇಳುತ್ತಾನೆ. ಅಲ್ಲದೇ ನಿನ್ನ ಆಸೆ ಪೂರೈಸಲಿ, ದೇವನ ದಯೆಯಿರಲಿ. ಬಿಲ್ವಿದ್ಯೆಯಲ್ಲಿ ಜಾಣನಾಗು, ನಿನಗೆ ಯಶಸ್ಸು ಸಿಗಲಿ ಎಂದು ಆಶೀರ್ವದಿಸುತ್ತಾನೆ.

ಸಿದ್ದಲಿಂಗಯ್ಯ ಅವರ 'ಏಕಲವ್ಯ' ನಾಟಕದಲ್ಲಿ ದ್ರೋಣಾಚಾರ್ಯರು ಕೀಳು ಜಾತಿಯವರಿಗೆ ವಿದ್ಯೆ ಕಲಿಸಲು ಶಾಸ್ತ್ರ ಅಡ್ಡವಿದೆ. ಅಲ್ಲದೇ ಏಕಲವ್ಯನ ಕನಸು ನನಸಾದರೆ ಲೋಕದ ದುರಂತಕ್ಕೆ ನಾಂದಿಯಾಗುತ್ತದೆ. ಆದ್ದರಿಂದ ಆತನನ್ನು ಶಿಷ್ಯನಾಗಿ ಸ್ವೀಕರಿಸಲು ನನಗೆ ಸಾಧ್ಯವಿಲ್ಲ ಎನ್ನುತ್ತಾರೆ.

ಹೀಗೆ ಜಾತಿಯ ಕಾರಣದಿಂದಾಗಿ ಏಕಲವ್ಯನನ್ನು ಕಲಿಸುವ ಕ್ರಿಯೆಯಿಂದ ಹೊರಗಿಡಲಾಗುತ್ತದೆ. ಕುವೆಂಪು ಅವರ ಬೆರಳ್‌ಗೆ ಕೊರಳ್ ನಾಟಕದಲ್ಲಿ ದ್ರೋಣಾಚಾರ್ಯರು ಈ ವರ್ಣಾಶ್ರಮವನ್ನು ಮೀರುವ ಪ್ರಯತ್ನ ಮಾಡಿದಂತೆ ಗೋಚರಿಸಿದರೂ ಅದರಲ್ಲಿ ಸಫಲವಾಗಿಲ್ಲ. ಒಂದೆಡೆ ಧರ್ಮ, ಶಾಸ್ತ್ರ, ಜಾತಿಯ ಕಾರಣಗಳು ಈ ರೀತಿಯ ಕ್ರಿಯೆಗಳಿಗೆ ಕಾರಣ ಎನಿಸುತ್ತವೆ. ಅದರ ಮರೆಯಲ್ಲಿಯೇ ಸಾಮ್ರಾಜ್ಯಶಾಹಿತ್ವ ಎಲ್ಲವನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಪ್ರಯತ್ನ ನಡೆಸುತ್ತಿರುವುದು ಗೋಚರಿಸುತ್ತದೆ. ಅರ್ಜುನ ಪ್ರಭುತ್ವದ ಸಂಕೇತ. ದ್ರೋಣಾಚಾರ್ಯರು ಪ್ರಭುತ್ವದ ಋಣಭಾರದಲ್ಲಿ ಸಿಲುಕಿರುವ ಪುರೋಹಿತಶಾಹಿಯಂತೆ ಕಾಣಿಸುತ್ತಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿಯೂ ಈ ಬಗೆಯ ಸಾಮ್ರಾಜ್ಯಶಾಹಿ ಧೋರಣೆಯನ್ನು ಕಾಣಬಹುದಾಗಿದೆ.

ಈ ಕಾರಣಗಳಿಂದ ತಿರಸ್ಕೃತನಾದ ಏಕಲವ್ಯ, ತನ್ನ ಶ್ರದ್ಧೆ, ಗುರುಭಕ್ತಿ ಹಾಗೂ ಸತತ ಅಭ್ಯಾಸದಿಂದ ಬಿಲ್ವಿದ್ಯೆ ಕಲಿತು ಶಬ್ದವೇಧಿ ವಿದ್ಯೆಯಲ್ಲಿ ಪರಿಣತಿ ಹೊಂದುತ್ತಾನೆ. ಕಲಿತದ್ದೆಲ್ಲವು ಗುರುವಿನ ಆಶೀರ್ವಾದದಿಂದ ದೊರೆತದದು ಎಂದುಕೊಳ್ಳುತ್ತಾನೆ.

**ಈ ಗುರುಪ್ರತಿಮೆಯನೆ ದ್ರೋಣಂಗಿತ್ತು**
**ಮುಂಬರಿಸಿದೆನ್ ಬಿಲ್‌ಬಿಜ್ಜೆಯಭ್ಯಾಸಮಂ**
**ಅಚ್ಚೆ, ಸೋಜಿಗವನೇನೆಂಬೆ !**
**ಎಳ್ಚರ ಪೋಳ್ತು ನನಗರಿಯದಭ್ಯಾಸಮಂ**
**ಕನಸಿನೊಳ್ ಬಂದು ಬೋಧಿಸಿದನಾ ದಿವ್ಯಗುರು !**
**ಎಂತೆಂತಪ್ಪ ಬಿಜ್ಜೆಗಳೂ ಕೈಸಾರ್ದುವೆನಗೆ !**
**ಶಬ್ದವೇಧಿಯುಮದರೊಳೊಂದು!**

ಹೀಗೆ ಗುರು ದ್ರೋಣಾಚಾರ್ಯರೆ ಕನಸಿನಲ್ಲಿ ಬಂದು ಬಿಲ್ವಿದ್ಯೆಯನ್ನು ಕಲಿಸಿದ್ದು ಎಂದುಕೊಳ್ಳುತ್ತಾನೆ. ಗೋವಿಂದ ಪೈಯವರ ಹೆಬ್ಬೆರಳು ನಾಟಕದಲ್ಲಿ –

**ದ್ರೋಣನ ಸಮಕ್ಷಮದಭ್ಯಾಸದಿಂ ಮೃಣ್ಮೂರ್ತಿ**
**ಯಿಂದ ಮಿಗೆ ಕಲಿತಿ ! ಸಂಧಾವಾದಾನ**
**ಮೇಣ್ ವಿಮೋಕ್ಷ ಕ್ರಮದಿಂ ನುರಿತಿಹಂ ! ಬಿಲುವಿದ್ಯೆ**
**ಯೊಳವೆಲ್ಲವರಿತಿಹಂ !**

ದ್ರೋಣಾಚಾರ್ಯನ ಮಣ್ಣಿನ ಮೂರ್ತಿಯ ಸ್ಫೂರ್ತಿಯಿಂದಲೇ ಏಕಲವ್ಯ ಬಿಲ್ವಿದ್ಯೆಯನ್ನು ಕರಗತ ಮಾಡಿಕೊಂಡಿದ್ದಾನೆ.

ಸಿದ್ಧಲಿಂಗಯ್ಯನವರ ಏಕಲವ್ಯ ನಾಟಕದಲ್ಲಿ ಏಕಲವ್ಯ ಗುರು ದ್ರೋಣನಿಗೆ ವಿದ್ಯಾವಿಹೀನನಾಗಿದ್ದ ನನ್ನನ್ನು ಅಂದು ತಾವು ಸ್ವೀಕರಿಸಲಿಲ್ಲ. ತಮ್ಮ ಕೃಪೆಯಿಂದ ಇಂದು ವಿದ್ಯಾಸಂಪನ್ನನಾಗಿದ್ದೇನೆ ಎಂದು ಹೇಳುತ್ತಾನೆ. ಹೀಗೆ ಏಕಲವ್ಯ ಗುರು ಹಾಗೂ ಕಲಿಸುವ ವ್ಯವಸ್ಥೆಯಿಂದ ತಿರಸ್ಕೃತನಾದರೂ ಕಲಿಯುವ ಬಯಕೆ ಹೊತ್ತ ಶ್ರದ್ಧೆ ಮತ್ತು ಸತತ ಅಭ್ಯಾಸದಿಂದ ಗುರುವನ್ನೆ ಮೀರಿಸುವಂತೆ ಬಿಲ್ವಿದ್ಯೆಯಲ್ಲಿ ಪರಿಣಿತನಾಗುತ್ತಾನೆ.

ಈ ನಾಟಕಗಳಲ್ಲಿನ ಮತ್ತೊಂದು ಬಹು ಮುಖ್ಯ ಸಂಗತಿಯೆಂದರೆ ದ್ರೋಣಾಚಾರ್ಯ ಕೌರವರು ಮತ್ತು ಪಾಂಡವರಿಗೆ ಯುದ್ಧಕ್ಕಾಗಿ ವಿದ್ಯೆ ಕಲಿಸುತ್ತಾನೆ. ಆದರೆ ಏಕಲವ್ಯನ ಕಲಿಕೆಯ ಹಿಂದಿನ ಉದ್ದೇಶ ಜೀವಪರವಾದುದು. ತನ್ನ ಕಾಡನ್ನು ರಕ್ಷಿಸಿಕೊಳ್ಳಲು ತಾನು ಬಿಲ್ವಿದ್ಯೆಯನ್ನು ಕಲಿಯಬೇಕೆಂದು ಆತ ಬಯಸುತ್ತಾನೆ.

ಶೂದ್ರನೊಬ್ಬ ತನಗಿಂತಲೂ ಮಿಗಿಲಾಗಿ ವಿದ್ಯೆ ಕಲಿತಿರುವುದನ್ನು ಕಂಡು ಕರುಬುವ ಅರ್ಜುನನಿಗಾಗಿ, ತಾನು ಈ ಹಿಂದೆ ಅರ್ಜುನನಿಗೆ ನೀಡಿದ ವಚನಕ್ಕಾಗಿ ದ್ರೋಣಾಚಾರ್ಯ ಏಕಲವ್ಯನಿಂದ 'ಹೆಬ್ಬೆರಳ'ನ್ನು ಗುರುದಕ್ಷಿಣೆಯಾಗಿ ಕೋರುತ್ತಾನೆ. ಗುರುಭಕ್ತಿಗಾಗಿ ಏಕಲವ್ಯ ತನ್ನ ಹೆಬ್ಬೆರಳನ್ನು ಕಡಿದುಕೊಡುತ್ತಾನೆ. ಇದು ಬಲಿಷ್ಠ ವ್ಯವಸ್ಥೆಯೊಂದು ಸಂಚು ರೂಪಿಸಿ ದುರ್ಬಲವರ್ಗವನ್ನು ಸಂಪೂರ್ಣವಾಗಿ ನಾಶ ಮಾಡಿಬಿಡುವುದರ ಸಂಕೇತವಾಗಿ ಕಂಡು ಬರುತ್ತದೆ. ಏಕಲವ್ಯನ ಕಲಿಕೆಯಲ್ಲಿನ ತನ್ನ ಪಾತ್ರದ ಬಗೆಗೂ ಚಿಂತಿಸದ ದ್ರೋಣಾಚಾರ್ಯನಿಗೆ ಗುರುದಕ್ಷಿಣೆ ಕೇಳುವ ಹಕ್ಕು ಇಲ್ಲ. ಆದರೂ ಪ್ರಭುತ್ವದ ದಬ್ಬಾಳಿಕೆಗೆ ದ್ರೋಣ ಪೋಷಕವಾಗುತ್ತಾನೆ. ಅರ್ಜುನನ ಮನಃಸ್ಥಿತಿಯೂ ಮಾನವತೆಗೆ ವಿರುದ್ಧವಾದುದಾಗಿದೆ.

ಕುವೆಂಪು ಅವರ ನಾಟಕದಲ್ಲಿ ಏಕಲವ್ಯನ ಬೆರಳನ್ನು ಪಡೆದುದಕ್ಕೆ ಪ್ರತಿಯಾಗಿ ದ್ರೋಣರ ಕೊರಳಿಗೆ ಸಂಚಕಾರ ಒದಗುವ ಶಾಪವಿದ್ದರೆ, ಗೋವಿಂದ ಪೈ ಅವರ ಹೆಬ್ಬೆರಳು ನಾಟಕದಲ್ಲಿ

ಕುರುವಂಶವೆ ನಾಶವಾಗುವ ಮುನ್ಸೂಚನೆ ಇದೆ. ಸಿದ್ಧಲಿಂಗಯ್ಯ ಅವರ ನಾಟಕದಲ್ಲಿ ದ್ರೋಣರಿಗೆ 'ಅವನು ಗುರುವಲ್ಲ, ಕೊಲೆಗಡುಕ' ಎಂಬ ಅಪವಾದ ಉಂಟಾಗುತ್ತದೆ. ಕುವೆಂಪು ಅವರು ರಾಮಾಯಣದ ಶಂಭೂಕನ ಕತೆಯನ್ನು ಆಧರಿಸಿ ರಚಿಸಿರುವ 'ಶೂದ್ರತಪಸ್ವಿ' ನಾಟಕದಲ್ಲಿ ತಪಸ್ಸು ಮಾಡುವ ಅಂದರೆ ವಿದ್ಯೆಯನ್ನು ಕಲಿಯುವ ಹಕ್ಕಿನ ಬಗ್ಗೆ ಚರ್ಚಿಸುತ್ತಾರೆ. ಶೂದ್ರನೊಬ್ಬ ತಪಸ್ಸು ಮಾಡುವುದು ವರ್ಣಾಶ್ರಮ ಧರ್ಮದ ಉಲ್ಲಂಘನೆಯಾದಂತೆ ಎನ್ನುವ ವೈದಿಕ ಧರ್ಮದ ನಂಬಿಕೆಯನ್ನು ಈ ನಾಟಕ ಪ್ರಶ್ನಿಸುತ್ತದೆ.

**ಅಲ್ತಲ್ತು, ರಾಮಚಂದ್ರ**
**ಶೂದ್ರನ್ ತಪಂಗೆಯ್ವೊಂದು ಅಧರ್ಮಕ್ಕೆ**
**ವರ್ಣಾಶ್ರಮ ಧರ್ಮದುಲ್ಲಂಘನೆಯ ಪಾಪಕ್ಕೆ**
**ನಿನ್ನ ಬಾಲಪ್ರಜೆಯೊರ್ವನ್ ಬಲಿಯಾದನ್**

– ಎನ್ನುವ ಬ್ರಾಹ್ಮಣನ ಮಾತುಗಳೇ ಅಧರ್ಮೀಯ ಮತ್ತು ವರ್ಣಾಶ್ರಮದಲ್ಲಿನ ಅಮಾನವೀಯತೆಗೆ ಕನ್ನಡಿ ಹಿಡಿದಂತಿವೆ. ಕುವೆಂಪು ಅವರ ನಾಟಕದ ರಾಮ ಬ್ರಾಹ್ಮಣನಿಗೆ ಆತನ ತಪ್ಪು ತಿಳವಳಿಕೆಯ ಬಗ್ಗೆ ಅರಿವು ಮೂಡಿಸುತ್ತಾನೆ. ಆ ಮೂಲಕ ವೈದಿಕ ಧರ್ಮದಲ್ಲಿನ ಮೌಢ್ಯಗಳಿಗೆ ಉತ್ತರ ನೀಡಲಾಗಿದೆ. ಏಕಲವ್ಯ ಮತ್ತು ಶಂಭೂಕ – ಇವರ ದುರಂತ ಕಥನಗಳು ಸಾಂಪ್ರದಾಯಿಕ ಶಿಕ್ಷಣದ ಅಮಾನವೀಯ ಧೋರಣೆಗಳನ್ನು ಪ್ರಕಟಿಸುವಂಥವು. ಶಿಕ್ಷಣವನ್ನು ಪಡೆದಿದ್ದರಿಂದ ಸಾಮ್ರಾಜ್ಯಶಾಹಿ ಕ್ರೌರ್ಯಕ್ಕೆ ಸಿಕ್ಕಿ ತಮ್ಮ ಅಸ್ತಿತ್ವವನ್ನ ಕಳಕೊಂಡ ಅಸಂಖ್ಯ ಕೆಳಸ್ತರದವರನ್ನು ಈ ಪಾತ್ರಗಳು ಪ್ರತಿನಿಧಿಸುತ್ತವೆ[೮]

ಪುರಾಣಗಳಲ್ಲಿ ಏಕಲವ್ಯ, ಶಂಬೂಕರ ಕತೆಗಳನ್ನು ರೂಪಿಸಿರುವ ಮನೋಧರ್ಮದ ಬಗ್ಗೆ ಚಿಂತಿಸಿರುವ ಕುವೆಂಪು, ಗೋವಿಂದ ಪೈ, ಸಿದ್ಧಲಿಂಗಯ್ಯ ಅವರು ತಮ್ಮ ಕಾಲದ ಚಿಂತನೆಗಳೊಂದಿಗೆ ಮರುಸಂಧಾನವನ್ನು ಏರ್ಪಡಿಸಿದ್ದಾರೆ. ಸಿದ್ಧಲಿಂಗಯ್ಯ ಅವರ ನಾಟಕದಲ್ಲಿ ಏಕಲವ್ಯ ಬಲಗೈಯ ಬೆರಳನ್ನು ಕಳೆದುಕೊಂಡರೂ ಎಡಗೈಯ ಹೆಬ್ಬೆರಳಿನಿಂದ ಬಿಲ್ವಿದ್ಯೆ ಮುಂದುವರೆಸುವುದು ತನ್ನ ವಿರುದ್ಧ ನಿಂತ ವ್ಯವಸ್ಥೆಗೆ ತೋರಿದ ಪ್ರತಿಭಟನೆಯಾಗಿದೆ. ಹೀಗಾಗಿ ಏಕಲವ್ಯ, ಶಂಬೂಕರ ಕತೆಗಳು ಪುರಾಣದವು ಎನಿಸದೆ ಇವತ್ತಿಗೂ ನಮ್ಮ ನಡುವಿನ ಕತೆಗಳಾಗಿ ಗೋಚರಿಸುತ್ತವೆ.

**ಆ) ಟೊಳ್ಳುಗಟ್ಟಿ ಮತ್ತು ಪಂಜರಶಾಲೆ ನಾಟಕಗಳು : ಆಧುನಿಕ ಶಿಕ್ಷಣಕ್ಕೆ ತೋರಿದ ಪ್ರತಿಕ್ರಿಯೆ**

ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯು ತನ್ನ ಕಟ್ಟುಪಾಡುಗಳಿಂದ ಸಾಮಾನ್ಯರನ್ನು ದೂರವಿರಿಸಿತ್ತು. ಇದಕ್ಕೆ ಪರ್ಯಾಯವೆಂಬಂತೆ ಬ್ರಿಟಿಷರು ರೂಪಿಸಿದ 'ಶಾಲೆ'ಯ ಶಿಕ್ಷಣ ವ್ಯವಸ್ಥೆ ಎಲ್ಲ ವರ್ಗದ ಜನರು ಕಲಿಯಲು ಅವಕಾಶ ಮಾಡಿಕೊಟ್ಟಿತು. ಆದರೆ 'ಶಾಲೆ' ಎನ್ನುವುದು ಮಗುವಿನ ಸೃಜನಶೀಲತೆಯನ್ನು ಬೆಳೆಸುವಲ್ಲಿ ವಿಫಲವಾಗುತ್ತಿರುವುದು ನಿಧಾನವಾಗಿ ಅರಿವಾಗತೊಡಗಿತು. 'ಶಿಕ್ಷಣ' ಎಂದರೇನು? ಎನ್ನುವುದೇ ಮೂಲಭೂತ ಪ್ರಶ್ನೆಯಾಗಿ, ಪುಸ್ತಕಗಳನ್ನು ಓದಿ ಪಾಸಾಗುವುದೇ ಶಿಕ್ಷಣದ ಗುರಿ ಎನಿಸಿದಾಗ ಅದರಿಂದ ಹಲವು ಸಮಸ್ಯೆಗಳು ಉಂಟಾದವು. ಇಂತಹ ಸಂಗತಿಗಳನ್ನು ಕನ್ನಡದ ಕೆಲವು ಕೃತಿಗಳು ಚರ್ಚಿಸಿವೆ.

ಟಿ ಪಿ ಕೈಲಾಸಂ ಅವರ 'ಟೊಳ್ಳುಗಟ್ಟಿ' ಅಥವಾ 'ಮಕ್ಕಳಿಸ್ಕೂಲು ಮನೇಲಲ್ವೇ' ಮತ್ತು ಬಿ.ವಿ.ಕಾರಂತರ 'ಪಂಜರಶಾಲೆ' ನಾಟಕಗಳು ಕಲಿಸುವ ವಿಧಾನಗಳಲ್ಲಿನ ಲೋಪಗಳನ್ನು ಚರ್ಚಿಸಿವೆ.

ಈ ಎರಡು ನಾಟಕಗಳು ಶಾಲೆಯ ಪರಿಕಲ್ಪನೆಯನ್ನು ನಿರಾಕರಿಸಿ ಮಗುವಿನ ಮನಃಸ್ಥಿತಿ ಹಾಗೂ ಅದು ಸಮಾಜ ಹಾಗೂ ನಿಸರ್ಗದಲ್ಲಿ ಸ್ವಭಾವತಃ ಕಲಿಯಬೇಕಾದ ಕಲಿಕೆಯ ಪ್ರಾಮುಖ್ಯತೆಯನ್ನು ಪ್ರತಿಪಾದಿಸುತ್ತವೆ. ಕಲಿಕೆಯ ವಿಧಾನಗಳು ಮತ್ತು ಅವುಗಳಿಂದ ಉಂಟಾಗುವ ಪರಿಣಾಮಗಳನ್ನು ವಿಮರ್ಶೆಗೆ ಒಳಗುಮಾಡಿವೆ.

ಕೈಲಾಸಂ ಅವರ 'ಟೊಳ್ಳುಗಟ್ಟಿ' ಅಥವಾ 'ಮಕ್ಕಳಿಸ್ಕೂಲು ಮನೇಲಲ್ವೇ' ನಾಟಕ ೧೯೨೨ರಲ್ಲಿ ಪ್ರಕಟಗೊಂಡಿದೆ. ಈ ನಾಟಕದಲ್ಲಿ ಯಾವಾಗಲೂ ಓದಿನ ಬಗ್ಗೆ ಚಿಂತಿಸುತ್ತ ಪರೀಕ್ಷೆಗಳಲ್ಲಿ ಪಾಸಾಗುತ್ತ ತನ್ನ ಮನೆಯವರಿಗೆ ಯಾವ ಬಗೆಯಲ್ಲೂ ನೆರವಾಗದ ಪುಟ್ಟು ಒಂದೆಡೆಯಾದರೆ, ಶಾಲೆಯ ಓದಿನಲ್ಲಿ ಫೇಲಾದರೂ ತನ್ನ ಮನೆಯವರಿಗೆ ಹಾಗೂ ನೆರೆ-ಹೊರೆಯವರಿಗೆ ನೆರವಾಗುವ ಮಾಧು ಮತ್ತೊಂದೆಡೆ. ಇವರಿಬ್ಬರಲ್ಲಿ ಯಾರು ಟೊಳ್ಳು? ಯಾರು ಗಟ್ಟಿ? ಎನ್ನುವ ಪ್ರಶ್ನೆ ಎದುರಾಗಿ ನಾಟಕದ ಕೊನೆಯಲ್ಲಿ ಮಾಧು ಗಟ್ಟಿ, ಪುಟ್ಟು ಟೊಳ್ಳು ಎಂದು ನಿರೂಪಿತಗೊಂಡಿದೆ.

> ಅಯ್ಯೋ ದೇವ್ರೇ! ಪ್ಯಾಸಂದ್ರೇನು ಸ್ವರ್ಗ ಸಾಧನವೇ? ಫೇಲಾದ್ರೇನು ನರಕ ಪ್ರಾಪ್ತಿಯೇ? ದುರಾದೃಷ್ಟದಿಂದ ಫೇಲಾದೋರ್ನ, ಅನ್ನಾ ನೀರಿಲ್ದೆ ಹೀಗೆ ಚಿತ್ರಹಿಂಸೆ ಮಾಡೋದೇ?.... ನಮ್ಮಪ್ಪ ಯಾವ ಪ್ಯಾಸೂ ಮಾಡ್ಲಿಲ್ಲವಲ್ಲಾ, ಆದರೂ ನಮ್ಮನೇಲಿ ನಾವೆಲ್ರೂ ಸುಖವಾಗಿ ಅನ್ಯೋನ್ಯವಾಗಿರಲಿಲ್ಲವೆ?.... ಮನುಷ್ಯನಿಗೆ ಗುಣವಲ್ವೇ ಹೆಚ್ಚು. ಈ ಹಾಳು ಹಣ ಅಂತಸ್ತು ಇವುಗಳ ಬೇಟೇಲಿ ವಿಶ್ವಾಸ ಕನಿಕರ ಇವುಗಳ್ನೆಲ್ಲಾ ಹಿಂದ್ಬಿಟ್ಟಿಡೋದೆ? (ಪುಟ-೧೪)

ಎನ್ನುವ ಸಾತುವಿನ ಮಾತುಗಳಲ್ಲಿ ಹಲವು ಪ್ರಶ್ನೆಗಳಿವೆ. ನಾಟಕವು ಸಮಕಾಲೀನ ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಕಲಿತವರು ಮತ್ತು ಕಲಿಯದವರು, ಕಲಿಕೆಯಲ್ಲಿನ ಭಿನ್ನ ಸ್ತರಗಳು ಉಂಟುಮಾಡುತ್ತಿರುವ ತಾರತಮ್ಯ ಹಾಗೂ ಅದರಿಂದ ಉಂಟಾಗುತ್ತಿರುವ ಸಂದಿಗ್ಧತೆಯ ಬಗೆಗಿನ ಚಿಂತನೆಗೆ ಎಡೆಮಾಡಿಕೊಟ್ಟಿದೆ. ಶಿಕ್ಷಣ ಎನ್ನುವುದು ಜ್ಞಾನದ ವಿಸ್ತಾರತೆ ಎನ್ನುವ ಮನೋಭಾವ ಇಲ್ಲವಾಗಿ ನೌಕರಿ ಪಡೆಯುವ ಸಾಧನವಾಗಿ ಬದಲಾಗಿದೆ. ಯಾವುದೋ ಒಂದು ದೇಶ ಅಥವಾ ಪ್ರದೇಶಗಳಲ್ಲಿ ಯಶಸ್ವಿಗೊಂಡ ಶಿಕ್ಷಣ ಪದ್ಧತಿಗಳನ್ನು ಪರಾಮರ್ಶಿಸದೆ ಯಥಾವತ್ತಾಗಿ ಅನುಕರಿಸಲಾಗುತ್ತಿದೆ. ಇವುಗಳ ಸಾಧಕ-ಬಾಧಕಗಳನ್ನು ಕುರಿತ ಪ್ರಶ್ನೆ ಇಂದು ಮುಖ್ಯವಾಗಿದೆ.

ಶಿಕ್ಷಣ ವೈಯುಕ್ತಿಕವಾದ ಬದುಕಿನ ಏಳಿಗೆಗೆ ನೆರವಾಗುವುದರ ಜತೆಗೆ ಸಮುದಾಯದ ಹಿತಕ್ಕೆ ಪೂರಕವಾಗಬೇಕಾಗಿದೆ. ಈ ನಾಟಕಕಾರರು ನಾಟಕದ ಕೊನೆಯಲ್ಲಿ –

> ಇಂಗ್ಲೀಸು ವಿದ್ಯಾಭ್ಯಾಸ ಕ್ರಮಾ ಅಂಬೋ ಪಾತಾಳ ಗರಡೀಗೆ ಕೊಂಡಿಗ್ಯೇ ಇಲ್ಲ. ಇಂಥ ವಿದ್ಯಾಭ್ಯಾಸಕ್ರಮದ ಅನುಸರಣೆಯಿಂದ ನಮ್ಮ ದೇಶಕ್ಕಾಗೋ ಫಲ ಏನೊಂತ್ಕೇಳಿದ್ರೆ..... ನಮ್ಮ ಪಾಠಶಾಲೆಗಳೆಲ್ಲಾ ಪುಟ್ಟೂಗಳ್ನ ತಯಾರ್ಮಾಡೋ ಕಾರ್ಖಾನೆಗಳಾಗಿ ಹೋಗಿವೆ. ನಮ್ಮಕ್ಳನ್ಸಾಕಿ, ಗುಣಗಳನ್ನು ಬಿತ್ತಿ ಬೆಳಸಿ, ಸ್ಕೂಲಿಗೆ ಕಳಿಸಿ, ಸ್ಕೂಲುಗಳಲ್ಲಿ ನಾವೀಗನುಸರಿಸುತ್ತಿರುವ ಕೊಂಡಿ ಇಲ್ಲದ ಪಾತಾಳಗರಡಿ ಕ್ರಮಾನ ಬಿಟ್ಬಿಟ್ಟು, ನಮ್ಮಕ್ಕಳ ಸ್ವಭಾವದಲ್ಲಿರುವ ಗುಣಗಳನ್ನು ಹೊರಕ್ಕೆ ಸೆಳೆಯುವ ವಿದ್ಯಾಭ್ಯಾಸ ಕ್ರಮವೊಂದನ್ನೇರ್ಪಡಿಸಿಕ್ಕೊಂಡು ಅದನ್ನನುಸರಿಸಿದ್ರೇನೆ ನಮ್ಮ ದೇಶದೇಳಿಗೆ ಎಂಬೋ ನನ್ನ ಯೋಚ್ನೆ ಕುಂಬಳ್ಕಾಯಷ್ಟಿಲ್ದಿದ್ರೂನುವೆ

ರಾಗೀಕಾಳಷ್ಟಾದರೂ ತಮ್ಮಗಳ ಮನಸ್ಸಿಗೆ ನಾಟಿದ್ದಕ್ಕೆ ನನ್ನ ಪ್ರಥಮ ಪ್ರಯತ್ನ ವ್ಯರ್ಥವಲ್ಲ. (ಪುಟ-೧)

- ಈ ಮಾತುಗಳನ್ನಾಡಿ ಶತಮಾನಗಳು ಉರುಳಿದರೂ ಇವತ್ತಿಗೂ ಶಿಕ್ಷಣದ ಪರಿಸ್ಥಿತಿಗಳು ಬದಲಾಗಿಲ್ಲದ ಸ್ಥಿತಿಯನ್ನು ಸೂಚಿಸುತ್ತದೆ. ಇದಕ್ಕೆ ಪರ್ಯಾಯ ಮಾರ್ಗಗಳನ್ನು ನಾಟಕಕಾರರು ಸೂಚಿಸುತ್ತ ಸಮಸ್ಯೆಗಳನ್ನು ಕುರಿತು ಚರ್ಚಿಸಿದ್ದಾರೆ. ಈ ದಿಕ್ಕಿನಲ್ಲಿ ಯೋಚಿಸುವಂತೆಯೂ ಮಾಡಿದ್ದಾರೆ.

ತಮ್ಮ ಮಕ್ಕಳನ್ನು ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ಸೇರಿಸಬೇಕು ಎನ್ನುವ ಆಸೆಯಿಂದ ಸಾವಿರದಿಂದ ಲಕ್ಷದವರೆಗೆ ವಂತಿಗೆ ನೀಡಲು ಪರಿಪಾಟಲು ಪಡುವ ಮಧ್ಯಮವರ್ಗದ ಜನ ಒಂದೆಡೆಯಾದರೆ, ಅನುತ್ತೀರ್ಣಗೊಂಡೆನೆಂದು, ಕಡಿಮೆ ಅಂಕಗಳು ಬಂದವೆಂದು ವಿದ್ಯಾರ್ಥಿಗಳು ಆತ್ಮಹತ್ಯೆಗೆ ಪ್ರಯತ್ನಿಸುತ್ತಿರುವುದು ಮತ್ತೊಂದೆಡೆ. ಈ ಎರಡು ಸಂಗತಿಗಳು ಈ ಕಾಲಮಾನದ ಜ್ವಲಂತ ಸಮಸ್ಯೆಗಳಾಗಿವೆ.

'ಮಕ್ಕಳಿಸ್ಕೂಲ್ ಮನೇಲಲ್ವೆ' ಎನ್ನುವ ಕೈಲಾಸಂ ನಿಜವಾದ ಶಿಕ್ಷಣ ಯಾವುದು ಎನ್ನುವ ಜಿಜ್ಞಾಸೆಯನ್ನು ಮೂಡಿಸುತ್ತಾರೆ. ನಾಟಕದಲ್ಲಿ 'ಭಾಗೀರಥಮ್ಮ' ಹೇಳುವ "ಈ ಭೂಮೀಲಿ ವಾಸಿಸೋಕೆ ನಾವು ದೇವರಿಗೆ ಕೊಡಬೇಕಾದ್ಬಾಡ್ಗೆ ನಮ್ ಸುತ್ತಮುತ್ತಲಿರುವ ಜನರಿಗೆ ಉಪಯೋಗವಾಗೋದು" ಎನ್ನುವ ಮಾತು ಶಿಕ್ಷಣದ ಅರ್ಥವನ್ನು ವಿಸ್ತರಿಸುತ್ತದೆ.

"ನಮ್ಮ ಮಕ್ಕಳ ಸ್ವಭಾವದಲ್ಲಿರುವ ಗುಣಗಳನ್ನು ಹೊರಕ್ಕೆ ಸೆಳೆಯುವ ವಿದ್ಯಾಭ್ಯಾಸಕ್ರಮವನ್ನು ಏರ್ಪಡಿಸಿಕೊಂಡು ಅದನ್ನು ಅನುಸರಿಸಿದರೇನೆ ನಮ್ಮ ದೇಶದ ಏಳಿಗೆ" ಎಂಬ ಕೈಲಾಸಂ ಅವರ ಆಶಯ ಇವತ್ತು ನಮ್ಮ ಮುಂದಿರುವ ಹಲವು ಪ್ರಶ್ನೆಗಳಿಗೆ ಉತ್ತರವಾಗಿವೆ.

**ಪಂಜರ ಶಾಲೆ**

ರವೀಂದ್ರನಾಥಠಾಕೂರರ 'ಗಿಳಿಯ ಕತೆ' ಎನ್ನುವ ಸಣ್ಣಕಥೆಯನ್ನು ಆಧರಿಸಿ ಬಿ ವಿ ಕಾರಂತರು ರಚಿಸಿರುವ ನಾಟಕ 'ಪಂಜರ ಶಾಲೆ'. ವಾಚಾಳಪುರದ ರಾಜನ ತೋಟದಲ್ಲಿ ಹಣ್ಣುಗಳನ್ನು ತಿನ್ನುತಿದ್ದ ಗಿಳಿಯನ್ನು ಸೆರೆಹಿಡಿದು ಅದಕ್ಕೆ ಶಿಕ್ಷಣ ಕೊಡಿಸುವ ಕೆಲಸ ನಡೆಯುತ್ತದೆ. ಇದಕ್ಕಾಗಿ ರಾಜ ತನ್ನ ಅಳಿಯನನ್ನು ಶಿಕ್ಷಣ ಮಂತ್ರಿಯನ್ನಾಗಿ ನೇಮಿಸಿ ಅವನಿಗೆ ಗಿಳಿಯ ಶಿಕ್ಷಣದ ಉಸ್ತುವಾರಿಯನ್ನು ವಹಿಸುತ್ತಾನೆ.

ಅಳಿಯರಾಜ ರಾಜ್ಯದ ಪಂಡಿತರನ್ನೆಲ್ಲ ಕರೆದು ಸಲಹೆ ಕೇಳುತ್ತಾನೆ. ಗಿಳಿಗೆ ಶಿಕ್ಷಣ ನೀಡಲು ಪಂಜರವನ್ನು ನಿರ್ಮಿಸಲಾಗುತ್ತದೆ. ವಿದ್ವಾಂಸರೆಲ್ಲ ಶಿಕ್ಷಣ ನೀಡಲು ಬೇಕಾದ ಪಠ್ಯಕ್ರಮವನ್ನು ರೂಪಿಸುತ್ತಾರೆ. ಕಾಯಲು ಕಾವಲುಗಾರರನ್ನು ನೇಮಿಸಲಾಗುತ್ತದೆ. ಓದು, ಬರಹ, ಮತ್ತು ಸಂಗೀತ, ನೃತ್ಯ ಮೊದಲಾದ ಕಲೆಗಳನ್ನು ಕಲಿಸಲು ಶಿಕ್ಷಕರನ್ನು ನಿಯೋಜಿಸಲಾಗುತ್ತದೆ. ಎಲ್ಲ ಕೆಲಸಗಳಿಗೂ ಸಾಕಷ್ಟು ಬಹುಮಾನಗಳನ್ನು ನೀಡಲಾಗುತ್ತದೆ. ಬೋಧನೆ ನಿರಂತರವಾಗಿ ಸಾಗುತ್ತದೆ. ಈ ಕ್ರಿಯೆಗಳನ್ನು ಮೆಚ್ಚುವ ಪ್ರಶಂಸಕರು, ವಿಮರ್ಶಿಸುವ ನಿಂದಕರು ಹುಟ್ಟಿಕೊಳ್ಳುತ್ತಾರೆ. ಕಾಲ ಕಳೆದಂತೆ ಪಂಜರದಲ್ಲಿ ಬಂಧಿಯಾದ ಗಿಳಿಯು ತಾನು ಸ್ವಾಭಾವಿಕವಾಗಿ ಕಲಿತಿದ್ದ ಹಾರುವುದನ್ನು, ಕೂಗುವುದನ್ನು ಮರೆಯುತ್ತದೆ. ಅದರ ಶಿಕ್ಷಣಕ್ಕಾಗಿ ರೂಪಿಸಿದ ಯೋಜನೆಗಳಿಗೆ ಸಾಕಷ್ಟು ಧನವ್ಯಯವಾಗುತ್ತದೆಯೇ ಹೊರತು ಅದರಿಂದ ಯಾವ ಪ್ರಯೋಜನವು ಆಗುವುದಿಲ್ಲ.

ಮಹಾರಾಜ, ರಾಜ ಮಾವ, ನನ್ನದೊಂದು ನಮ್ರ ನಿವೇದನೆ, ಇದನ್ನು ರಾಜ ಶಾಲೆಗೆ ಸೇರಿಸುವ ಮೊದಲು ಒಂದು ಮುಖ್ಯ ತಥ್ಯವನ್ನು ಕಂಡುಹಿಡಿಯಬೇಕು. ಇದರ ಅಸಭ್ಯತೆಗೆ ಮತ್ತು ಅವಿದ್ಯೆಗೆ ಮೂಲ ಕಾರಣವನ್ನು ಕಂಡುಹಿಡಿಯಬೇಕು. ಈ ಗಿಳಿಮರಿ ತಿನ್ನುವುದೇನು: ಕುಡಿಯುವುದೇನು, ಇದರ ಆವರಣ ಎಂಥದ್ದು, ಇದು ಇರೋದೆಲ್ಲಿ, ಹಾರೋದೆಲ್ಲಿ, ಇದರ ರೆಕ್ಕೆ, ಪುಕ್ಕ, ಕೊಕ್ಕುಗಳ ಉದ್ದಗಲವೆಷ್ಟು, ಭಾರವೆಷ್ಟು – ಈ ಅಂಶಗಳ ಬಗ್ಗೆ ದೀರ್ಘ ಸಂಶೋಧನೆ ನಡೆಯಬೇಕು(ಪುಟ-೫೩)

ಎನ್ನುವ ಅಳಿಯರಾಜನ ಮಾತು ಶಿಕ್ಷಣದ ವ್ಯವಸ್ಥೆಯನ್ನು ಅಣಕಿಸುತ್ತದೆ. ಕಲಿಯುವವರ ಆಸಕ್ತಿಗಳಿಗೆ ತಕ್ಕಂತೆ ಶಿಕ್ಷಣ ಕ್ರಮವನ್ನು ರೂಪಿಸಬೇಕು.

ಈ ಕಥೆ ಪ್ರಸ್ತುತ ಶಿಕ್ಷಣದ ಹೆಸರಿನಲ್ಲಿ ಮಕ್ಕಳಿಗೆ ನೀಡುತ್ತಿರುವ ದೈಹಿಕ ಮತ್ತು ಮಾನಸಿಕ ಹಿಂಸೆಗಳನ್ನು ವಿರೋಧಿಸುತ್ತದೆ. ಸರ್ಕಾರಗಳು ಶಿಕ್ಷಣದ ಹೆಸರಿನಲ್ಲಿ ರೂಪಿಸುತ್ತಿರುವ ಯೋಜನೆಗಳ ನಿರುಪಯುಕ್ತತೆಯನ್ನು ಬಯಲುಗೊಳಿಸುತ್ತದೆ. ಈ ಕಾಲದ ಮಕ್ಕಳು ಗಿಳಿಯಂತೆ ತಾವು ಸ್ವಾಭಾವಿಕವಾಗಿ ಕಲಿತಿರುವುದನ್ನು ಮರೆಸದಂತೆ ಶಿಕ್ಷಣ ಕ್ರಮ ಬದಲಾಗಬೇಕೆನ್ನುವ ಹಾಗೂ ನಿಸರ್ಗದೊಂದಿ ಬೆರೆತು ಮಗು ಕಲಿಯಬೇಕು ಎನ್ನುವ ಚಿಂತನೆ ಇಲ್ಲಿ ವ್ಯಕ್ತವಾಗಿದೆ. ಶಾಲೆ ಪಂಜರವಾಗದಂತೆ ಎಚ್ಚರವಹಿಸಬೇಕು ಎನ್ನುವುದು ಈ ನಾಟಕದ ಮುಖ್ಯ ಆಶಯವಾಗಿದೆ. ಈ ಬಗೆಯ ಸಂಗತಿಗಳು ಬರಹಗಾರರನ್ನು ಕಾಡಿದಂತೆ ಶಿಕ್ಷಣ ತಜ್ಞರನ್ನು, ಶಿಕ್ಷಣ ನೀತಿಗಳನ್ನು ರೂಪಿಸುವವರನ್ನು ಕಾಡಬೇಕಾಗಿದೆ. ಸರ್ಕಾರಗಳು ಶಿಕ್ಷಣಕ್ಕೆ ಮೊದಲ ಆದ್ಯತೆ ನೀಡಬೇಕು. ಇಂದಿನ ಮಕ್ಕಳು ನಾಳೆಯ ಪ್ರಜೆಗಳು ಎನ್ನುವುದು ಕೇವಲ ಹೇಳಿಕೆಯಾಗಿ ಉಳಿಯದೆ ನಾಳೆಯ ಉತ್ತಮ ಪ್ರಜೆಗಳನ್ನು ರೂಪಿಸಲು ಸಾಹಿತಿಗಳ ಶಿಕ್ಷಣ ಚಿಂತನೆಗಳನ್ನು ಕಾರ್ಯಗತಗೊಳಿಸಬೇಕಾಗಿದೆ.

ಅನುಬಂಧ – ೨

# ಮೆಕಾಲೆ ವರದಿ

ಇಂದ,

ಗೌರವಾನ್ವಿತ ಟಿ.ಬಿ. ಮೆಕಾಲೆ

ದಿನಾಂಕ : ೦೨. ಫೆಬ್ರವರಿ ೧೮೩೫

೧. ಸಾರ್ವಜನಿಕ ಶಿಕ್ಷಣ ಸಮಿತಿ (Committee of Public Iinstruction)ಯನ್ನು ರಚಿಸಿದ ಕೆಲವು ಗಣ್ಯರ ಅಭಿಪ್ರಾಯವು ಸೂಚಿಸುವಂತೆ, ಅವರು ಈವರೆಗೆ ಪ್ರೇರೇಪಿಸಿದ ಮಾರ್ಗವು ೧೮೧೩ರಲ್ಲಿ ಬ್ರಿಟಿಷ್ ಸಂಸತ್ತಿನಿಂದ ಕಟ್ಟುನಿಟ್ಟಾಗಿ ಆದೇಶಿಸಲಾದ 'ವಿಧಿ'ಯಾಗಿದೆ ಮತ್ತು ಆ ಅಭಿಪ್ರಾಯವು ಸರಿ ಇರುವುದಾದರೆ ಒಂದು ಶಾಸನೀಯ ಕಾಯಿದೆಯು 'ಒಂದು ಬದಲಾವಣೆ'ಗಾಗಿ ಅಧಿಕಾರ ಕೊಡುವ ಅನಿವಾರ್ಯತೆ ಇರಬಹುದು. ನಾನು ಆ ಕುರಿತು ಸರಿಯಾಗಿಯೇ ಚಿಂತಿಸಿರುವಂತೆ ಈಗ ನಮ್ಮ ಮುಂದಿರುವ ಪ್ರತಿಕೂಲ ಹೇಳಿಕೆಗಳನ್ನು ನಿಗ್ರಹಿಸುವ ಪೂರ್ವಸಿದ್ಧತೆಯಲ್ಲಿ ಯಾವ ಪಾತ್ರವನ್ನಾದರೂ ವಹಿಸುತ್ತೇನೆ ಮತ್ತು ಸದರಿ ವಿಷಯ ಕುರಿತಾದ; ನಾನು ಹೇಳಲೇ ಬೇಕಾದುದ್ದನ್ನು ಒಬ್ಬ ಭಾರತೀಯ ಕೌನ್ಸಿಲ್ ಸದಸ್ಯನಾಗಿ; ನನ್ನ ಇದರಿನಲ್ಲಿ ಪ್ರಸ್ತಾಪವಾಗುವವರೆಗೂ ನಾನು ನನ್ನ ಅಭಿಪ್ರಾಯವನ್ನು ಕಾಯ್ದಿರಿಸುತ್ತೇನೆ.

೨. ೧೮೧೩ರ ಸಂಸತ್ತಿನ ಕಾಯಿದೆಯು (The Act of Parliment) ಅದಕ್ಕೆ ಆರೋಪಿತವಾದ ಅರ್ಥವನ್ನು ಯಾವುದೇ ಸೂಕ್ಷ್ಮ ಸಂಕ್ಷಿಪ್ತ ಕಲಾಕುಸುರಿಯಂತೆ ಸಮರ್ಥವಾಗಿ ಬಿತ್ತರಿಸುತ್ತದೆ ಎಂದು ನನಗೆ ಗೋಚರಿಸುವುದಿಲ್ಲ. ಅದು ಅಧ್ಯಯನ ಮಾಡಬಹುದಾದ ನಿರ್ದಿಷ್ಟ ಭಾಷೆಗಳು ಮತ್ತು ವಿಜ್ಞಾನಗಳನ್ನು ಒಳಗೊಂಡಿದ್ದನ್ನು ಬಿಟ್ಟರೆ ಮತ್ತೇನು ಅಲ್ಲ; ಶೂನ್ಯ. ಒಂದು 'ದತ್ತನಿಧಿ'ಯನ್ನು ಎತ್ತಿ ಮೀಸಲಾಗಿಡುವುದು; ಸಾಹಿತ್ಯದ ಉತ್ತೇಜನಕ್ಕೆ ಮತ್ತು ಪುನರುತ್ಥಾನಕ್ಕೆ ಮತ್ತು ಸ್ಥಳೀಯ ಅಕ್ಷರಸ್ಥ ಭಾರತೀಯರ ಪ್ರೋತ್ಸಾಹಕ್ಕೆ ಹಾಗೂ ಬ್ರಿಟಿಷರ ಆಳ್ವಿಕೆಯಲ್ಲಿರುವ ಪ್ರದೇಶಗಳ ಸ್ಥಳೀಯರಲ್ಲಿ ವಿಜ್ಞಾನಗಳ ಜ್ಞಾನ ಸಂಪತ್ತನ್ನು ಉತ್ತೇಜಿಸುವುದು ಮತ್ತು ಪರಿಚಯಿಸುವುದಕ್ಕಾಗಿ. ಸಂಸತ್ತಿನ (ಪಾರ್ಲಿಮೆಂಟ್) ಅರ್ಥದಲ್ಲಿ ಸಾಹಿತ್ಯವೆಂದರೆ ಅದು ಕೇವಲ ಅರೇಬಿಕ್ ಮತ್ತು ಸಂಸ್ಕೃತ ಸಾಹಿತ್ಯ ಮಾತ್ರವೆಂದು ಸಮರ್ಥಿಸುವುದು ಅಥವಾ ವಾದಿಸುವುದು; ಆದರೆ ಅವು 'ಸ್ಥಳೀಯ ವಿದ್ಯಾವಂತ' ನ್ಯೂಟನ್ನನ ಭೌತಶಾಸ್ತ್ರ, ಲಾಕ್‌ನ ಅಧ್ಯಾತ್ಮಿಕತೆ ಮಿಲ್ಟನ್‌ನ ಅಭಿಜಾತ ಕಾವ್ಯದ ಪರಿಚಯವಿರುವ ಸ್ಥಳೀಯನಿಗೆ ಹೆಸರು ಬಿರುದು ಬಾವಲಿಗಳ ಗೌರವವನ್ನು ಎಂದಿಗೂ ನೀಡದು; ಆದರೆ ಅವು ಅರ್ಥೈಸುವಂತೆ ಅವುಗಳ ಹೆಸರಿನಲ್ಲಿ ನಾಮನಿರ್ದೇಶನವನ್ನು ಆಯ್ಕೆಯಾದ ಕೇವಲ ಅಂತಹ ವ್ಯಕ್ತಿಗಳು ಮಾತ್ರ ಹಿಂದುಗಳ ಪವಿತ್ರ ಗ್ರಂಥಗಳನ್ನು ಅಧ್ಯಯನ ಮಾಡಿರಬಹುದು. ಸದರಿ ಗ್ರಂಥಗಳಲ್ಲಿ ಬಳಸಿರುವ ಎಲ್ಲ ಬಗೆಯ ಪುರಾಣ ; ಮಿಥ್ಯ/ಅತಿಮಾನುಷ ನಿಗೂಢಗಳನ್ನು ಸೃಷ್ಟಿಕರ್ತನಲ್ಲಿ ಲೀನವಾಗಿಸುವುದು. ಇದು ಅಂತಹ ತೃಪ್ತಿಕರವಾದ ನಿರೂಪಣೆಯಂತೆ ಕಾಣದು. ಇದಕ್ಕೆ

ಸಮನಾದ ಮತ್ತೊಂದು ಘಟನೆಯನ್ನು ನೋಡೋಣ, ಊಹಿಸಿಕೊಳ್ಳಿ, ಈಜಿಪ್ತಿನ ಬಾದಷಾಹ ಜ್ಞಾನಸಂಪತ್ತಿನ ಮೇಲರಿಮೆಯಲ್ಲಿ ಒಂದು ಕಾಲಕ್ಕೆ ಯುರೋಪಿನ ರಾಷ್ಟ್ರಗಳಿಗಿಂತಲೂ ಮುಂದಿದ್ದ, ಆದರೆ ಈಗ ಅವುಗಳಿಗಿಂತಲೂ ತುಂಬಾ ಕೆಳಗೆ ಕುಸಿದಿದ್ದಾನೆ. ಅದಕ್ಕಾಗಿ ಈಜಿಪ್ತಿನ ಸ್ಥಳೀಯ ವಿದ್ಯಾವಂತರನ್ನು ಪ್ರೋತ್ಸಾಹಿಸಲು, ಸಾಹಿತ್ಯವನ್ನು ಉತ್ತೇಜಿಸಲು ಮತ್ತು ಪುನರುತ್ಥಾನ ಮಾಡಲು ಸೂಕ್ತ 'ಮೊತ್ತದ' ಹಣವನ್ನು ತೆಗೆದಿರಿಸಿದ್ದಾನೆ. ಯಾರಾದರೂ, ಅವನು ತನ್ನ ಬಾದಾಷಾಹ ಅಧಿಪತ್ಯದ ಯುವಕರಿಗೆ ಚಿತ್ರಲಿಪಿಯ ಅಧ್ಯಯನವನ್ನು (Study of hieroglypics) ಒಸಿರಿಸ್‌ನ (Osiris) ನೀತಿಕತೆಗಳಲ್ಲಿ ಮರೆಮಾಚಿರುವ ತತ್ವಸಿದ್ಧಾಂತಗಳನ್ನು ಸಂಶೋಧಿಸಲು ಮತ್ತು ಪ್ರಾಚೀನ ಕಾಲದಲ್ಲಿ ಪೂಜಿಸುತ್ತಿದ್ದ ಈರುಳ್ಳಿ ಮತ್ತು ಬೆಕ್ಕುಗಳ ಆಚರಣೆ ವಿಧಿ ಸಂಪ್ರದಾಯಗಳ ನಿಖರತೆಯ ಸಾಧ್ಯತೆಯನ್ನು ಕಂಡುಹಿಡಿಯಲು ಅನೇಕ ವರ್ಷಗಳನ್ನು ದಯಪಾಲಿಸಿದನು ಎಂದು ತರ್ಕಿಸುವಿರಾ? ಅವನು ಕೇವಲ ಅಸಂಬದ್ಧವಾಗಿ ಹಣ ವ್ಯಯಮಾಡಿದನೇ; ಗಮನ ಸೂಚಕ ಗೂಢಲಿಪಿಯನ್ನು ಅರ್ಥೈಸಲು ತನ್ನ ಯುವಕ ಪಡೆಯನ್ನು ನೇಮಿಸುವ ಬದಲಾಗಿ ಅವನು ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಬೋಧಿಸುವಂತೆ ಆದೇಶಿಸಿದ್ದನೆ? ಮತ್ತು ಎಲ್ಲ ವಿಜ್ಞಾನಗಳ ಪ್ರಧಾನ ಕೀಲಿಕೈಗಳು ಆ ಭಾಷೆಗಳೇ? ಅಲ್ಲವೆ?

೩. ಪುರಾತನ ಪದ್ಧತಿಯಲ್ಲಿ ನಂಬಿಕೆ ಇರುವ ನಂಬಿಕಸ್ಥ ಬೆಂಬಲಿಗರ ನುಡಿಗಳು ಅವರನ್ನು ಸಮರ್ಥಿಸಲಾರವು. ಮತ್ತೊಂದು ದೃಷ್ಟಿಕೋನದಲ್ಲಿ ಸರ್ವತಾ ನಿರ್ಣಾಯಕವೆನಿಸುವ ನುಡಿಗಳು ಹಿಂಬಾಲಿಸಿ ಬರುವವು. ಈ ಎತ್ತಿಟ್ಟ ಲಕ್ಷ ರೂಪಾಯಿಗಳು 'ಭಾರತದಲ್ಲಿ ಕೇವಲ ಸಾಹಿತ್ಯದ ಪುನರುತ್ಥಾನಕ್ಕಾಗಿ ಮಾತ್ರವಲ್ಲ' ಈ ಪದಪುಂಜವನ್ನಾಧರಿಸಿಯೇ ಅವರ ಸಂಪೂರ್ಣ ನಿರೂಪಣೆ ನೆಲೆನಿಂತಿದೆ. ಆದರೆ 'ಬ್ರಿಟಿಷ್ ವಸಾಹತು ಪ್ರದೇಶಗಳ ಮೂಲದ ನಿವಾಸಿಗಳಲ್ಲಿ ವಿಜ್ಞಾನದ ಜ್ಞಾನ ಸಂಪತ್ತನ್ನು ಉತ್ತೇಜಿಸುವುದಕ್ಕಾಗಿ ಮತ್ತು ಪರಿಚಯಿಸುವುದಕ್ಕಾಗಿ' ಎಂಬ ನುಡಿಗಳು, ನಾನು ಹೆಣಗಾಡುವ ಎಲ್ಲ ನಿರ್ದಿಷ್ಟ ಬದಲಾವಣೆಗಳನ್ನು ಅಧಿಕಾರಯುತವಾಗಿ, ತೃಪ್ತಿಕರವಾಗಿ, ಏಕಾಂಗಿಯಾಗಿ ಪ್ರತಿನಿಧಿಸುವವು.

೪. ಕೌನ್ಸಿಲ್ ನನ್ನ ಅರ್ಥಕಲ್ಪನೆಯನ್ನು ಒಪ್ಪಿದರೆ ಯಾವ ಶಾಸನಾತ್ಮಕ ಕಾಯಿದೆಯೂ ಅನಿವಾರ್ಯವಾಗಲಾರದು. ಅವರು ನನಗಿಂತ ಭಿನ್ನವಾದರೆ, ಕಠಿಣ ಸವಾಲುಗಳಿಗೆ ಕಾರಣವಾಗುವ ೧೮೧೩ರ ಚಾರ್ಟರ್ ಕಾಯಿದೆಯ ಮೊದಲ ಉಪವಿಧಿಯನ್ನು ನಾನು ವಜಾ ಮಾಡುವ ಒಂದು ಪುಟ್ಟ ಕಾಯಿದೆಯನ್ನು ಪ್ರಸ್ತಾಪಿಸಲು ಇಚ್ಛಿಸುವೆ.

೫. ನಾನು ಪರಿಗಣಿಸುತ್ತಿರುವ ಚರ್ಚೆಯು ಕೇವಲ ನಡಾವಳಿಯ ರೂಪಕ್ಕೆ ಮಾತ್ರ ಸಂಬಂಧಿಸಿರುವುದು. ಆದರೆ ಪೌರಾಸ್ತ್ಯ ಶಿಕ್ಷಣ ಪದ್ಧತಿಯನ್ನು (The Oriental System of Education) ಮೆಚ್ಚುವವರು ಬೇರೊಂದು ತರ್ಕವನ್ನು ಬಳಸುತ್ತಾರೆ. ಅದನ್ನು ನಾವು ನ್ಯಾಯಸಮ್ಮತ ಎಂದು ಒಪ್ಪಿದರೆ ಸಕಲ ಬದಲಾವಣೆಗೆ ವಿರೋಧಿ ತೀರ್ಮಾನ ಎನಿಸುತ್ತದೆ. ಅವರು ಊಹಿಸಿ ಚಿಂತಿಸುವುದೇನೆಂದರೆ ಸಾರ್ವಜನಿಕ ಹಿತಾಸಕ್ತಿಯು ವರ್ತಮಾನ ವ್ಯವಸ್ಥೆಗೆ ಒತ್ತೆ ಇಡಬಹುದೆಂದು ಮತ್ತು ಅದು ಯಾವುದೇ 'ನಿಧಿ' ಔಚಿತ್ಯವನ್ನು ಬದಲಾಯಿಸಬಹುದು ಎನ್ನುವುದಾಗಿದೆ. ಅಂತಹವುಗಳು ಇಲ್ಲಿಯವರೆಗೆ ಅರೇಬಿಕ್ ಮತ್ತು ಸಂಸ್ಕೃತಗಳ ಅಧ್ಯಯನಕ್ಕೆ

ಖರ್ಚಾಗಿರುವುದು ಲೂಟಿಯಾಗಿರಬಹುದು. ಇದು ಅವರು ಈ ಬಗೆಯ ಉಪಸಂಹಾರಕ್ಕೆ ಆಗಮಿಸಿದ್ದರ ಹಿಂದಿನ ವೈಚಾರಿಕ ಪ್ರಕ್ರಿಯೆಯಿಂದ ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ. ಅನುದಾನಗಳು ಸಾರ್ವಜನಿಕ ನಿಧಿಯಿಂದ ಸಾಹಿತ್ಯದ ಪ್ರೋತ್ಸಾಹಕ್ಕಾಗಿ ಮಂಜೂರಾದಂತಹವು. ಇತರರು ಊಹಿಸಿದ ಅಥವಾ ನಿಜವಾದ ಪ್ರಾಯೋಜಿತ ಇತರ ಉದ್ದೇಶಗಳಿಗಾಗಿ ಅದೇ ನಿಧಿಯಿಂದ ಅನುದಾನಗಳು ಮಂಜೂರಾದರೆ ವಿಭಿನ್ನವಾದ ಅಗೌರವಕ್ಕೆ ಪಾತ್ರವಾಗಬಹುದು. ನಾವು ಆರೋಗ್ಯವಂತರಾಗಿರಬೇಕೆಂದು ಭಾವಿಸಿ ಒಂದು ಶುಚಿ ಪ್ರದೇಶದ ಅಭಿವೃದ್ಧಿಗೆ ಅಸ್ತಿಭಾರ ಹಾಕುತ್ತೇವೆ. ಅದರ ಪರಿಣಾಮವಾಗಿ ನಾವು ನಮ್ಮನ್ನು, ಶುಚಿಪ್ರದೇಶವನ್ನು ಶುಚಿಯಾಗಿಡಲು ಅಲ್ಲಿ ತೊಡಗಿಸಿಕೊಳ್ಳಬಹುದೇ? ಒಂದು ವೇಳೆ ಅದರ ಫಲಿತಾಂಶವು ನಮ್ಮ ನಿರೀಕ್ಷೆಗಳಿಗೆ ಉತ್ತರವಾಗಲಾರದಾದರೆ? ನಾವು ಹಡಗು ಕಟ್ಟೆಯನ್ನು ನಿಲ್ಲಿಸಲು ಪ್ರಾರಂಭಿಸಿದೆವು. ಅದು ಸಾರ್ವಜನಿಕ ಕೆಲಸ ಕಾರ್ಯಗಳನ್ನು ನಿಲ್ಲಿಸಿ; ಸಾರ್ವಜನಿಕ ನಂಬಿಕೆಯನ್ನು ಉಲ್ಲಂಘಿಸಿದಂತಾಗುವುದೆ? ಒಂದು ವೇಳೆ ಕಟ್ಟಿದ ಕಟ್ಟಡ ಅನುಪಯುಕ್ತವೆಂದು ನಾವು ಅನಂತರ ನೋಡಿ ವಿಚಾರ ಮಾಡಿ ನಂಬಿದರೆ? ಸ್ವತ್ತಿನ ಹಕ್ಕುಗಳು ನಿಸ್ಸಂಶಯವಾಗಿ ಪವಿತ್ರವಾದವು. ಆದರೆ ಅವುಗಳ ಅನುಸರಣೆಯಲ್ಲಿ ಆ ಹಕ್ಕುಗಳಿಗೆ ಯಾವುದೇ ಅಪಾಯವಿರುವುದಿಲ್ಲ. ಈಗ ಅಸಂತೋಷವೂ ತುಂಬಾ ಸಾಮಾನ್ಯವಾಗಿದೆ. ಅವುಗಳು ಸಂಬಂಧಿಸದೇ ಇರುವ ವಸ್ತುಗಳ ಸಂಕೇತಗಳಾದಾಗ, ಯಾರು ಆಸ್ತಿಯ ಪಾವಿತ್ರ್ಯವನ್ನು ತೆಗಳಿ ಹಂಚಿಕೆ ಮಾಡುವರೊ ಅವರು ವಾಸ್ತವದಲ್ಲಿ ಆಸ್ತಿಯ ಸಾಂಸ್ಥಿಕತೆಗೆ ಹಂಚುವರಾ, ಇದೊಂದು ಜನಪ್ರಿಯವಲ್ಲದ ಮತ್ತು ದುರ್ಬಲವಾದುದಾಗಿದೆ. ಒಂದು ಸರ್ಕಾರ ಯಾವುದೇ ವ್ಯಕ್ತಿಗೆ ಒಂದು ಔಪಚಾರಿಕ ಭರವಸೆ ಕೊಟ್ಟಿದ್ದಾದರೆ, ಇಲ್ಲ ಒಂದು ಸರ್ಕಾರ ಯಾವುದೇ ವ್ಯಕ್ತಿಯ ಮನಸ್ಸಿನಲ್ಲಿ ಒಂದು ವೈಚಾರಿಕ ನಿರೀಕ್ಷೆಯನ್ನು ಹುಟ್ಟುಹಾಕಿದ್ದರೆ ಅದು ಅವನು/ಅವಳು ಒಂದು ನಿರ್ದಿಷ್ಟ ಆದಾಯವನ್ನು ಒಬ್ಬ ಶಿಕ್ಷಕನ ಹಾಗೆ ಅಥವಾ ಅರೇಬಿಕ್ ಅಥವಾ ಸಂಸ್ಕೃತ ವಿದ್ಯಾರ್ಥಿಯಾಗಿ ಸ್ವೀಕರಿಸಬಹುದಾಗಿದೆ. ನಾನು ಆ ವ್ಯಕ್ತಿಯ ಹಣಗಳಿಕೆಯ ಆಸಕ್ತಿಯನ್ನು ಗೌರವಿಸಲಿಚ್ಚಿಸಬಹುದು. ನಾನು ಔದಾರ್ಯದ ಇನ್ನೊಂದು ತಪ್ಪು ಮುಖವನ್ನು ಅದು ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಗುರುತಿಸಿ ನಿಜ ಸಾರ್ವಜನಿಕ ನಂಬಿಕೆ ನರಳುವುದು ಪ್ರಶ್ನಾರ್ಹವೆಂದು ಮನಗಂಡಿರುವೆ. ಆದರೆ ಒಂದು ಸರ್ಕಾರ ತನ್ನನ್ನು ತಾನೇ ವಾಗ್ದಾನ ಮಾಡಿಕೊಳ್ಳುವ ಮಾತು ಹಲವು ಭಾಷೆಗಳ ಮತ್ತು ಹಲವು ವಿಜ್ಞಾನಗಳನ್ನು ಬೋಧಿಸುವುದು ಆ ಭಾಷೆಗಳು ಸಹ ಉಪಯೋಗಹೀನವಾದವಾದರು ಸಹ; ಇವುಗಳು ಅರ್ಥಹೀನವೆಂಬಂತೆ ಗೋಚರಿಸುವವು. ಯಾವುದೇ ಸಾರ್ವಜನಿಕ ಪತ್ರಗಳಲ್ಲಿ ಒಂದೇ ಒಂದು ಸಣ್ಣ ಪದವೂ ಇಲ್ಲ; ಅದು ಭಾರತ ಸರ್ಕಾರ ನಿರಂತರವಾಗಿ ಈ ವಿಷಯವಾಗಿ ಯಾವುದೇ ವಾಗ್ದಾನ ಕೊಟ್ಟಿರುವ ಉದ್ದೇಶವನ್ನು ತರ್ಕಿಸಿ ತೀರ್ಮಾನಕ್ಕೆ ಬರಬಲ್ಲಂತಹ ಅಥವಾ ನಿರಂತರವಾಗಿ ಬದಲಾಯಿಸಲಾಗದ ಸ್ಥಿರ ನಿಧಿಗಳ ಗುರಿಗಳು ಪರಿಗಣಿಸುವ ಒಂದು ಪದವೂ ಇಲ್ಲ. ಆದರೆ ಬೇರೊಂದು ಬಗೆಯಲ್ಲಿಯಾದರೂ ಇದೆಯೆ? ನಾನು ನಮ್ಮ ಮೊದಲಿನ ಅಧಿಕಾರಿಗಳನ್ನು (Predecessors) ಈ ವಿಷಯ ಕುರಿತಾದ ಯಾವುದೇ ವಾಗ್ದಾನದ ಮೂಲಕ ನಮ್ಮನ್ನು ಒಟ್ಟುಗೂಡಿಸುವ ಸಾಮರ್ಥ್ಯವನ್ನು ನಾನು ನಿರಾಕರಿಸಲೇಬೇಕಾಗಿದೆ. ಬಹುಶಃ ಒಂದು ಸರ್ಕಾರ ಕಳೆದ ಶತಮಾನದಲ್ಲಿದ್ದಂತಹವುದು. ತುಂಬಾ ಶಾಸ್ತ್ರ ಸಮ್ಮತವಾಗಿ ಶಾಸನ ರೂಪಿಸಿತ್ತು. ಅದು, ಅದರ ಎಲ್ಲ ವಿಷಯಗಳು,

ಅಂತ್ಯದ ವೇಳೆಗೆ ಸಿಡುಬಿಗಾಗಿ ಸೊಂಕು ಸೇರಿದರೆ, ಜೆನ್ನರನ ಸಂಶೋಧನೆಯ ಅನಂತರ ಸರ್ಕಾರ ದೃಢವಾಗಿ ಪಟ್ಟುಹಿಡಿದು ನಿಲ್ಲಬಹುದೆ? ಈ ಪ್ರಮಾಣಗಳು, ಈ ಕಾರ್ಯನಿರ್ವಹಣೆ ನನ್ನದೆಂದು ಯಾರೂ ಸಾಧಿಸಲಾರರು ಅಥವಾ ಯಾರು ಮಾಡುವುದಿಲ್ಲ ಮತ್ತು ಯಾರು ಸಹ ಅನುದಾನಗಳನ್ನು ಬಿಡುಗಡೆ ಮಾಡುವುದಿಲ್ಲ. ಈ ಬಗೆಯ ವ್ಯಯ ಮಾಡುವ ಹಕ್ಕುಗಳು ಯಾರಲ್ಲಿಯೂ ವಿನಿಯೋಗವಾಗಿರುವುದಿಲ್ಲ. ಈ ಆಸ್ತಿ ಮಾಲಿಕತ್ವ ರಹಿತವಾದುದು. ಈ ಬಗೆಯ ದರೋಡೆ ಯಾರನ್ನೂ ಬಡವರನ್ನಾಗಿಸುವುದಿಲ್ಲ. ನನಗಿಂತ ನನ್ನ ಹಿರಿಯ ಅಧಿಕಾರಿಗಳು (Predecessors) ಗ್ರಹಿಸಬಹುದು. ನಾನು ಈ ವಾದವನ್ನು ಕೇವಲ ಒಂದು ಪದಗಳ ರೂಪದ ಸಮುಚ್ಛಯವೆಂದು ಪರಿಗಣಿಸಿರುವೆ – ಪ್ರತಿದಿನ ಭಾರತದಲ್ಲಿ ಮತ್ತು ಇಂಗ್ಲೆಂಡಿನಲ್ಲಿ ಇದನ್ನು ಉಪಯೋಗಿಸುವುದಿದೆ : ಪ್ರತಿನಿಂದೆಗೆ ರಕ್ಷಣಾತ್ಮಕವಾಗಿ; ಬೇರಾವ ವಾದವನ್ನು ನಿಲುವಾಗಿಸಿ; ವಾದಿಸಬಹುದು.

೬. ಭಾರತದಲ್ಲಿ ಕಲಿಕೆಯನ್ನು ಉತ್ತೇಜಿಸುವ ಉದ್ದೇಶಕ್ಕಾಗಿ ಕೌನ್ಸಿಲ್‌ನಲ್ಲಿ ಗೌರ್‍ನರ್ ಜನರಲ್‌ರವರ ಲಕ್ಷ ಧನವಿನಿಯೋಗವನ್ನು; ಅದು ಹೇಗೋ ತುಂಬಾ ಸಲಹಾತ್ಮಕ ಚಿಂತನೆಯಾಗಿರಬಹುದು ಎಂದು ನಾನು ಸಮಗ್ರವಾಗಿ ಉಪಯೋಗಿಸುವೆ. ಪ್ರಭುತ್ವವು (His Lordship) ಸಮಗ್ರವಾಗಿ ಮುಕ್ತವಾಗಿ ನಿರ್ದೇಶಿಸಿದಂತೆ ಇನ್ನು ಮುಂದೆ ಅರೇಬಿಕ್ ಮತ್ತು ಸಂಸ್ಕೃತಕ್ಕೆ ಪ್ರೋತ್ಸಾಹಧನ ಬಳಸಬಾರದು; ಮೈಸೂರಿನಲ್ಲಿ ಹುಲಿಗಳನ್ನು ಕೊಲ್ಲಲು ಬಹುಮಾನವನ್ನು ಕಡಿಮೆ ಮಾಡಬೇಕೆಂದು ನಿರ್ದೇಶಿಸಿದ ಹಾಗೆ ಅಥವಾ ಚರ್ಚ್‌ಗಳಲ್ಲಿ ಪ್ರಾರ್ಥನೆ–ಪಠಣೆಗಾಗಿ ಸಾರ್ವಜನಿಕ ಹಣವನ್ನು ಇನ್ನು ಮುಂದೆ ವ್ಯಯಮಾಡಲೇಬಾರದು ಎಂದು ಆದೇಶಿಸಿರುವುದನ್ನು ನಾನು ಪಾಲಿಸುವೆ.

೭. ನಾವು ಈಗ ಮುಖ್ಯ ವಿಷಯದ ಮುಖ್ಯಾಂಶದ ಕಡೆಗೆ ಬರೋಣ. ಈ ರಾಷ್ಟ್ರದ ಜನರ ಬುದ್ಧಿಮತ್ತೆಯನ್ನು ವಿಕಾಸಗೊಳಿಸಲು ಸರ್ಕಾರ ನಿರ್ದೇಶಿಸಿದ ಹಾಗೆ ನಮ್ಮಲ್ಲಿ ಬಳಸಬಹುದಾದ 'ನಿಧಿ' ಇದೆ. ಇಲ್ಲಿರುವ ಸರಳ ಪ್ರಶ್ನೆಯೆಂದರೆ : ಇದನ್ನು 'ತುಂಬಾ ಪ್ರಯೋಜನಕಾರಿಯಾಗಿ ಬಳಸುವ ಮಾರ್ಗ ಯಾವುದು? ಎನ್ನುವುದು.

೮. ಮಂಡಳಿಯ ಎಲ್ಲರಿಗೂ ಈ ಒಂದು ಅಂಶದ ಬಗ್ಗೆ ಒಪ್ಪಿಗೆ ಇರುವಂತೆ ಕಾಣುತ್ತದೆ. ಅದೇನೆಂದರೆ ಭಾರತದ ಈ ಭಾಗದಲ್ಲಿನ ಸ್ಥಳೀಯರಲ್ಲಿ ಸಾಮಾನ್ಯವಾಗಿ ಮಾತನಾಡುವ ಭಾಷಾ ಪ್ರಭೇದಗಳು ಸಾಹಿತ್ಯಿಕ ಇಲ್ಲವೆ ವೈಜ್ಞಾನಿಕ ಮಾಹಿತಿಯನ್ನು ಹೊಂದಿರುವುದಿಲ್ಲ ಮತ್ತು ಅವು ಹೆಚ್ಚು ಕಡಿಮೆ ಒರಟು ಮತ್ತು ಪರಿಪೂರ್ಣವಾದವುಗಳಲ್ಲ. ಬೇರೊಂದು ಪ್ರದೇಶದೆಡೆಯಿಂದ ಸಂಪದೀಕರಣಗೊಳ್ಳದಿದ್ದರೆ (Enrich) ಯಾವುದೇ ಮೌಲ್ಯಯುತ ಪುಸ್ತಕದ ಭಾಷಾಂತರ ಅವರ ಭಾಷೆಗಳಿಗೆ ಸರಳವಾದುದಲ್ಲ. ಇದನ್ನು ಎಲ್ಲ ಕಡೆಗಳಿಂದಲೂ ಒಪ್ಪಿಕೊಂಡಂತೆ ಕಾಣುವ ವಿಷಯವೆಂದರೆ ಒಂದು ನಿರ್ದಿಷ್ಟ ಜನರ/ವರ್ಗದ ಬೌದ್ಧಿಕ ಬೆಳವಣಿಗೆಯು ಆ ಜನವರ್ಗಗಳ ಉನ್ನತ ಶಿಕ್ಷಣ/ಅಧ್ಯಯನ ಸಾಧನಾ ಮಾರ್ಗಗಳನ್ನು ತಿಳಿದಿರುವರು. ಪ್ರಸ್ತುತ ಅವರಲ್ಲಿರುವ ಸ್ಥಳೀಯ ಭಾಷೆಗಳಿಂದಲ್ಲದೆ ಯಾವುದೇ ಅಪರಿಚಿತ ಉದ್ದೇಶಿತ ಭಾಷೆಯಿಂದ ಪರಿಣಾಮಕಾರಿಯಾಗಿ ಕಲಿಯಬಹುದಾಗಿದೆ.

೯. ಆಗ ಆ ಭಾಷೆ ಯಾವುದಾಗಿರಬೇಕು/ಏನಾಗಿರಬೇಕು? ಅರ್ಧದಷ್ಟು ಮಂಡಳಿಯು ಅದು ಇಂಗ್ಲಿಷ್ ಭಾಷೆಯೆಂದು ಸಮರ್ಥಿಸಿ ಬೆಂಬಲಿಸಿರುವುದು. ಇನ್ನುಳಿದ ಅರ್ಧ ಮಂಡಳಿಯು ದೃಢವಾಗಿ ಅರೇಬಿಕ್ ಮತ್ತು ಸಂಸ್ಕೃತವನ್ನು ಶಿಫಾರಸ್ಸು ಮಾಡಿದೆ. ನನಗೆ ಇಡಿಯಾಗಿ ಕಾಣುವ ಪ್ರಶ್ನೆ ಎಂದರೆ - ಯಾವ ಭಾಷೆಯು ತಿಳಿಯಲು ಯೋಗ್ಯವಾಗಿದೆ? ಎಂಬುದು.

೧೦. ನಾನು ಸಂಸ್ಕೃತ ಅಥವಾ ಅರೇಬಿಕ್‌ನ ಯಾವುದೇ ಜ್ಞಾನ ಹೊಂದಿಲ್ಲ. ಆದರೆ ನಾನು ಅವುಗಳ ಮೌಲ್ಯದ ಸರಿಯಾದ ಅಂದಾಜಿನ ರೂಪವನ್ನು ರಚಿಸಿ ಮುಗಿಸಿರುವೆ. ನಾನು ತುಂಬಾ ಜನಪ್ರಿಯ ಸಂಸ್ಕೃತ ಮತ್ತು ಅರೇಬಿಕ್ ಗ್ರಂಥಗಳ ಭಾಷಾಂತರಗಳನ್ನು ಓದಿಕೊಂಡಿರುವೆ. ಪೌರಾಸ್ತ್ಯ ಭಾಷೆಗಳಲ್ಲಿ (Oriental Language)ನುರಿತ ಅತಿಗಣ್ಯರೊಂದಿಗೆ ಮನೆಯಲ್ಲಿ ಮತ್ತು ಇಲ್ಲಿ ಸಂಭಾಷಿಸಿದ್ದೇನೆ.

೧೧. ಪೌರ್ವಾತ್ಯ ಕಲಿಕೆ ಮತ್ತು ಕಲಿಯುವವರ ಮೌಲ್ಯಮಾಪನ ತಮ್ಮಷ್ಟಕ್ಕೆ ತೆಗೆದುಕೊಳ್ಳಲು ನಾನು ಸಿದ್ಧನಾಗಿರುವೆ. ನಾನು ಮಂಡಿಸಿದ ಈ ಕೆಳಕಂಡ ಹೇಳಿಕೆಯನ್ನು ಅವರಲ್ಲಿ ಯಾರೂ ಅಲ್ಲಗಳೆದಿಲ್ಲ ; "ಒಂದು ಉತ್ತಮ ಯುರೋಪಿಯನ್ ಗ್ರಂಥಾಲಯದ ಗ್ರಂಥಗಳ ಕಪಾಟು ಭಾರತೀಯ ಮತ್ತು ಅರೇಬಿಯಾದ ಸಮಗ್ರ ಸ್ಥಳೀಯ ಸಾಹಿತ್ಯವನ್ನು ಸರಿಗಟ್ಟಬಲ್ಲದು" ಎಂಬುದನ್ನು ಯಾರೂ ಅಲ್ಲಗಳೆಯುವ ಸಾಹಸ ಮಾಡಿಲ್ಲ. ನಿಜವಾದ ಮೇಲರಿಮೆಯುಳ್ಳ ಪಾಶ್ಚಾತ್ಯ ಸಾಹಿತ್ಯವನ್ನು ಪೌರಾಸ್ತ್ಯ ಶಿಕ್ಷಣಯೋಜನೆಗಳನ್ನು ಬೆಂಬಲಿಸುವ ಸದಸ್ಯರುಗಳು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತಿದ್ದಾರೆ.

೧೨. ಇದು ಬಹುಶಃ ವಿವಾದವಾಗುವುದು ಕಷ್ಟ ಸಾಧ್ಯ. ನಾನು ಭಾವಿಸುವಂತೆ ಕಾವ್ಯದಲ್ಲಿ ಅತ್ಯುತ್ತಮ ಸ್ಥಾನಗಳನ್ನು ಗಳಿಸಿರುವ ಸಾಹಿತ್ಯಕ ವಿಭಾಗದ ಪೌರಾಸ್ತ್ಯ ಬರಹಗಾರರೇ ಇರಬಹುದು ಮತ್ತು ನಾನು ನಿಸ್ಸಂಶಯವಾಗಿ ಎಂದಿಗೂ ಯಾವುದೇಪೌರಾಸ್ತ್ಯ ಕವಿಯು ಮಹಾನ್ ಯುರೋಪಿಯನ್ ರಾಷ್ಟ್ರಗಳವರನ್ನು ಅರೇಬಿಕ್ ಮತ್ತು ಸಂಸ್ಕೃತ ಕಾವ್ಯಗಳನ್ನು ಹೋಲಿಕೆ ಮಾಡುವ ಸಾಹಸಕ್ಕೆ ಇಳಿದಿರುವವರನ್ನು ಇಂದಿಗೂ ಭೇಟಿಯಾಗಿಲ್ಲ. ಆದರೆ ಯಾವಾಗ ನಾವು ಕಲ್ಪಿತ ಕೃತಿಗಳನ್ನು ಬಳಸುತ್ತಾ, ವಾಸ್ತವಗಳನ್ನಾಧರಿಸಿ ದಾಖಲಿಸಿದ ಕೃತಿಗಳನ್ನು ಹಾದು ಹೋಗುವವೋ ಮತ್ತು ತಪಾಸಣೆಗೊಳಗಾದ ಸಾಮಾನ್ಯ ತತ್ವಗಳು ಯುರೋಪಿಯನ್ನರ ಮೇಲರಿಮೆಯು ಖಂಡಿತ ಅಪರಿಮಿತವಾದುದಾಗಿದೆ. ನಾನು ನಂಬಿರುವಂತೆ ಇದೇನು ಹೇಳಲು ಉದ್ಧಾರವಾಚಿಯಾದುದಲ್ಲ; ಎಲ್ಲ ಬಗೆಯ ಐತಿಹಾಸಿಕ ಮಾಹಿತಿಯಂತೆ ಸಂಸ್ಕೃತ ಭಾಷೆಯಲ್ಲಿ ಬರೆದ ಸಂಗ್ರಹಿಸಿದ ಎಲ್ಲ ಪುಸ್ತಕಗಳು ಇಂಗ್ಲೆಂಡಿನಲ್ಲಿ ಪೂರ್ವ ತರಬೇತಿ/ಸಿದ್ಧತಾ ಶಾಲೆಗಳು ಉಪಯೋಗಿಸುವ ಅಯೋಗ್ಯವಾದ ಸಾರಂಶ ರೂಪದ ಪುಸ್ತಕಗಳಿಗಿಂತಲೂ ಕಡಿಮೆ ಗುಣಮಟ್ಟದ್ದಾಗಿವೆ. ದೈಹಿಕ ತತ್ವಶಾಸ್ತ್ರ ಅಥವಾ ನೈತಿಕ ತತ್ವಶಾಸ್ತ್ರಗಳ ಪ್ರತಿಯೊಂದು ವಿಭಾಗಗಳಲ್ಲಿ ಸಂಬಂಧಿತ ಸ್ಥಾನಗಳು ಹತ್ತಿರ ಒಂದೇ ಬಗೆಯವು.

೧೩. ಆಗ, ಈ ವಾದ-ವಿವಾದ ಯಾವ ಬಗೆಯ ನಿಲುವನ್ನು ಪಡೆಯಬಹುದು? ಯಾರು ತಮ್ಮ ತಾಯಿ ಭಾಷೆಯಿಂದ ಶಿಕ್ಷಣವನ್ನು ವರ್ತಮಾನದಲ್ಲಿ ಪಡೆಯುತ್ತಿಲ್ಲವೋ ಅಂತಹ 'ಜನಸಮುದಾಯಕ್ಕೆ' ನಾವು ಸುಶಿಕ್ಷಿತರನ್ನಾಗಿಸಬೇಕಾಗಿದೆ. ನಾವು ಅವರಿಗೆ ಅವರದಲ್ಲದ ಒಂದು ಪರಕೀಯ ಭಾಷೆಯನ್ನು ಬೋಧಿಸಲೇಬೇಕಾಗಿದೆ. ಷರತ್ತುಗಳಿಗೆ ಒಳಪಡಿಸುವ

ನಮ್ಮದೇ ಭಾಷೆಗಳನ್ನು ಪುನಃ ಷರತ್ತುಗಳಾಗಿ ವಿಧಿಸುವ ಅನಿವಾರ್ಯತೆ ಕಷ್ಟ ಸಾಧ್ಯ. ಅದು ಪಾಶ್ಚಾತ್ಯ ಭಾಷೆಗಳಲ್ಲಿ ಸರ್ವೋತ್ಕೃಷ್ಟ ನಿಲುವನ್ನು ಪಡೆದಿದೆ. ಗ್ರೀಕರು ನಮಗೆ ಬಿಟ್ಟು ಹೋದಂತೆ ಉದಾತ್ತ ಸಾಹಿತ್ಯದೆಡೆಗೆ, ಪ್ರತಿಮಾಗ್ರಂಥಗಳಿಗೆ ಬದ್ಧವಾಗಿರುವುದು; ಅಂತಹ ಕೀಳರಿಮೆಯಲ್ಲಿ ಪ್ರತಿ ಜೀವ ವಾಗ್ಮೀಯತೆಯ ಮಾದರಿಗಳನ್ನು – ಐತಿಹಾಸಿಕ ರಚನೆಯ – ಅವುಗಳನ್ನು ಕೇವಲ ನಿರೂಪಣೆಗಳೆಂದು ವಿರಳವಾಗಿ ಅತಿಶಯವೆನಿಸುವ ಮತ್ತು ನೈತಿಕ ಹಾಗೂ ರಾಜ್ಯ ಶೈಕ್ಷಣಿಕ ವಾಹಕಗಳಾಗಿ ಪರಿಗಣಿಸಿದ ಹಾಗೆ ಎಂದಿಗೂ ಸಮನಾಂತರವಾಗಿ ನೋಡಲಾಗುವುದಿಲ್ಲ. ಅದು ಕೇವಲ ಜೀವಂತ ಮಾನವ ಜೀವನ ಮತ್ತು ಮನುಷ್ಯ ಪ್ರಕೃತಿಗಳ ಪ್ರತಿನಿಧೀಕರಣ – ಪರಮ ಆಧ್ಯಾತ್ಮಿಕ ಚಿಂತನೆಯ, ನೈತಿಕ ಕಥನಗಳ, ಸರ್ಕಾರ, ನ್ಯಾಯಶಾಸ್ತ್ರ – ವ್ಯಾಪಾರ – ಪ್ರತಿ ಪ್ರಾಯೋಗಿಕ ವಿಜ್ಞಾನದ ನೈಜವಾದ ಗೌರವಯುತ ಮಾಹಿತಿ, ಅವುಗಳು ಆರೋಗ್ಯವನ್ನೂ ನಿರಂತರವಾಗಿ ಉಸ್ತುವಾರಿ ನೋಡುವುದು. ನೆಮ್ಮದಿ ಹೆಚ್ಚಳ ಮನುಷ್ಯನ ಬೌದ್ಧಿಕ ಸಾಮರ್ಥ್ಯವನ್ನು ಹಿಗ್ಗಿಸುವುದು. ಭಾಷೆ ಒಂದು ಸಿದ್ಧಪಥವನ್ನು ಹೊಂದಿದೆ ಎಂದು ಯಾರಿಗೆ ಗೊತ್ತು. ಎಲ್ಲ ಬಗೆಯ ವಿಶಾಲ ಬೌದ್ಧಿಕ ಸಂಪತ್ತನ್ನು – ಪ್ರಪಂಚವನ್ನು, ಅತಿ ಬುದ್ಧಿವಂತ ಪ್ರಪಂಚದ ರಾಷ್ಟ್ರಗಳು ಸೃಷ್ಟಿಸುವ ಮತ್ತು ತೊಂಬತ್ತು ಪೀಳಿಗೆಗಳ ಅನಂತರದ ಮಾಹಿತಿಯನ್ನು ಸಂಗ್ರಹಿಸುವುದು – ಇದು ಹೀಗೆ ಹೇಳಲಾಗುತ್ತದೆ. ಅಂದರೆ, ಈಗ ಚಾಲ್ತಿಯಲ್ಲಿರುವ ಸಾಹಿತ್ಯವು ಅದೇ ಭಾಷೆಯಲ್ಲಿ ಶ್ರೇಷ್ಠ ಮೌಲ್ಯವುಳ್ಳದ್ದು ; ಬೇರೆಲ್ಲಾ ವಿಶ್ವ ಸಾಹಿತ್ಯ, ಅದು ೩೦೦ ವರ್ಷಗಳ ಹಿಂದೆ ಎಲ್ಲ ಪ್ರಪಂಚ ಭಾಷೆಗಳನ್ನು ಒಟ್ಟುಗೂಡಿಸಿದ ಆ ಎಲ್ಲ ಭಾಷೆಗಳು ಚಾಲ್ತಿಯಲ್ಲಿವೆ. ಇದೆಲ್ಲಾ ಏನೂ ಅಲ್ಲ. ಭಾರತದಲ್ಲಿ ಇಂಗ್ಲಿಷ್ ಭಾಷೆಯು ಆಡಳಿತ ವರ್ಗದ ಆಡು ಭಾಷೆಯಾಗಿದೆ. ಇದು ವಾಣಿಜ್ಯ ವಿಭಾಗದ ಭಾಷೆಯಾಗಿದೆ. ಇದು ಎರಡು ದೊಡ್ಡ ಯುರೋಪಿಯನ್ ಸಮುದಾಯಗಳ ಭಾಷೆ. ಈಗ ಒಂದು ದಕ್ಷಿಣ ಆಫ್ರಿಕಾ ಮತ್ತು ಆಸ್ಟ್ರೇಲಿಯಾ : ಈ ಸಮುದಾಯಗಳು ಪ್ರತಿವರ್ಷ ಹೆಚ್ಚು ಹೆಚ್ಚು ಮಹತ್ವವನ್ನು ಮತ್ತು ಆತ್ಮೀಯತೆಯನ್ನು ಭಾರತ ಸಾಮ್ರಾಜ್ಯದೊಟ್ಟಿಗೆ ಸಂಪರ್ಕ ಹೊಂದಿವೆ. ನಾವು ನಮ್ಮ ಸಾಹಿತ್ಯದ ನೈಜ ಮೌಲ್ಯಗಳನ್ನು ನೋಡಿದರೆ ಅಥವಾ ಆ ದೇಶದ ಒಂದು ನಿರ್ದಿಷ್ಟ ಸಂದರ್ಭದಲ್ಲಿ ನಾವು ಒಂದು ಬಲಾಢ್ಯ ವಿಚಾರವನ್ನು ಕಾಣಬೇಕು. ಎಲ್ಲ ವಿದೇಶ ಭಾಷೆಗಳಲ್ಲಿ ಇಂಗ್ಲಿಷ್ ಭಾಷೆಯು ಮಾತ್ರ ತುಂಬಾ ಸಹಕಾರಿಯಾದುದು ಮತ್ತು ನಮ್ಮ ಸ್ಥಳೀಯ ಹಿತಾಸಕ್ತಿಗಳಿಗೂ ಸಹ ತುಂಬ ಉಪಯುಕ್ತವಾದುದು. ನಮ್ಮ ಮುಂದಿರುವ ಪ್ರಶ್ನೆಯೆಂದರೆ ಒಂದು ವೇಳೆ, ನಮ್ಮ ಕೈಯಲ್ಲಿ ಈ ಭಾಷೆಯನ್ನು ಬೋಧಿಸುವ ಅಧಿಕಾರ ಇರುವವರೆಗೆ, ನಾವು ಭಾಷೆಗಳನ್ನು ಬೋಧಿಸಲೇ ಬೇಕು. ಅದರಲ್ಲಿ ಸಾರ್ವತ್ರಿಕವಾಗಿ ಒಪ್ಪಿಕೊಳ್ಳುವಂತೆ, ನಮಗೆ ಹೋಲಿಸಲು ಅಗತ್ಯವಾದ ಯೋಗ್ಯ ವಿಷಯಗಳನ್ನಾಧರಿಸಿದ ಪುಸ್ತಕಗಳಿಲ್ಲದಿರುವುದು. ಒಂದು ವೇಳೆ, ನಾವು ಯುರೋಪಿಯನ್ ವಿಜ್ಞಾನವನ್ನು ಬೋಧಿಸಬಲ್ಲವಾದರೆ ನಾವು 'ಪದ್ಧತಿ'ಗಳ ಬಗ್ಗೆ ಬೋಧಿಸಬೇಕು, ಅದು ಸಾರ್ವತ್ರಿಕವಾಗಿ ಒಪ್ಪಿಕೊಳ್ಳುವಂತೆ ಎಲ್ಲೆಲ್ಲಿ ಅವರು ಯುರೋಪಿಯನ್ನರಿಗಿಂತ ಭಿನ್ನವಾಗಿರುವುದು ; ಅವರು ಬಹಳ ಕೆಟ್ಟದಾಗಿ ಭಿನ್ನವಾಗಿದ್ದಾರೆ. ಮತ್ತು ನಾವು ಸದೃಢ ತತ್ವಶಾಸ್ತ್ರ ಮತ್ತು ನಿಜ ಇತಿಹಾಸಕ್ಕೆ ಆಶ್ರಯದಾತರಾಗಬಹುದು. ನಾವು ಸಾರ್ವಜನಿಕ ಖರ್ಚುಗಳ, ವೈದ್ಯಕೀಯ ಸಿದ್ಧಾಂತಗಳಿಗೆ ಒಪ್ಪಿಗೆ ಕೊಡುವ ಅದು ಇಂಗ್ಲಿಷ್ (English Farrer) ಅಶ್ವವೈದ್ಯಕ್ಕೆ ಕೆಟ್ಟ ಹೆಸರು

ತರಬಹುದು. ಖಗೋಳಶಾಸ್ತ್ರವು ಇಂಗ್ಲಿಷ್ ವಸತಿ ಶಾಲೆಯ ಹುಡುಗಿಯರಲ್ಲಿ ನಗುವನ್ನುಕ್ಕಿಸಬಹುದು. ಇತಿಹಾಸವು ರಾಜರ ೩೦ ಅಡಿ ಎತ್ತರ ಮತ್ತು ೩೦೦೦ ವರ್ಷಗಳ ಸುದೀರ್ಘ ಆಳ್ವಿಕೆಗಳಿಂದ ತುಂಬಿ ತುಳುಕುತ್ತದೆ ಮತ್ತು ಭೂಗೋಳ ಶಾಸ್ತ್ರವು ಬೆಣ್ಣೆ ಮತ್ತು ಕಾಕಂಬಿಯ ಸಾಗರಳಿಂದಾವೃತವಾದುದಾಗಿದೆ.

೧೪. ನಾವು ಅನುಭವ ರಹಿತವಾಗಿ ನಮಗೇ ಮಾರ್ಗದರ್ಶಿಸುವುದಿಲ್ಲ. ಇತಿಹಾಸವು ಅಸಂಖ್ಯಾತ ಸಾದೃಶ್ಯ ವಿದ್ಯಮಾನಗಳನ್ನು ಒದಗಿಸುವುದು. ಮತ್ತು ಅವು ಒಂದೇ ಬಗೆಯಪಾಠಗಳನ್ನು ಬೋಧಿಸುವುದು. ಆಧುನಿಕ ಯುಗದಲ್ಲಿ ಅವು ಮುಂದುವರೆಯಲಾರವು; ಆ ಎರಡು ನೆನಪಿನಲ್ಲುಳಿಯಬಹುದಾದ ಇಡೀ ಸಮಾಜದ ಮನಸ್ಥಿತಿಗೆ ಒಂದು ಮಹಾನ್ ಅಭಿಪ್ರೇರಣೆ ಕೊಟ್ಟಿರುವಂತಹವು; ಪೂರ್ವಗ್ರಹಗಳನ್ನು ನಿಗ್ರಹಿಸುವುದು ಮತ್ತು ವಿಸ್ತರಿಸಿದ ಜ್ಞಾನಶಾಖೆ, ಅಭಿರುಚಿಯನ್ನು ಪರಿಶುದ್ಧೀಕರಣಗೊಳಿಸಿದ್ದುದು, ಕಲೆಗಳು ಮತ್ತು ವಿಜ್ಞಾನಗಳು ಇತ್ತೀಚಿನವರೆಗೂ ಅನಾಗರಿಕವು ಜ್ಞಾನದ ಕೊರತೆಯನ್ನು ಅನುಭವಿಸುತ್ತಿರುವ ರಾಷ್ಟ್ರಗಳಲ್ಲಿ ಬೇರೂರಿರುವುದು.

೧೫. ಮೊದಲನೆಯದಾಗಿ, ನಾನು ಹೇಳುವಂತೆ ಪಾಶ್ಚಾತ್ಯ ರಾಷ್ಟ್ರಗಳಲ್ಲಾದ ವಿದ್ಯೆಯ/ಸಾಹಿತ್ಯದ ಪುನರುಜ್ಜೀವನವು ಹತ್ತಿರಹತ್ತಿರ ೧೫ನೇ ಶತಮಾನ ಮತ್ತು ೧೬ನೇ ಶತಮಾನದ ಪ್ರಾರಂಭದಲ್ಲಿರಬೇಕು ; ಆ ಸಮಯದಲ್ಲಿ ಹತ್ತಿರಹತ್ತಿರ ಸಂಪೂರ್ಣವಾಗಿ ಅದು ಯೋಗ್ಯ ಓದಿಗಾಗಿ – ಪುರಾತನ ಗ್ರೀಕರ ಮತ್ತು ರೋಮನ್ನರ ಬರವಣಿಗೆಗಳನ್ನು ಒಳಗೊಂಡಿದೆ. ನಮ್ಮ ಪೂರ್ವಿಕರು ಸಾರ್ವಜನಿಕ ಶಿಕ್ಷಣ ಮಂಡಳಿಯಂತೆ ಕಾರ್ಯನಿರ್ವಹಿಸುತ್ತಿದ್ದಾರೆ. ಈವರೆಗೆ ಗಮನಿಸಿದಂತೆ ಅವರು Thucydides Platoನ ಭಾಷೆ ಮತ್ತು Ciciro ಮತ್ತು Tocitusನ ಭಾಷೆಗಳನ್ನು ತಿರಸ್ಕಾರದಿಂದ ನೋಡಲಾಯಿತೆ ಮತ್ತು? ಅವರು ಅವರ ಗಮನವನ್ನು ನಮ್ಮ ದ್ವೀಪ ರಾಷ್ಟ್ರಗಳ ಪ್ರಾಚೀನ ಭಾಷಾ ಪ್ರಭೇದಗಳ ಕಡೆ ಕೇಂದ್ರೀಕರಿಸಿದ್ದರೆ? ಅವರು ವಿಶ್ವವಿದ್ಯಾನಿಲಯಗಳಲ್ಲಿ ಏನನ್ನು ಮುದ್ರಿಸಲಿಲ್ಲ ಮತ್ತು ಬೋಧಿಸಲಿಲ್ಲ. ಆದರೆ ಆಂಗ್ಲೋ ಸೆಕ್ಸಾನ್ (Anglo - Saxon) ಭಾಷೆಯಲ್ಲಿ ಬಿರಿತ/ವೃತ್ತಾಂತಗಳನ್ನು ಮತ್ತು ಕಲ್ಪಿತ ಪ್ರೀತಿ – ಸಾಹಸಮಯ ಸಾಹಿತ್ಯಗಳನ್ನು Norman Frenchರ ಭಾಷೆಯಲ್ಲಿ – ಇಂಗ್ಲೆಂಡ್ ಈಗ ಹೇಗಿರುವಳೋ ಎಂದೆಂದಿಗೂ ಹಾಗೆ ಇರುವಳೆ? ಗ್ರೀಕರು ಮತ್ತು ಲ್ಯಾಂಟಿನ್ನರು more ಮತ್ತು aschamರ ಸಮಕಾಲೀನರಾಗಿದ್ದರೂ ನಮ್ಮ ಭಾಷೆಯು ಭಾರತೀಯರಿಗಾಗಿದೆ. ಇಂಗ್ಲೆಂಡಿನ ಸಾಹಿತ್ಯವು ಈಗ ಅಭಿಜಾತ ಪ್ರಾಚೀನತೆಗಿಂತ ಹೆಚ್ಚು ಮೌಲ್ಯಯುತವಾಗಿದೆ. ನಾನು ಅನುಮಾನಿಸುವುದೇನೆಂದರೆ, ಒಂದು ವೇಳೆ ಸಂಸ್ಕೃತ ಸಾಹಿತ್ಯವು ನಮ್ಮ Saxon ಮತ್ತು Norman ಮೂಲ ಪುರುಷರಷ್ಟೇ ಮೌಲ್ಯಯುತವಾಗಿರಬಹುದು. ಇನ್ನು ಕೆಲವು ವಿಭಾಗಗಳಲ್ಲಿ – ಉದಾಹರಣೆಗೆ ಇತಿಹಾಸ ವಿಭಾಗದಲ್ಲಿ – ನಾನು ನಂಬಿದ್ದೇನೆಂದರೆ ಅದರ ಸಾಧ್ಯತೆ ತುಂಬಾ ಕಡಿಮೆ.

೧೬. ಇನ್ನೊಂದು ಉದಾಹರಣೆ ನಮ್ಮ ಕಣ್ಣ ಮುಂದೆ ಪ್ರಸ್ತಾಪಿಸಬಹುದಾಗಿದೆ. ಕಳೆದ ನೂರಾ ಇಪ್ಪತ್ತು ವರ್ಷಗಳಲ್ಲಿ ; ಒಂದು ರಾಷ್ಟ್ರ ಮೊದ ಮೊದಲು ನಮ್ಮ ಪೂರ್ವಿಕರಷ್ಟೇ ಅನಾಗರಿಕ ಸ್ಥಿತಿಯಲ್ಲಿತ್ತು. ಧರ್ಮಯುದ್ಧ ಜರುಗಿ ಅದರಲ್ಲೇ ಮುಳುಗಿ ನಾಗರಿಕ ಸಮುದಾಯಗಳಲ್ಲಿ ಸ್ಥಾನಗಳಿಸಿಕೊಳ್ಳುವುದಕ್ಕೂ ಮೊದಲು. ನಾನು ರಷ್ಯ ಕುರಿತು ಮಾತನಾಡುವೆ. ಅಲ್ಲಿ ಇಂದು

ಒಂದು ದೊಡ್ಡ ವಿದ್ಯಾವಂತ ವರ್ಗ ತುಂಬಿ ತುಳುಕುತ್ತಿದೆ. ಅವರು ರಾಜ್ಯ ವ್ಯವಸ್ಥೆಯ ಉನ್ನತ ಹುದ್ದೆಗಳನ್ನು ನಿಭಾಯಿಸಲು ಶಕ್ತರಾಗಿದ್ದಾರೆ ಮತ್ತು ಪ್ಯಾರೀಸ್ ಲಂಡನ್‌ನ ಉತ್ತಮ ಸಂಗಾತಿಗಳ ವಲಯಗಳಲ್ಲಿ ಸುಶಿಕ್ಷಿತ ಪುರುಷರು ಯಾವುದೇ ಕೀಳರಿಮೆ ಇಲ್ಲದೆ ಅಲಂಕೃತರಾಗಿದ್ದಾರೆ. ಇಲ್ಲಿ ನಂಬಲೊಂದು ಕಾರಣವಿದೆ. ಅದೇನೆಂದರೆ ಈ ವಿಶಾಲ ಸಾಮ್ರಾಜ್ಯ ನಮ್ಮ ತಾತಂದಿರ ಕಾಲದಲ್ಲಿ ಬಹುಶಃ ಪಂಜಾಬಿನ ಹಿಂದಕ್ಕೆ ನಮ್ಮ ಮೊಮ್ಮಕ್ಕಳ ಕಾಲಕ್ಕೆ ಫ್ರಾನ್ಸ್ ಮತ್ತು ಇಂಗ್ಲೆಂಡಿನ ಸಾಮೀಪ್ಯ ಜೀವನ ನಿರ್ವಹಣೆ ವಿಕಾಸಗೊಳ್ಳುವುದು ಮತ್ತು ಈ ಬದಲಾವಣೆ ಹೇಗೆ ಸಾಧಿಸಲ್ಪಟ್ಟಿತು? ರಾಷ್ಟ್ರೀಯ ಹಮ್ಮುಬಿಮ್ಮುಗಳ ಮುಖಸ್ತುತಿಯಿಂದಲ್ಲ. ಕಿರಿಯ ರಷ್ಯನ್ನರ (Muscovite) ಮನಸ್ಸಿಗೆ ಅವರ ಪುರಾತನ ಅಜ್ಜಿಯರ ಕಥೆಗಳನ್ನು ಅವರ ಒರಟ ತಂದೆಯರು ನಂಬಿದ್ದಂತಹವನ್ನು ಹೇಳಿದ್ದರಿಂದಲ್ಲ; ಸಂತ ನಿಕೋಲಸ್‌ನ ಕುರಿತ ದಂತಕತೆಗಳನ್ನು ಅವನ ತಲೆಯಲ್ಲಿ ತುಂಬುವುದರ ಮೂಲಕವಲ್ಲ; ಪ್ರಪಂಚವು ೧೩ರ ಸೆಪ್ಟೆಂಬರ್‌ನಲ್ಲಿ ಸೃಷ್ಟಿಯಾಯಿತೇ? ಇಲ್ಲವೆ? ಎಂಬ ಮಹಾನ್ ಪ್ರಶ್ನೆಯನ್ನು ಕುರಿತು ಅವನ ಅಧ್ಯಯನ ಮಾಡಲು ಪ್ರೋತ್ಸಾಹಿಸುವುದರ ಮೂಲಕವಲ್ಲ; ಅವನು ಈ ಎಲ್ಲ ಬಗೆಯ ಜ್ಞಾನಾಂಶಗಳಲ್ಲಿ ಪರಿಣಿತಿ ಸಾಧಿಸಿದ ಅನಂತರ 'ವಿದ್ಯಾವಂತ ಸ್ಥಳೀಯ' ಎಂದು ಕರೆಯುವ ಮೂಲಕವಲ್ಲ; ಆದರೆ ಆ ವಿದೇಶಿ ಭಾಷೆಗಳನ್ನು ಅವು ಸಂಗ್ರಹಿಸಬಹುದಾದ ಮಹಾನ್ ಜ್ಞಾನ ಸಂಗ್ರಹವನ್ನು ಅವನಿಗೆ ಬೋಧಿಸುವ ಮೂಲಕ ಮತ್ತು ಅವನಿಗೆ ಈ ಎಲ್ಲ ಜ್ಞಾನ ಮಾಹಿತಿ ಹತ್ತಿರದಲ್ಲಿ ಸಿಗುವಂತೆ ಇಡುವುದರ ಮೂಲಕ ಪಾಶ್ಚಾತ್ಯ ಯುರೋಪಿನ ಭಾಷೆಗಳು ರಷ್ಯವನ್ನು ನಾಗರಿಕಗೊಳಿಸಿದವು. ಅವುಗಳೂ ಹಿಂದೂ ದೇಶಕ್ಕೊ ಹಾಗೆ ಮಾಡಲಿಚ್ಛಿಸುವುವು, ತುರ್ಕರಿಗೆ ಮಾಡಿದಂತೆಯೇ ಎಂಬುದನ್ನು ನಾನು ಅನುಮಾನಿಸಲಾರೆ.

೧೭. ಒಂದೇ ರೀತಿಯಲ್ಲಿ ಶಿಫಾರಸ್ಸಾದಂತೆ ಕಾಣುವ ಅನುಭವಾತ್ಮಕ ಮತ್ತು ಸೈದ್ಧಾಂತಿಕ ಪಥದ ವಿರುದ್ಧವಿರುವ ವಾದಗಳು ಯಾವುವು ಇರಬಹುದು? ಒಂದು ಮೂಲದ ಪ್ರಕಾರ, ನಾವು ಕಡ್ಡಾಯವಾಗಿ ಸ್ಥಳೀಯ ಸಾರ್ವಜನಿಕ ಸಹಕಾರವನ್ನು ಗಳಿಸಿಕೊಳ್ಳಲೇಬೇಕು. ಮತ್ತು ಇದನ್ನು ನಾವು ಸಂಸ್ಕೃತ ಮತ್ತು ಅರೇಬಿಕ್‌ನ್ನು ಮಾತ್ರ ಬೋಧಿಸುತ್ತಾ ಮಾಡಬಲ್ಲೆವು.

೧೮. ನಾನು ಯಾವುದೇ ಷರತ್ತಿಲ್ಲದೆ ಒಪ್ಪಿಕೊಳ್ಳುವುದೇನೆಂದರೆ, ಯಾವಾಗ ಒಂದು ದೇಶದ ಉಚ್ಚತಮ ಬೌದ್ಧಿಕ ಸಾಧನಗಳು ಆ ರಾಷ್ಟ್ರದ ಶೈಕ್ಷಣಿಕ ಉಸ್ತುವಾರಿಯನ್ನು ವಹಿಸಿಕೊಳ್ಳುವಾಗ ಪರಸ್ಪರ ಹೋಲಿಕೆಯ ವಿಷಯದಲ್ಲಿ ಅವಜ್ಞೆಗೆ ಗುರಿಯಾಗುವುದು. ವಿದ್ಯಾರ್ಥಿಗಳು ಶಿಕ್ಷಕರಿಂದ ಖಂಡಿತವಾಗಿ ಪಡೆಯಬಹುದಾದ ಪದವಿಯನ್ನು ನಿವಾರಿಸಿಕೊಳ್ಳುತ್ತಾರೆ. ಇದೇನು ಅನಿವಾರ್ಯವಾದುದಲ್ಲ. ಯಾವುದೇ ವಿಷಯವಾರು ಕುರಿತು ಮಾತನಾಡುವಾಗ, ಇದು ನಿರುತ್ತರ ಸಾಕ್ಷಿಯಿಂದ ಸಾಧಿತವಾಗಿರುವುದೇನೆಂದರೆ; ನಾವು ಪ್ರಸ್ತುತ ಸ್ಥಳೀಯರ ಸಹಕಾರವನ್ನು ಗಳಿಸಿಕೊಂಡಿರುವುದಿಲ್ಲ. ಇದು ಅವರ ಬೌದ್ಧಿಕ ಅಭಿರುಚಿ ಅವರದೇ ಕ್ಷೇಮದ ಖರ್ಚುಗಳನ್ನು ನಿಭಾಯಿಸುವುದು ತುಂಬ ಬೇಡದ್ದಾಗಿರಬಹುದು. ಆದರೆ ನಾವು ಯಾರನ್ನೂ ವಿಚಾರಿಸುತ್ತಿಲ್ಲ. ನಾವು ಅವರ ಮನಸ್ಸಿಗೆ ಹಿತವಾಗುವ ಕಲಿಕೆಯನ್ನು ನಿಲ್ಲಿಸುವುದು. ನಾವು ಅವರ ಅಸಹ್ಯಪಡುವ ಅನುಕರಣ (ಅಣಕ) ಕಲಿಕಾ ವಿಧಾನವನ್ನು ಅವರ ಮೇಲೇ ಹೇರುತ್ತಾ ಹೋಗೋಣ.

೧೯. ಇದು ಒಂದು ವಾಸ್ತವದಿಂದ ರುಜುವಾತು ಆಗಿದೆ. ಅದೇನೆಂದರೆ ನಾವು ನಮ್ಮ ಅರೇಬಿಕ್ ಮತ್ತು ಸಂಸ್ಕೃತ ವಿದ್ಯಾರ್ಥಿಗಳಿಗೆ ಪಾವತಿಸುವಂತೆ (ಶುಲ್ಕ) ಒತ್ತಾಯಿಸುವೆವು. ಅದೇ ಸಮಯದಲ್ಲಿಇಂಗ್ಲಿಷ್ ಕಲಿಯಬಯಸುವವರು ನಮಗೆ ಶುಲ್ಕ ಪಾವತಿಸುವರು. ಪ್ರಪಂಚದಲ್ಲಿರುವ ಸಕಲ ಧೋರಣೆಗಳು ಸ್ಥಳೀಯರ ಪ್ರೀತಿ ಮತ್ತು ಭಯಭಕ್ತಿಯ ಬಗ್ಗೆ, ಅವರ ಪವಿತ್ರ ಭಾಷಾ ಪ್ರಭೇದಗಳು ಬಗ್ಗೆ ಯಾವುದೇ ಮನಸ್ಸಿನ ವ್ಯಕ್ತಿಯು ಆ ವಿವಾದ ರಹಿತ ಸತ್ಯವನ್ನು ಎಂದಿಗೂ ಹೆಚ್ಚು ತೂಗಲಿಚ್ಚಿಸುವುದಿಲ್ಲ ಮತ್ತು ನಾವುಗಳು ಶುಲ್ಕ ನೀಡದ ಹೊರತು ನಮ್ಮ ವಿಶಾಲ ಸಾಮ್ರಾಜ್ಯದಲ್ಲಿ ಅವನದೇ ಉಪಭಾಷೆಗಳನ್ನು ಅವನಿಗೆ ಬೋಧಿಸಲು ಅನುಮತಿಸುವ ಒಬ್ಬ ವಿದ್ಯಾರ್ಥಿಯನ್ನು ಪತ್ತೆ ಹಚ್ಚಲು ನಮ್ಮಿಂದ ಸಾಧ್ಯವಿಲ್ಲ.

೨೦. ನನ್ನಲ್ಲಿ ಈಗ ಒಂದು ತಿಂಗಳ ಮದರಸಾದ ಲೆಕ್ಕಪತ್ರಗಳಿಗೆ. ಅದು ೧೮೩೩ರ ಡಿಸೆಂಬರ್ ತಿಂಗಳಿನದು. ಅರೇಬಿಕ್ ವಿದ್ಯಾರ್ಥಿಗಳು ಒಟ್ಟು ೭೭ ಹಾಜರಾತಿ ಇದೆ. ಇವರೆಲ್ಲರೂ ಸಾರ್ವಜನಿಕ ಶಿಕ್ಷಣ ಇಲಾಖೆ(ವೇತನ)ಯಿಂದ ಕಲಿಕಾ ವೇತನ ಪಡೆಯುತ್ತಿದ್ದಾರೆ. ಒಂದು ತಿಂಗಳಲ್ಲಿ ಅವರೆಲ್ಲರು ಪಡೆಯಬಹುದಾದ ಒಟ್ಟು ಮೊತ್ತ ೫೦೦ ರೂ.ಗಳು ಈ ಕೆಳಕಂಡಂತೆ ಮತ್ತೊಂದು ಬಗೆಯ ಲೆಕ್ಕಪತ್ರಗಳು ತಮ್ಮದೇ ನಿಲುವುಗಳನ್ನು ವ್ಯಕ್ತಪಡಿಸುತ್ತಿವೆ. ಕಡಿತಗೊಂಡ ಹಣವು ಇಂಗ್ಲಿಷ್ ಕಲಿಯುವ ಬಾಹ್ಯ ವಿದ್ಯಾರ್ಥಿಗಳಿಂದ – ಮೇ, ಜೂನ್ ಮತ್ತು ಜುಲೈ ತಿಂಗಳುಗಳ ಒಟ್ಟು ೧೦೩ ರೂಪಾಯಿಗಳಿಂದ ತುಂಬಿಕೊಳ್ಳಲಾಗಿದೆ.

೨೧. ನಾನು ಹೇಳಿದಂತೆ, ಇದು ಕೇವಲ ಸ್ಥಳೀಯ ಅನುಭವದಿಂದಾದುದು. ಅದು ನಾನು ಈ ಅಸಾಧಾರಣ ಘಟನೆಗಳಿಂದ ಆಶ್ಚರ್ಯಗೊಂಡಿದ್ದೇನೆ ಮತ್ತು ಭಾರತದಲ್ಲಿ ವಿದ್ಯಾರ್ಥಿಗಳಿಗೆ ಅವರದೇ ವೆಚ್ಚದಲ್ಲಿ ಅಧ್ಯಯನ ಮಾಡುವ ರೂಢಿಯೇ ಇಲ್ಲದಿರುವುದು. ಇದು ಕೇವಲ ನನ್ನ ಅಭಿಪ್ರಾಯಗಳಲ್ಲಿ ಪುಷ್ಠೀಕರಿಸುವುದು, ಪ್ರಪಂಚದ ಯಾವುದೇ ಭಾಗದಲ್ಲಿ ಮನುಷ್ಯರು ತಾವು ಆಲೋಚಿಸುವ – ಆಲೋಚಿಸಿ ಖುಷಿ ಪಡುವ ಅಥವಾ ಆದಾಯ ಪಡೆಯುವುದಕ್ಕಾಗಿ; ಸಂಭಾವನೆಯ ಅನಿವಾರ್ಯತೆ ಪಡೆಯುವುದಕ್ಕಿಂತ, ಹೆಚ್ಚು ದಿಟವಾದುದು ಏನೂ ಇಲ್ಲ. ಭಾರತವು ಈ ನಿಯಮದಿಂದ ಹೊರತಾದುದಲ್ಲ. ಭಾರತೀಯರಿಗೆ ಹಸಿವಾದಾಗ ಅನ್ನಕ್ಕೆ ಹಣ ಅಪೇಕ್ಷಿಸುವುದಿಲ್ಲ, ಚಳಿಗಾಲದಲ್ಲಿ ಉಣ್ಣೆ ಬಟ್ಟೆ ಧರಿಸಲು ಹಣ ಪಾವತಿ ಕಡ್ಡಾಯವಿಲ್ಲ. ಈಗ ನಮ್ಮ ಮುಂದಿರುವ ವಿಷಯಕ್ಕೆ ಬರೋಣ, ಹಳ್ಳಿಯ ಶಾಲಾ ಶಿಕ್ಷಕರಿಂದ ಅಕ್ಷರ ಅಭ್ಯಾಸ ಮತ್ತು ಸರಳ ಅಂಕಗಣಿತ ಕಲಿಯುತ್ತಿರುವ ಮಕ್ಕಳು ಆ ಶಿಕ್ಷಕನಿಂದ ಯಾವುದೇ ಹಣ ಪಡೆಯುತ್ತಿಲ್ಲ. ಅವನಿಗೆ ಅವರಿಗೆ ಬೋಧಿಸಿದ್ದಕ್ಕೆ ಹಣ ಪಾವತಿಸಲಾಗುತ್ತದೆ. ಹಾಗಾದರೆ, ಅರೇಬಿಕ್ ಮತ್ತು ಸಂಸ್ಕೃತ ಕಲಿಯುವ ಜನರಿಗೆ ಹಣಪಾವತಿಸುವ ಅನಿವಾರ್ಯತೆ ಏಕೆ? ಏಕೆಂದರೆ, ಸಾಕ್ಷಿ ಸಮೇತವಾಗಿ ಹೇಳುವುದಾದರೆ ಇದು ಎಲ್ಲರೂ ಅಭಿಪ್ರಾಯಪಡುವಂತೆ ಸಂಸ್ಕೃತ ಮತ್ತು ಅರೇಬಿಕ್ ಭಾಷೆಗಳು ಅವುಗಳ ಜ್ಞಾನಸಂಪಾದನೆ ಅನುಭವಿಸುವ ಕಷ್ಟಕ್ಕೆ ಪ್ರತಿಫಲ ಕೊಡಲಾರವು. ಅಂತಹ ಎಲ್ಲ ವಿಷಯಗಳು ವ್ಯವಹಾರಿಕ ಸ್ಥಿತಿಗತಿಯ ಪತ್ತೆದಾರಿ ಕಿರುಪರೀಕ್ಷೆಯಾಗಿದೆ.

೨೨. ಮತ್ತೊಂದು ಸಾಕ್ಷಿಯನ್ನೇನು ಬಯಸುತ್ತಿಲ್ಲ; ಒಂದು ವೇಳೆ ಮಗದೊಂದು ಸಾಕ್ಷಿಯ ಅಗತ್ಯವಿದ್ದರೆ, ಸಂಸ್ಕೃತ ಕಾಲೇಜಿನ ಹಳೆಯ ವಿದ್ಯಾರ್ಥಿಗಳು ಕಳೆದ ವರ್ಷ ಸದರಿ ಸಮಿತಿಯ ಮುಂದು ಒಂದು ನಿವೇದನಾ ಅರ್ಜಿಯನ್ನು ಸಲ್ಲಿಸಿದ್ದಾರೆ. ಅರ್ಜಿದಾರರ ಹೇಳಿಕೆಯಂತೆ

ಅವರು ೧೦ ಅಥವಾ ೧೨ ವರ್ಷಗಳು ಕಾಲೇಜಿನಲ್ಲಿ ಅಧ್ಯಯನ ನಡೆಸಿದ್ದಾರೆ ಮತ್ತು ಅವರು ಹಿಂದೂ ಸಾಹಿತ್ಯ ಮತ್ತು ವಿಜ್ಞಾನಗಳಲ್ಲಿ ಜ್ಞಾನ ಸಂಪಾದಿಸಿದ್ದಾರೆಂದು ತಿಳಿಸಿದ್ದಾರೆ. ಅವರು ವಿಷಯ ಪ್ರಾವಿಣ್ಯತೆಯ ಕುರಿತು ಪ್ರಮಾಣ ಪತ್ರ ಪಡೆದಿದ್ದಾರೆ ಮತ್ತು ಈ ಎಲ್ಲದರಿಂದ ದೊರೆತ ಫಲವೇನು? ಅವರೇ ಹೇಳುವಂತೆ "ನಾವು ಯೋಗ್ಯತಾ ಪತ್ರಗಳನ್ನು ಪಡೆದಿದ್ದರೂ ನಿಮ್ಮ ಗೌರವಾನ್ವಿತ ಸಮಿತಿಯ ದಯಾ ಸಹಾಯವಿಲ್ಲದ ನಮ್ಮ ಸ್ಥಿತಿ ಸ್ವಲ್ಪವೂ ಉತ್ತಮಗೊಳ್ಳಲಾರದು; ನಮ್ಮ ದೇಶಬಾಂಧವರಿಗೆ ನಾವು ಸಾಮಾನ್ಯವಾಗಿ ಭಿನ್ನತೆಯನ್ನು ಕಾಪಾಡಿಕೊಂಡು ನೆರವಿನ ನಂಬಿಕೆಯನ್ನೇ ತ್ಯಜಿಸಿದ್ದೇವೆ" ಆದುದರಿಂದ ಅವರು ಬೇಡುವುದೇನೆಂದರೆ : ಅವರು ಸರ್ಕಾರದ ಅಧೀನ ಹುದ್ದೆಗಳಿಗೆ ಆ ಹುದ್ದೆಗಳು ಹೆಚ್ಚಿನ ಘನತೆಯೇನೂ ಅಲ್ಲ? ಅಥವಾ ಹೆಚ್ಚಿನ ವರಮಾನದ ಹುದ್ದೆಗಳೂ ಅಲ್ಲ, ಆದರೆ ಅಂತಹವುಗಳು ಅವರ ಉಳಿವಿಗಾಗಿ ಗೌರ್ನರ್ ಜನರಲ್‌ರವರಿಂದ ಶಿಫಾರಸ್ಸುಗೊಳಪಡಬಹುದು. ಅವರು ಹೇಳುವುದೇನೆಂದರೆ, "ನಮಗೆ ಜೀವನ ಸಾಗಿಸುವ ಆಧಾರ ಮಾರ್ಗಗಳು ಬೇಕು", ಸಭ್ಯ ಬದುಕಿಗಾಗಿ ಮತ್ತು ನಮ್ಮ ಪ್ರಗತಿ ಉತ್ತಮಗೊಳಿಸಲು, ಅದನ್ನು ಸರ್ಕಾರದ ಸಹಾಯವಿಲ್ಲದೆ ನಮ್ಮಿಂದ ಸಾಧಿಸಲು ಸಾಧ್ಯವೇ ಇಲ್ಲ. ಈ ಸರ್ಕಾರಗಳಿಂದಲೇ ನಾವು ನಮ್ಮ ಬಾಲ್ಯದಿಂದಲೇ ಅಕ್ಷರಸ್ಥರಾಗಿದ್ದೇವೆ". ಅವರು ಮನ ಕರಗುವಂತೆ ಮರುಕದಿಂದ ನಿವೇದನಾ ಅರ್ಜಿಯನ್ನು ಕೊನೆಗೊಳಿಸಿದ್ದಾರೆ. ಅದೇನೆಂದರೆ ಓದುವಾಗ ತುಂಬಾ ಉದಾರದಿಂದ ನಡೆಸಿಕೊಂಡ ಸರ್ಕಾರ ನಮ್ಮನ್ನು ಉದಾಸೀನ ಮಾಡುವುದು ತಿರಸ್ಕಾರ ಮಾಡಿ ಕೈಬಿಡುವುದಿಲ್ಲ"ವೆಂದು ಅವರು ಖಂಡಿತವಾಗಿ ನಂಬಿದ್ದಾರೆ.

೨೩. ನಾನು ಸರ್ಕಾರಗಳಿಗೆ ಪರಿಹಾರಕ್ಕಾಗಿ ಬಂದ ಅರ್ಜಿಗಳನ್ನು ಗಮನಿಸಿದ್ದೇನೆ. ಆ ಎಲ್ಲ ಅರ್ಜಿಗಳು; ಅದರಲ್ಲಿ ಬಹಳಷ್ಟು ಮೂರ್ಖತನದಿಂದ ಕೂಡಿದವು, ಕೆಲವು ನಷ್ಟಗಳಾಗಿವೆಯೆಂದೆಣಿಸಿ, ನಷ್ಟ ಸರಿದೂಗಿಸುವಂತವಾಗಿರುತ್ತವೆ. ಮತ್ತು ಕೆಲವು ತಪ್ಪುಗಳಿಗೆ ದಂಡವಿಧಿಸಿರುತ್ತದೆ. ಇವರು ಖಂಡಿತವಾಗಿಯೂ ಒಟ್ಟು ಶಿಕ್ಷಣ ಪಡೆದು ಪರಿಹಾರಕ್ಕಾಗಿ ಒತ್ತಾಯ ಮಾಡುತ್ತಿರುವ ಮೊಟ್ಟಮೊದಲ ಅರ್ಜಿದಾರರು. ೧೨ ವರ್ಷಗಳ ಕಾಲ ಸಾರ್ವಜನಿಕವಾಗಿ ಬೆಂಬಲ ಪಡೆದಿದ್ದಕ್ಕಾಗಿ ಈ ಪ್ರಪಂಚಕ್ಕೆ ಉತ್ತಮ ಸಾಹಿತ್ಯ ಮತ್ತು ವಿಜ್ಞಾನಗಳನ್ನು ಕಲಿಸಿ ಸಜ್ಜುಗಳಿಸಿ ಫಲ ಬಿಡುವಂತೆ ಕಳಿಸಿದ್ದಕ್ಕಾಗಿ ಈ ಬೇಡಿಕೆಗಳು ಅವರು ಅವರ ಘಾಸಿಗೊಳಿಸಿದ ಶಿಕ್ಷಣವನ್ನು ಪ್ರತಿನಿಧಿಸುತ್ತಾರೆ. ಅದು ಆಗ ಸರ್ಕಾರದಿಂದ ಪರಿಹಾರ ಪಡೆಯುವ ಅಧಿಕಾರವನ್ನು ಕೊಡುತ್ತದೆ. ಶೈಕ್ಷಣಿಕವಾಗಿ ಆದ ಗಾಯಕ್ಕೆ ಅದು ಪರಿಹಾರ ವೇತನವನ್ನು ಬೇಸರದ ಕಾರಣದಲ್ಲಿ ಪಾವತಿಸುವ ಅಲ್ಪ ಪರಿಹಾರವಾಗಿರುವುದು ಮತ್ತು ನಾನು ಅವರನ್ನು ಅದು ಸರಿಯಾದುದಾಗಿದ್ದರೆ ಅನುಮಾನಿಸುವುದಿಲ್ಲ. ಅವರು ಅವರ ಅತ್ಯುತ್ತಮ ಜೀವನಾವಧಿಯನ್ನು ಕಲಿಕೆಯಲ್ಲಿ ನಿರುಪಯುಕ್ತವಾಗಿ ಕಳೆದಿರುವರು ಮತ್ತು ತುಂಬಾ ಜೋಕೆಯಿಂದ ಜ್ಞಾನ ಸಂಪಾದನೆ ಮಾಡಿದರೂ ಅವರಿಗೆ ಗೌರವವೂ ಇಲ್ಲ; ಅನ್ನವೂ ಇಲ್ಲ. ಖಂಡಿತವಾಗಿಯೂ ನಾವು ಈ ವ್ಯಕ್ತಿಗಳನ್ನು ನಿರುಪಯುಕ್ತ ಮತ್ತು ಬಡವರನ್ನಾಗಿ ಮಾಡುವ, ವೆಚ್ಚವನ್ನು ಉಳಿತಾಯ ಮಾಡುವ ಅವಕಾಶವನ್ನು ಹೊಂದಿದ್ದೇವೆ. ರಾಜ್ಯದ ಸಣ್ಣ ಶುಲ್ಕದಲ್ಲಿ ಖಂಡಿತವಾಗಿಯೂ ಈ ಜನರು ಸಾರ್ವಜನಿಕರಿಗೆ ಹೊರೆಯಾಗುವಂತೆ ಬೆಳೆಯುತ್ತಾರೆ. ಅವರ ನೆರೆಹೊರೆಯವರ ತಿರಸ್ಕಾರ ಯೋಗ್ಯ ವಸ್ತುಗಳಾಗುತ್ತಾರೆ; ಆದರೆ ಅದು ನಮ್ಮ ರಾಜನೀತಿಯಾಗಿದೆ. ನಾವುಸುಳ್ಳು ಮತ್ತು ಸತ್ಯದ ಮಧ್ಯದ ಚರ್ಚೆಯಲ್ಲಿ ತಟಸ್ಥ

ನಿಲುವುಗಳನ್ನು ತೆಗೆದುಕೊಂಡಿಲ್ಲ. ನಾವು ಸ್ಥಳೀಯರನ್ನು ಅವರ ಸ್ವಂತ ಅನುವಂಶಿಕ ಪೂರ್ವಾಭಿಪ್ರಾಯಗಳನ್ನು ಬಿಡುವಂತಹ ಅಡಕ ಉದ್ದೇಶಗಳೂ ಇಲ್ಲ. ತಟಸ್ಥ ಕ್ಲಿಷ್ಟತೆಗಳು ಪೂರ್ವದಲ್ಲಿನ ಸದೃಢ ವಿಜ್ಞಾನದ ಪ್ರಗತಿಗೆ ಅಡೆತಡೆಗಳಾಗುವುವು. ನಾವು ನಮ್ಮ ಸ್ವಂತ ನಿರ್ಮಾಣದ ಮಹಾನ್ ಕಷ್ಟಗಳನ್ನು ಸಂಕಲಿಸಿದರೆ; ದಾನದತ್ತಿಗಳು ಮತ್ತು ವೇತನ ಕಂತುಗಳು, ಸತ್ಯವನ್ನು ಪ್ರಸಾರ ಮಾಡಲು ಸಹ ಕೊಡಬಾರದು. ನಾವು ಮಿಥ್ಯ ಪಠ್ಯಗಳ ಮತ್ತು ತತ್ತ್ವಶಾಸ್ತ್ರಗಳ ವಿಷಯದಲ್ಲಿ ಧಾರಾಳಿಗಳಾಗಿದ್ದೇವೆ.

೨೪. ಈ ಪ್ರಕಾರವಾಗಿ ಕಾರ್ಯಭಾರ ಮಾಡುತ್ತಾ, ನಾವು ಭಯಪಡುವಂತಹ ಕೆಡುಕನ್ನ ಸೃಜಿಸಿದ್ದೇವೆ. ನಾವು ಅರೇಬಿಕ್ ಮತ್ತು ಸಂಸ್ಕೃತ ಕಾಲೇಜುಗಳ ಮೇಲೆ ಏನನ್ನು ವ್ಯಯಿಸುತ್ತೇವೆ. ಅದು ಕೇವಲ ಪರಿಹಾರವಿಲ್ಲದ ಪೂರ್ಣ ನಷ್ಟ ಮಾತ್ರವಲ್ಲದೆ ಅದರ ನೈಜ ಕಾರಣಕ್ಕೆ ಈ ಕೊಡುಗೆಯ ಹಣ ಹಾದಿ ತಪ್ಪಿದವರ ಏಳಿಗೆಗೆ ಪಾವತಿಸಿದಂತೆ, ಇದು ಮುಂದುವರೆದು ಅಸಹಾಯಕ ಪದವಿ ಅಪೇಕ್ಷಿತರಲ್ಲಿ ಶೈಕ್ಷಣಿಕ ಯೋಜನೆಗಳ ಪ್ರಯೋಜನಗಳ ವಿರುದ್ಧ ಕೂಗಿನ ಉದಯಕ್ಕೆ ಪ್ರಚೋದಿಸುವವರ ಗುಬ್ಬಿಗೂಡಾಗಿ ರೂಪಾಂತರಗೊಳ್ಳುತ್ತದೆ. ನಾನು ಶಿಫಾರಸ್ಸು ಮಾಡುವ 'ಬದಲಾವಣೆಗೆ' ಸ್ಥಳೀಯರಲ್ಲಿ ಯಾವುದೇ ವಿರೋಧ ಬಂದರೆ ಆ ವಿರೋಧವು ನಮ್ಮ ಸ್ವಂತ ವ್ಯವಸ್ಥೆಯ ಮೇಲೆ ಪರಿಣಾಮ ಬೀರಬಹುದು. ಇದು ನಮ್ಮ ಕಾಲೇಜುಗಳಲ್ಲಿ : ನಮ್ಮ ತರಬೇತಿ ಮತ್ತು ವೇತನಗಳಿಂದ ಬೆಂಬಲ ಪಡೆದ ವ್ಯಕ್ತಿಗಳಿಂದ ನೇತೃತ್ವ ವಹಿಸಲ್ಪಡುತ್ತದೆ. ಈಗ ನಾವು ಪ್ರಸ್ತುತ ಸಾಗುವ ಮಾರ್ಗದಲ್ಲಿ ನಾವು ಸುದೀರ್ಘವಾಗಿ ಶ್ರಮಪಡುವುದು ಬಹಳ ಭಯಂಕರ ದಿಗಿಲು ಹುಟ್ಟಿಸುವ ಘಟನೆಯ ಪ್ರತಿರೋಧವೂ ಆಗಿರುವುದು. ನಾವು ಪಾವತಿಸುತ್ತಿರುವ ಹೊಸ ನೇಮಕಾತಿಗೊಂಡ ನೌಕರರಿಂದ ಪ್ರತಿವರ್ಷ ಬಲಪಡಿಸುತ್ತಿರಬಹುದಾಗಿದೆ. ಸ್ಥಳೀಯ ಸಮಾಜದಿಂದ ನಾವು ಭಯಪಡುವಷ್ಟು ತೊಂದರೆಗಳನ್ನು ಹೊಂದಿರುವುದಿಲ್ಲ. ನಾವು ಹೊಂದಿರುವ, ನಾವೇ ಸೃಜಿಸಿ ಬಲ ತುಂಬಿರುವ ಸಾಧನಗಳಾದ ಪೌರಾಸ್ತ್ಯ ಹಿತಬಾಧ್ಯತೆಗಳಿಂದಾಗಿ ಸಕಲ ರೀತಿಯ ಗುಸು ಗುಸ ಗುಸುಗಳು ಬಂದಿರಬಹುದು.

೨೫. ಇಲ್ಲಿ ಇನ್ನೊಂದು ವಾಸ್ತವವಿದೆ. ಅದನ್ನು ಸಾಕ್ಷೀಕರಿಸಲಿರುವ ಏಕೈಕ ತೃಪ್ತಿಕರವಾದ ಸಾಧನ ಅಂದರೆ : ಸ್ಥಳೀಯರ ಭಾವನೆ ಅದರಷ್ಟಕ್ಕೆ ಬಿಟ್ಟು ಬಿಟ್ಟಾಗ ಪ್ರಾಚೀನ ಪದ್ಧತಿಯ ಪ್ರತಿನಿಧಿಸುತ್ತಿರುವುದರ ಬೆಂಬಲಿಗರಲ್ಲದಿರಬಹುದು. ಸಮಿತಿಯು ಅರೇಬಿಕ್ ಮತ್ತು ಸಂಸ್ಕೃತ ಮುದ್ರಣಗಳಲ್ಲಿ ಒಂದು ಲಕ್ಷ ರೂಪಾಯಿಗಳಿಗೂ ಹೆಚ್ಚಿನ ಹಣವನ್ನು ವ್ಯಯ ಮಾಡಲು ಸೂಕ್ತ ಚಿಂತನೆಯನ್ನು ಮಾಡಿದೆ. ಆ ಮುದ್ರಿತ ಪುಸ್ತಕಗಳಿಗೆ ಗ್ರಾಹಕರೇ ಇಲ್ಲದಿರುವುದು, ಒಂದು ಪುಸ್ತಕ ಮಾರುವುದು ತುಂಬಾ ಪ್ರಯಾಸಕರವಾದುದು. ೨೩ ಸಾವಿರ ಸಂಪುಟಗಳು ಅವುಗಳಲ್ಲಿ ಬಹಳಷ್ಟು ಮುಖಪುಟಗಳು ಮತ್ತು ಚೌಕವಾಗಿ ಮಡಚಿದ ಹಾಳೆಗಳು (Folio and Quqrtos) ಗ್ರಂಥಾಲಯಗಳನ್ನು ತುಂಬುತ್ತವೆ ಅಥವಾ ಈ ಕಾರ್ಯಕಾರಿ ಮಂಡಳಿಯ ಸುಸ್ಥಿತಿಯಲ್ಲಿಲ್ಲದ ವಸ್ತುಗಳಿಂದ ತುಂಬಿದ ಉಗ್ರಾಣವನ್ನು ನಿಜವಾಗಿ ಪುಸ್ತಕಗಳಿಂದ ತುಂಬುವುದು. ಈ ಸಮಿತಿಯು ಅವರಪೌರಾಸ್ತ್ಯ ಸಾಹಿತ್ಯದ ದೊಡ್ಡ ಸಂಗ್ರಹವನ್ನು ತೊಲಗಿಸಲು ಪುಸ್ತಕಗಳನ್ನು ವಿತರಣಾ ಸಮಿತಿಯನ್ನು ರಚಿಸಿದೆ. ಆದರೆ ಅವು ಮುದ್ರಣಗೊಂಡಷ್ಟು ವೇಗವಾಗಿ ವಿತರಣೆಯಾಗುತ್ತಿಲ್ಲ. ವರ್ಷ ಒಂದಕ್ಕೆ ೨೦ ಸಾವಿರ

ರೂಪಾಯಿಗಳು ಖರ್ಚು ಮಾಡಲಾಗುತ್ತದೆ. ಈಗಾಗಲೇ ಇರುವ ಪುಸ್ತಕ ಸಂಗ್ರಹಕ್ಕೆ ತಾಜಾ ನಿಷ್ಫಲವಾದ ಕಾಗದದ ಹಾಳೆಗಳು ಹೊಸದಾಗಿ ಸೇರ್ಪಡೆಯಾಗುತ್ತಿರುವುದು ಪ್ರತಿಯೊಬ್ಬನು ಯೋಚಿಸಲೇಬೇಕು. ಈಗಾಗಲೇ ಹೇರಳವಾಗಿರುವುದಕ್ಕೆ ವ್ಯಯ ಮಾಡುತ್ತಿರುವುದುಹೆಚ್ಚೆಚ್ಚು ೬೦ ಸಾವಿರ ರೂ.ಗಳು ಕಳೆದ ೩ ವರ್ಷಗಳಲ್ಲಿ ಈ ರೀತಿಯಲ್ಲೇ ಖರ್ಚಾಗಿದೆ. ಈ ಮೂರು ವರ್ಷಗಳಲ್ಲಿ ಅರೇಬಿಕ್ ಮತ್ತು ಸಂಸ್ಕೃತ ಪುಸ್ತಕಗಳ ಮಾರಾಟ ಒಂದು ಸಾವಿರ ರೂ.ಗಳ ನಿವ್ವಳವನ್ನು ಗಳಿಸಲಿಲ್ಲ. ಇದೇ ಅವಧಿಯಲ್ಲಿ ಪ್ರತಿ ವರ್ಷ ಶಾಲಾ ಪುಸ್ತಕ ಸಮಿತಿಯು ಏಳು ಅಥವಾ ಎಂಟು ಸಾವಿರಇಂಗ್ಲಿಷ್ ಸಂಪುಟಗಳನ್ನು ಮಾರಾಟ ಮಾಡುತ್ತಲಿದೆ ಮತ್ತು ಅದು ತಾನು ಖರ್ಚು ಮಾಡಿದ ಹಣದ ಮೇಲೆ ಮುದ್ರಣ ವೆಚ್ಚವನ್ನು ಸಂದಾಯಿಸಿ ಶೇಕಡ ೨೦ರಷ್ಟು ಲಾಭವನ್ನು ಪಡೆಯುತ್ತಿದೆ.

೩೦. ವಾಸ್ತವವೆಂದರೆ ಹಿಂದೂ ಕಾನೂನು ಪ್ರಧಾನವಾಗಿ ಸಂಸ್ಕೃತ ಪುಸ್ತಕಗಳ ಕಲಿಕೆಯಿಂದಿಡಿದು ಮತ್ತು ಮಹಮದೀಯ ಕಾನೂನು ಅರೇಬಿಕ್ ಪುಸ್ತಕಗಳ ಅಭ್ಯಾಸದಿಂದಾದುದು ಎಂದು ಹೆಚ್ಚು ಲಂಬಿಸಿ ವಿಸ್ತಾರವಾಗಿ ಹೇಳಲಾಗಿದೆ. ಆದರೆ ಆ ಪ್ರಶ್ನೆಗೆ ಸ್ವಲ್ಪವೂ ಹೊಂದಿಕೊಂಡಂತೆ ಕಾಣುವುದಿಲ್ಲ. ನಾವುಗಳು ಭಾರತೀಯ ಕಾನೂನುಗಳನ್ನು ಜೀರ್ಣಿಸಿಕೊಳ್ಳಲು ಮತ್ತು ಗೊತ್ತು ಮಾಡಿಕೊಳ್ಳಲು ಸಂಸತ್‌ನಿಂದ ಆದೇಶಿಸಲ್ಪಟ್ಟವರು. ಒಂದು ಕಾನೂನು ಸಮಿತಿಯ ಸಹಾಯವನ್ನು ನಮಗೆ ಈ ಉದ್ದೇಶಕ್ಕಾಗಿ ಕೊಡಲ್ಪಟ್ಟಿದೆ. ಎಷ್ಟು ಜರೂರಾಗಿ ನ್ಯಾಯ ಸೂತ್ರಗಳು (Codes) ಜಾರಿಯಾಗುವವೂ ಶಾಸ್ತ್ರಗಳಿಗೆ, ಮುನ್ಸಿಪಾಲರಿಗೆ ಮತ್ತು ಅಮೀನರ ಮುಂದೆ ನಿಷ್ಪ್ರಯೋಜನವಾಗುವುವು. ನಾನು ನಂಬಿರುವ ಮತ್ತು ಆಶಿಸುವುದೇನೆಂದರೆ ಸಂಸ್ಕೃತ ಕಾಲೇಜ್ ಮತ್ತು ಮದ್ರಸಾಗಳಲ್ಲಿ ಪ್ರವೇಶ ಪಡೆಯುತ್ತಿರುವ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಪೂರ್ಣಗೊಳಿಸುವುದಕ್ಕೂ ಮೊದಲು ಮಹಾನ್ ಕಾರ್ಯ ಪೂರ್ಣಗೊಳ್ಳಬೇಕು. ಇದು ಉದಯೋನ್ಮುಖ ವಸ್ತುಸ್ಥಿತಿ ದೃಷ್ಟಿಕೋನವುಳ್ಳ ಪೀಳಿಗೆಗಳನ್ನು ನಾವು ಅವರು ಪ್ರಾಯಕ್ಕೆ ತಲುಪುವುದಕ್ಕೆ ಮೊದಲೇ ಬದಲಿಸಬೇಕು.

೩೧. ಆದರೆ ಇಲ್ಲಿ ಮತ್ತೊಂದು ಹೆಚ್ಚು ಅಸಮರ್ಥನೀಯವಾದವೊಂದಿದೆ. ಅದು ಹೇಳುವುದೇನೆಂದರೆ, ಸಂಸ್ಕೃತ ಮತ್ತು ಅರೇಬಿಕ್‌ಗಳು ಭಾಷೆಗಳಾಗಿದ್ದು ಅವುಗಳಲ್ಲಿ ನೂರು ಮಿಲಿಯನ್‌ಗಟ್ಟಲೆ ಪುಣ್ಯ ಗ್ರಂಥಗಳು ಬರೆಯಲ್ಪಟ್ಟವೆ ಮತ್ತು ಅವುಗಳ ಆ ಕಥನಗಳು ವಿಚಿತ್ರ ಪ್ರೋತ್ಸಾಹಕ್ಕೆ ಅಧಿಕಾರವಾಣಿಯಾಗಿ ಬಿಂಬಿತವಾಗುವುವು. ಭಾರತದಲ್ಲಿರುವ ಬ್ರಿಟೀಷ್ ಸರ್ಕಾರದ ಕರ್ತವ್ಯದ ಅಭಿಪ್ರಾಯದಂತೆ ಕೇವಲ ಸಹನೆಯಿಂದಿರುವುದಲ್ಲ. ಆದರೆ ಎಲ್ಲ ಧಾರ್ಮಿಕ ಪ್ರಶ್ನೆಗಳ ವಿಷಯದಲ್ಲಿ ತಟಸ್ಥವಾಗಿರುವುದು. ಆದರೆ ಒಂದು ಸಾಹಿತ್ಯಕ ಅಧ್ಯಯನದ ಉತ್ತೇಜನಕ್ಕೆ ಒಂದು ಸಣ್ಣ ವಾಸ್ತವ ಮೌಲ್ಯವನ್ನು ಒಪ್ಪಬೇಕಾಗಬಹುದು. ಏಕೆಂದರೆ ಕೇವಲ ಆ ಸಾಹಿತ್ಯ ಬಹಳ ಮಹತ್ವದ ವಿಷಯಗಳನ್ನಾಧರಿಸಿದ ತುಂಬಾ ಗಂಭೀರ ತಪ್ಪುಗಳನ್ನು ಒತ್ತಿ ಒತ್ತಿ ಹೇಳುತ್ತದೆ. ನೈತಿಕವಾಗಿ, ವೈಚಾರಿಕವಾಗಿ ಸಾಗುವ ಪಥದಲ್ಲಿ ಸಮನ್ವಯತೆ ಕಷ್ಟಸಾಧ್ಯ. ಅಥವಾ ತಟಸ್ಥವಾಗಿ ನಾವು ಒಪ್ಪುವಂತೆ ಪವಿತ್ರವಾದ ಸಂಗ್ರಹಗಳಾಗಿರಬೇಕು. ಇದು ಒಳಗೊಳ್ಳುವುದೇನೆಂದರೆ : ಒಂದು ಭಾಷೆ ಉಪಯುಕ್ತ ಶುಷ್ಕ ಜ್ಞಾನವಾಗಿರಬಹುದು. ನಾವು ಬೋಧಿಸಲೇಬೇಕು. ಏಕೆಂದರೆ ಇದು ಮೌಢ್ಯದ ವಿಲಕ್ಷಣ ಪ್ರತಿಫಲವಾಗಿದೆ. ನಾವು ಸುಳ್ಳು ಇತಿಹಾಸವನ್ನು, ತಪ್ಪು ಖಗೋಳ ವಿಜ್ಞಾನವನ್ನು, ಅಬದ್ಧ

ವೈದ್ಯಶಾಸ್ತ್ರವನ್ನು ಬೋಧಿಸಬೇಕು. ಏಕೆಂದರೆ ನಾವು ಅವುಗಳನ್ನು ಅಸಂಬದ್ಧ ಧರ್ಮಾಚರಣೆಗಳ ಜೊತೆಗಾರರಲ್ಲಿ ಕಂಡುಕೊಂಡಿದ್ದೇವೆ. ನಾವು ಸ್ಥಳೀಯ ಸಾರ್ವಜನಿಕ ಉತ್ತೇಜನವನ್ನು ಕೊಡುವುದರಿಂದ ಹಿಂದೆ ಸರಿಯುವವೆ : ಸ್ಥಳೀಯರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರ ಮಾಡುವುದರಲ್ಲಿ ನಿರತರಾದವರಿಗೆ, ಯಾವುದೇ ಪ್ರೋತ್ಸಾಹ ದೊರೆಯುವುದಿಲ್ಲ. ಆಡನ್ನು ಕೊಂದ ಪಾಪಕ್ಕೆ ಪ್ರಾಯಶ್ಚಿತ ಮಾಡಿಕೊಳ್ಳಲು ಅವರು ಯಾವ ವೇದಪಠ್ಯ ಪಠಿಸಬೇಕು? ಕತ್ತರಿಯನ್ನು ಮುಟ್ಟಿದ್ದಕ್ಕೆ ಶುದ್ಧೀಕರಣ ಮಾಡಿಕೊಳ್ಳುವ ಬಗೆಯನ್ನು ಸರ್ಕಾರಗಳ ವೆಚ್ಚದಲ್ಲಿ ಬೋಧಿಸಿ ವ್ಯಕ್ತಿಯ ಯೌವ್ವನವನ್ನು ರಾಜ್ಯಾದಾಯವಾಗಿ ಪಡೆದ ಕಂದಾಯದ ಹಣದಿಂದ ಹಾಳು ಮಾಡುವ ಕಾರ್ಯಗಳಿಂದ ನಾವು ವಿಮುಖರಾಗುವೆವು.

೩೨. ಪೌರಾಸ್ತ್ಯ ಸಾಹಿತ್ಯ ಅಭ್ಯಾಸಿಗಳ ಪರವಿರುವವರಲ್ಲಿ ಈ ಭಾವನೆ ಉಂಟೆಂದು ಭಾವಿಸಿಕೊಳ್ಳುವುದೇನೆಂದರೆ : ಈ ದೇಶದ ಸ್ಥಳೀಕ ಕೇವಲ ಇಂಗ್ಲಿಷ್‌ನ ಬಗ್ಗೆ ಆಳದಲ್ಲಿ ಅಲ್ಪಸ್ವಲ್ಪ ತಿಳಿವಳಿಕೆಗಿಂತ ಹೆಚ್ಚಿನದೇನನ್ನೂ ಗಳಿಸಿಕೊಳ್ಳಲು ಅಸಾಧ್ಯವೆಂದು. ಅವರು ಇದನ್ನು ಸಿದ್ಧ ಮಾಡಿ ತೋರಿಸುವ ಪ್ರಯತ್ನ ಮಾಡುವುದಿಲ್ಲ. ಆದರೆ ಅವರು ಎಂದೆಂದಿಗೂ ಆ ವಿಷಯದಲ್ಲಿ ಮೂಗು ತೂರಿಸುವುದಿದೆ. ಅವರು ಅವರ ವಿರೋಧಿಗಳು ಶಿಫಾರಸ್ಸು ಮಾಡುವ ಕೇವಲ ಕಾಗುಣಿತ ಆಧಾರಿತ ಪುಸ್ತಕ ಶಿಕ್ಷಣವನ್ನು ವಿನ್ಯಾಸಗೊಳಿಸುವುದು. ಅವರು ಇದನ್ನು ತಿರಸ್ಕರಿಸಲು ಸಾಧ್ಯವಿಲ್ಲವೆಂದು ಸಹಿಸಿಕೊಳ್ಳುವುದರ; ಅದು ಎತ್ತುವ ಪ್ರಶ್ನೆಯಾದ ಹಿಂದುಗಳ ಮತ್ತು ಅರೇಬಿಯನ್ನರ ವಿಜ್ಞಾನ ಮತ್ತು ಸಾಹಿತ್ಯಗಳ ಅತ್ಯುತ್ತಮ ಜ್ಞಾನ ಕುರಿತಾದುದು ಒಂದು ಕಡೆ ಮತ್ತು ಇಂಗ್ಲಿಷಿನ ಮೂಲ ಪಾಠಗಳ ಅತಿ ಭೌತಿಕ ವಿಜ್ಞಾನ ಕುರಿತ ಪ್ರಶ್ನೆಗಳು ಮತ್ತೊಂದು ಅಡಗಿವೆ. ಇದು ಕೇವಲ ಭಾವಿಸಿಕೊಳ್ಳುವ ಪ್ರಕ್ರಿಯೆಯಲ್ಲ; ಆದರೆ ಅದು ಊಹಿಸುವ ಪ್ರಕ್ರಿಯೆ ಎಲ್ಲ ಬಗೆಯ ವೈಚಾರಿಕತೆ ಮತ್ತು ಅನುಭಾವಕ್ಕೆ ವಿರುದ್ಧವಾದುದು. ನಮಗೆ ತಿಳಿದಿರುವಂತೆ, ಎಲ್ಲ ವಿದೇಶಿಯರು ನಮ್ಮ ಭಾಷೆಯನ್ನು ಪರಿಪೂರ್ಣವಾಗಿ ಕಲಿಯುವರು. ಅದು ಎಲ್ಲ ಬಗೆಯ ಕ್ಲಿಷ್ಟಕರವಾದ ಜ್ಞಾನ ಸಂಪಾದನೆಗೆ ಸಹಕಾರಿಯಾಗುವ ಪರಿಪಕ್ವವಾದ ಸ್ವಾದವನ್ನು ಹೊಂದಿದೆ; ನಮ್ಮ ಹೆಚ್ಚು ನಾಜೂಕಿನ, ಗೌರವ ಪಡೆದ, ಬರಹಗಾರರು ದೇಶೀ ಭಾಷೆಯನ್ನು ಬಳಸಿದರೂ, ಇಲ್ಲಿ ಸ್ಥಳೀಯ ಪಟ್ಟಣಗಳಲ್ಲಿ ವಾಸಿಸುವ ಸ್ಥಳೀಯರು ಆಂಗ್ಲಭಾಷೆಯಲ್ಲಿ ಕರಾರುವಕ್ಕಾಗಿ ನಿರರ್ಗಳ ಮತ್ತು ನಿಷ್ಕರ್ಷತೆಯಿಂದ ವೈಜ್ಞಾನಿಕ ಮತ್ತು ರಾಜಕೀಯ ಚರ್ಚೆಗಳಲ್ಲಿ ಸಮರ್ಥವಾಗಿರುವರು. ನಾನು ಈ ಒಂದು ಪ್ರಶ್ನೆಯನ್ನು ಆಲಿಸಿದ್ದೇನೆ; ಅದನ್ನಾದರಿಸಿಯೇ ನಾನು ಬರೆಯುತ್ತಿರುವುದು. ಒಬ್ಬ ಸ್ಥಳೀಯ ಬುದ್ಧಿವಂತ ಗಣ್ಯರೊಟ್ಟಿಗಿನ ಚರ್ಚೆಯಲ್ಲಿ ಔದಾರ್ಯದಿಂದ ಮತ್ತು ಬುದ್ಧಿಶಕ್ತಿಯಿಂದ ಅದು ಯಾವುದೇ ಸಾರ್ವಜನಿಕ ಶಿಕ್ಷಣ ಸಮಿತಿಯ ಸದಸ್ಯನಿಗೆ ವಿಶ್ವಾಸ ಹೆಚ್ಚಿಸಬಹುದಾಗಿದೆ. ನಿಜವಾಗಿಯೂ ಇದನ್ನು ಪತ್ತೆ ಹಚ್ಚಲು ಅಸಹಜವೆನಿಸುವುದು; ಈ ಏಷ್ಯಾಖಂಡದ ಸಾಹಿತ್ಯಿಕ ವಲಯಗಳಲ್ಲಿಯು ಸಹ, ಯಾವುದೇ ವಿದೇಶಿಯ ಇಂಗ್ಲೀಷಿನಲ್ಲಿ ಅವನ ಭಾವನೆಗಳನ್ನು ಹೆಚ್ಚಿನ ಅನುಕೂಲ ಪಡೆದು ಮತ್ತು ಸರಿಪಡಿಸಿಕೊಂಡು ಅವನಷ್ಟಕ್ಕೆ ಅಭಿವ್ಯಕ್ತಿಸಿದರೆ; ನಾನು ಅನೇಕ ಹಿಂದುಗಳಲ್ಲಿ ಕಂಡಂತೆ. ನಾನು ಊಹಿಸಿದಂತೆ ಒಂದು ಸಮಾಧಾನದ ಸಂಗತಿಯೆಂದರೆ ನಾನು ಭಾವಿಸುವಂತೆ, ಇಂಗ್ಲಿಷ್‌ನವನಿಗೆ ಗ್ರೀಕ್ ಭಾಷೆ ಕಷ್ಟವಾದಂತೆ ಹಿಂದುಗಳಿಗೆ ಇಂಗ್ಲಿಷ್ ಭಾಷೆ ಕಷ್ಟವೆಂದು ಭಾವಿಸುವ ಯಾರೂ ಇಲ್ಲದಿರುವುದು. ಆದಾಗ್ಯೂ ನಮ್ಮ ಅದೃಷ್ಟಹೀನ ಸಂಸ್ಕೃತ ಕಾಲೇಜಿನಲ್ಲಿ ಉತ್ತೀರ್ಣವಾದ ವಿದ್ಯಾರ್ಥಿಗಳಿಗಿಂತಲೂ ಕಡಿಮೆ

ಅವಧಿಯಲ್ಲಿ ಕಲಿತ ಬುದ್ಧಿವಂತ ಇಂಗ್ಲಿಷ್ ಯುವಕ ಅತ್ಯುತ್ತಮ ಗ್ರೀಕ್ ಲೇಖಕರ ರಚನೆಗಳನ್ನು ಸಂತೋಷದಿಂದ ಓದಿ ಆನಂದಿಸಬಲ್ಲ. ಹೆರೋಡಾಟಸ್ ಮತ್ತು ಸೋಪೊಕ್ಲಸ್‌ನ ಕೃತಿಗಳನ್ನು ಒಬ್ಬ ಇಂಗ್ಲಿಷ್ ಯುವಕ ಓದಲು ತೆಗೆದುಕೊಳ್ಳುವ ಕಾಲದ ಅರ್ಧಕ್ಕಿಂತ ಕಡಿಮೆ ಅವಧಿಯಲ್ಲಿ ಒಬ್ಬ ಹಿಂದು ಯುವಕ ಹ್ಯೂಮ್ ಮತ್ತು ಮಿಲ್ಟನ್‌ನ ಕೃತಿಗಳನ್ನು ಓದುವಂತಾಗಬೇಕು.

೩೩. ನಾನು ಈವರೆಗೆ ಹೇಳಿದುದ್ದನ್ನು ಸಾರಾಂಶಿಕರಿಸಿ ಮುಕ್ತಾಯ ಮಾಡುವುದಾದರೆ ನನಗಿನಿಸಿದಂತಹ ಸ್ಪಷ್ಟನೆ ಏನೆಂದರೆ; ೧೮೧೩ರ ಸಂಸತ್ತಿನ ಕಾಯಿದೆಯಿಂದ ನಾವು ಯಾವುದೇ ಅಡರು ತೊಡರುಗಳಿಗೆ ತುತ್ತಾಗಿಲ್ಲ. ನಾವು ಯಾವುದೇ ಭಾಷಾ ವಾಗ್ದಾನದ ಅಭಿವ್ಯಕ್ತಿಗೆ ಅಥವಾ ನೈಜಾಭಿಪ್ರಾಯ ಧ್ವನಿತವಾಗುವುದರಿಂದ ತೊಂದರೆ ಅನುಭವಿಸಿಲ್ಲ. ನಾವು ಆಯ್ಕೆ ಮಾಡಿದಂತೆ, ನಮ್ಮ 'ದತ್ತಿನಿಧಿ'ಯನ್ನು ಬಳಸಿಕೊಳ್ಳಲು ಪೂರ್ಣ ಸ್ವತಂತ್ರರು; ನಾವು ತಿಳಿಯಲು ಮತ್ತು ಕಲಿಯಲು ಉತ್ತಮೋತ್ತಮವೂ ಅವುಗಳನ್ನು ಬೋಧನೆಯಲ್ಲಿ ಸೇರಿಸಲೇಬೇಕು. ಸಂಸ್ಕೃತ ಮತ್ತು ಅರೇಬಿಕ್‌ಗಿಂತಲೂ ತಿಳಿಯಲು ಇಂಗ್ಲಿಷ್ ಭಾಷೆ ಉತ್ತಮ ಮತ್ತು ಯೋಗ್ಯವಾದುದು. ಸ್ಥಳೀಯರು ಇಂಗ್ಲಿಷ್ ಭಾಷೆಯನ್ನು ಬೋಧಿಸಿಕೊಳ್ಳಲು ಇಚ್ಛಿಸುತ್ತಾರೆ ಮತ್ತು ಸಂಸ್ಕೃತ ಮತ್ತು ಅರೇಬಿಕ್‌ನ್ನು ಅವರು ಬೋಧಿಸಿಕೊಳ್ಳಲು ಇಚ್ಛಿಸುವುದಿಲ್ಲ. ಕಾನೂನಿನ ಭಾಷೆಗಳೂ ಅಲ್ಲದ, ಧಾರ್ಮಿಕ ಭಾಷೆಗಳೂ ಅಲ್ಲದ, ಸಂಸ್ಕೃತ ಮತ್ತು ಅರೇಬಿಕ್ ಯಾವುದೇ ನಮ್ಮ ಅಸಹಜ ಹಕ್ಕೊತ್ತಾಯಕ್ಕೆ ಅಲ್ಲದಿರುವುದು. ಇದು ಈ ರಾಷ್ಟ್ರದ ಸ್ಥಳೀಯರನ್ನು ಒಳ್ಳೆಯ ಇಂಗ್ಲಿಷ್ ಪಂಡಿತರನ್ನಾಗಿ ಮಾಡುವ ಸಾಧ್ಯತೆ ಇದೆ ಮತ್ತು ಈ ಮುಕ್ತಾಯದ ಸಂದರ್ಭದಲ್ಲಿ ನಮ್ಮ ಪ್ರಯತ್ನಗಳು ಹೀಗೇ ಮೇಲಿನಂತೆ ನಿರ್ದೇಶಿಸಲ್ಪಡುವುವು.

೩೪. ಒಂದಂಶದಲ್ಲಿ, ನಾನು ತಿರಸ್ಕರಿಸಲ್ಪಡುವ ಸಾಮಾನ್ಯ ದೃಷ್ಟಿಕೋನಗಳನ್ನು ಹೊಂದಿರುವ ಆ ಗಣ್ಯ ವ್ಯಕ್ತಿಯ ಅಭಿಪ್ರಾಯಗಳ ಜೊತೆ ನನ್ನ ಸಹಮತವಿದೆ. ನಮ್ಮ ಸೀಮಿತ ಸಾಧನಗಳಿಂದಾಗಿ ಒಂದು ಜನರ ಮಂಡಳಿಯನ್ನು ಶೈಕ್ಷಣೀಕರಣಗೊಳಿಸುವ ಪ್ರಯತ್ನ ನಮ್ಮಿಂದ ಅಸಾಧ್ಯವಾದುದೆಂದು ನಾನು ಅವನಂತೆ ಭಾವಿಸುವೆ. ಪ್ರಸ್ತುತದಲ್ಲಿ ನಾವು ಒಂದು 'ವರ್ಗ'ವನ್ನು ರೂಪುಗೊಳಿಸುವಲ್ಲಿನ ನಮ್ಮ ಪ್ರಯತ್ನಗಳು ಉತ್ತಮವಾಗಿರಬೇಕು; ನಮ್ಮ ಮತ್ತು ನಾನು ಆಳುವ ಮಿಲಿಯನ್ ಜನರ ಮಧ್ಯ ಆ ವರ್ಗವನ್ನು ನಿರೂಪಕರಂತೆ ರೂಪುಗೊಳಿಸುವುದು – ಬಣ್ಣ ಮತ್ತು ರಕ್ತದಲ್ಲಿ ಭಾರತೀಯರಾದ ಆದರೆ ಅಭಿರುಚಿಗಳಲ್ಲಿ, ಅಭಿಪ್ರಾಯಗಳಲ್ಲಿ, ನೀತಿಗಳಲ್ಲಿ ಮತ್ತು ಬುದ್ಧಿವಂತಿಕೆಯಲ್ಲಿ ಆಂಗ್ಲರಂತಿರುವ ಜನವರ್ಗವನ್ನು ರೂಪುಗೊಳಿಸುವುದು. ಆ ವರ್ಗಕ್ಕೆ ನಾವು ಆ ಸ್ಥಳೀಯ ಭಾಷೆಗಳ ಶುದ್ಧೀಕರಣ ಜವಾಬ್ದಾರಿಯನ್ನು ಬಿಟ್ಟುಕೊಡುವುದು. ಆ ಉಪಭಾಷೆಗಳನ್ನು ಪಾಶ್ಚಿಮಾತ್ಯರ ಸೇವೆ (ದಾಸ್ಯದಿಂದ)ಯಿಂದ ಪಡೆದ ವಿಜ್ಞಾನದ ಅಂಶಗಳಿಂದ ಶ್ರೀಮಂತಗೊಳಿಸುವುದು ಮತ್ತು ಆ ಮಹಾನ್ ಜನವರ್ಗಕ್ಕೂ ಜ್ಞಾನಸಂಪನ್ನಗೊಳಿಸಲು ಪದವಿಗಳೆಂಬ ಸೂಕ್ತ ಪದವಿಗಳನ್ನು ಪ್ರತಿಯಾಗಿ ಕೊಡುತ್ತಾ ಬರುವುದು.

೩೫. ನಾನು ಅಸ್ತಿತ್ವದಲ್ಲಿರುವ ಎಲ್ಲ ಆಸಕ್ತಿಗಳನ್ನು ಗೌರವಿಸುವೆ. ನಾನು, ಹಣರೂಪದ ದಂಡವಸೂಲಾತಿಗೆ ಅವಕಾಶ ನಿರೀಕ್ಷೆಯ ಒಳ್ಳೆಯ ಕಾರಣವನ್ನು ಹೊಂದಿರುವ ವ್ಯಕ್ತಿಗಳನ್ನು

ತುಂಬಾ ಔದಾರ್ಯಭಾವದಲ್ಲಿ ನಿಭಾಯಿಸಲಿಚ್ಚಿಸುವೆ. ಜೊತೆಗೆ, ನಮ್ಮಿಂದ ಇಲ್ಲಿಯ ತನಕ ಪಾಲಿಸಲ್ಪಟ್ಟ ಅತೀ ಕೆಟ್ಟ ಪದ್ಧತಿಯ ಬೇರುಗಳಿಗೆ ಘಾಸಿ ಮಾಡಲಿಚ್ಚಿಸುವೆ. ನಾನು ಒಮ್ಮಿಂದೊಮ್ಮೆಗೆ ಅರೇಬಿಕ್ ಮತ್ತು ಸಂಸ್ಕೃತ ಪುಸ್ತಕಗಳ ಮುದ್ರಣಗಳನ್ನು ನಿಲ್ಲಿಸಲಿಚ್ಚಿಸುವೆ. ನಾನು ಕೊಲ್ಕತ್ತಾದಲ್ಲಿರುವ ಮದ್ರಸಾ ಮತ್ತು ಸಂಸ್ಕೃತ ಕಾಲೇಜುಗಳನ್ನು ವಿಸರ್ಜಿಸ ಬಯಸುವೆ. ಬನಾರಸ್ ಬ್ರಾಹ್ಮಣರ ಮಹಾನ್ ವಿದ್ಯಾಪೀಠ ನಾವು ಸಂಸ್ಕೃತ ಕಾಲೇಜನ್ನು ಬನಾರಸ್‌ನಲ್ಲಿ ಮತ್ತು ಮಹಮದೀಯ ಕಾಲೇಜನ್ನು ದೆಹಲಿಯಲ್ಲುಳಿಸಿದರೆ ಅದೇ ನಮ್ಮ ಹೆಚ್ಚುಗಾರಿಕೆ ಎಂಬುದು ನನ್ನ ಅಭಿಪ್ರಾಯವಿದೆ. ಪೌರಾಸ್ತ್ಯ ಭಾಷೆಗಳಿಗಾಗಿ; ಬನಾರಸ್ ಮತ್ತು ದೆಹಲಿ ಕಾಲೇಜುಗಳನ್ನು ಅದೇ ಸ್ಥಳದಲ್ಲಿ ಉಳಿಸಲ್ಪಟ್ಟರೆ; ಈ ನಂತರ ಅಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಕನಿಷ್ಠ ವಿದ್ಯಾರ್ಥಿ ವೇತನ ಭತ್ಯೆಗಳನ್ನು ಇನ್ನು ಮುಂದೆ ಕೊಡುವುದಿಲ್ಲವೆಂದರೆ; ಅಲ್ಲಿಗೆ ವ್ಯವಸ್ಥೆ ಪುನರ್‌ಸ್ಥಿತಿಗೆ ಬರುತ್ತದೆಂದು ನಾನು ಶಿಫಾರಸ್ಸು ಮಾಡುವೆ. ಆದರೆ ಆ ಜನ ಯಾವುದೇ ವೇತನ ಬೇಡಿಕೆಯಿಲ್ಲದೆ ಇರುವ ಶೈಕ್ಷಣಿಕ ಪದ್ಧತಿಗಳ ಮೇಲಾಟದ ಮಧ್ಯದಲ್ಲಿ, ಕಲಿಯುವ ಆಸೆ ಇಲ್ಲದಿದ್ದರೂ ಆಯ್ಕೆಯ ಸ್ವಾತಂತ್ರ್ಯವನ್ನು ಅವರಷ್ಟಕ್ಕೆ ಬಿಟ್ಟು ಬಿಡಬೇಕು. ಕಲ್ಕತ್ತಾದಲ್ಲಿನ ಹಿಂದೂ ಕಾಲೇಜಿಗೆ ಹೆಚ್ಚಿನ ಉತ್ತೇಜನ ನೀಡಲು ಈವರೆಗೆ ಕಾಯ್ದಿರಿಸಿದ ಹಣಕಾಸನ್ನು ನಾವು ಸಮರ್ಥವಾಗಿ ಹಂಚಿಕೊಡುವೆವು ಮತ್ತು ಆಗ್ರಾ ಮತ್ತು ಪೋರ್ಟ್‌ವಿಲಿಯಂ ಪ್ರಾಂತ್ಯಗಳ ಪ್ರಧಾನ ನಗರಗಳಲ್ಲಿ ಇಂಗ್ಲಿಷ್ ಭಾಷೆಯನ್ನು ಉತ್ತಮವಾಗಿ ಬೋಧಿಸುವ ಶಾಲೆಗಳನ್ನು ತೆರೆಯುವುದು.

೩೬. ನಾನು ನಿರೀಕ್ಷಿಸಿದಂತೆ, ಕೌನ್ಸಿಲ್‌ನಲ್ಲಿ ಪ್ರಭುತ್ವದ ತೀರ್ಮಾನಗಳು ಇದ್ದರೆ, ಮಹಾನ್ ಹುರುಪು ಮತ್ತು ಚುರುಕುತನದಿಂದ ನಾನು ನನ್ನ ಕರ್ತವ್ಯಗಳ ಪಾಲನೆಗೆ ಇಳಿಯುತ್ತೇನೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಅದು ಸರ್ಕಾರದ ಅಭಿಪ್ರಾಯವಾಗಿದ್ದರೆ; ಪ್ರಸ್ತುತ ಪದ್ಧತಿಯು ಬದಲಾಗಿದೆ. ಹಾಗೆ ಉಳಿಯಲೇ ಬೇಕೆಂಬುದಾಗಿದ್ದರೆ, ನಾನು ಪ್ರಾರ್ಥಿಸುವುದೇನೆಂದರೆ; ನಾನು ಸಮಿತಿಯ ಮುಖ್ಯಸ್ಥನ ಹುದ್ದೆಯಿಂದ ನಿವೃತ್ತಿ ಪಡೆಯಲು ಅನುಮತಿ ಪಡುವೆನು. ನಾನು ಇಲ್ಲಿ ಅತೀ ಸಣ್ಣ ಪ್ರಮಾಣದ ಉಪಯೋಗಕ್ಕೂ ಆಗಿ ಬರುವುದಿಲ್ಲವೆಂದು ಭಾವಿಸಿರುವೆ. ನಾನು ಅತ್ಯಂತಿಕವಾಗಿ ನಂಬಿರುವ; ಅದು ಕೇವಲ ಭ್ರಮೆಯಾಗಿರಬಹುದು, ಅದಕ್ಕಾಗಿಯೇ ನನ್ನಲ್ಲಿನ ಉತ್ಸಾಹವನ್ನು ಧಾರೆಯೆರೆಯುತ್ತೇನೆಂದು ಭಾವಿಸಿರುವರೆ. ನಾನು ವರ್ತಮಾನದ ಶಿಕ್ಷಣ ಪದ್ಧತಿ ಸತ್ಯದ ಪ್ರಗತಿಗೆ ತ್ವರಿತವಾಗಿ ಕಾವಲು ಕಾಯುವುದಿಲ್ಲ. ಆದರೆ ಕ್ಷಯಿಸುವ ತಪ್ಪುಗಳ ಸಹಜ ಸಾವನ್ನು ನಿಧಾನಗೊಳಿಸುತ್ತದೆ ಎಂದು ನಂಬಿರುವೆ. ನಾನು ಗ್ರಹಿಸಿದಂತೆ, ನಾವು ಪ್ರಸ್ತುತದಲ್ಲಿ ಸಾರ್ವಜನಿಕ ಶಿಕ್ಷಣ ಮಂಡಳಿಗೆ ಒಂದು ಗೌರವಾನ್ವಿತ ಹೆಸರಿಡಲು ನಮಗೆ ಹಕ್ಕಿಲ್ಲ. ಖಾಲಿ ಹಾಳೆಗಳ ಬೆಲೆಗಿಂತ ಕಡಿಮೆ ಬೆಲೆಯ ಪುಸ್ತಕಗಳನ್ನು ಮುದ್ರಿಸುತ್ತಾ ಅಸಂಗತ ಇತಿಹಾಸ, ಅಸಂಬದ್ಧ ಅಧ್ಯಾತ್ಮ ಹಾಸ್ಯಾಸ್ಪದ ಭೌತಶಾಸ್ತ್ರ, ಅವಿವೇಕದ ದೇವಶಾಸ್ತ್ರದ ಕೃತಿಮ ಪ್ರೋತ್ಸಾಹಕ್ಕಾಗಿ – ಒಂದು ಪಂಡಿತರ ಪೀಳಿಗೆಯ ಅಭ್ಯುದಯಕ್ಕಾಗಿ; ನಾವು ಸಾರ್ವಜನಿಕ ಹಣವನ್ನು ಹಾಳುಮಾಡುವ ಮಂಡಳಿ ಆಗಿದ್ದೇವೆ; ಆ ಪಂಡಿತ ವರ್ಗ ಅವರು ಪಡೆವ ವಿದ್ಯಾರ್ಥಿ ವೇತನದಲ್ಲಿ ನ್ಯೂನ್ಯತೆಯುಂಟು.

ಶಿಕ್ಷಣ ಪಡೆವಾಗ ಅದು ಉಪಯೋಗ ಹೀನವೆಂದು ಯೌವ್ವನವನ್ನು ಸಾರ್ವಜನಿಕವಾಗಿ ಕಳೆದು ಉಳಿದ ಜೀವನವನ್ನು ಹಸಿವಿನಿಂದ ಇಲ್ಲವೆ ಸಾರ್ವಜನಿಕ ಹಣದಿಂದ ಜೀವಿಸುವರೂ

ಅಂತಹವರನ್ನು ನಾವು ಸೃಜಿಸುವುದಿದೆ. ಈ ಅಭಿಪ್ರಾಯಗಳನ್ನು ಪರಿಗಣಿಸಿ, ನಾನು ಸಹಜವಾಗಿ ಒಂದು ಮಂಡಳಿಯ ಜವಾಬ್ದಾರಿಗಳಲ್ಲಿನ ಎಲ್ಲ ಹಂಚಿಕೆಗಳನ್ನು ನಿರಾಕರಿಸುತ್ತೇನೆ ಎಂದು ಹೇಳಲು ಆಸೆ ಪಡುವೆ. ಅದು ಅದರ ಪೂರ್ಣ ನಡಾವಳಿಯ ಕ್ರಮಬದ್ಧತೆ ಬದಲಾಗದೆ ಹೋದಲ್ಲಿ ನಾನು ಪರಿಗಣಿಸಲೇ ಬೇಕಾದುದೇನೆಂದರೆ ಕೇವಲ ಅನುಪಯುಕ್ತವೆಂದು ಮಾತ್ರವಲ್ಲ ಅದರ ಧನಾತ್ಮಕವಾಗಿಯೂ ಕೆಡುಕು ಮಾಡುವುದೆಂದು ಅಭಿಪ್ರಾಯಿಸಿವೆ.

**ಥಾಮಸ್ ಬೇಬಿಂಗ್ಟನ್ ಮೆಕಾಲೆ**

೦೨ ಫೆಬ್ರವರಿ ೧೮೩೫

ನಾನು ನನ್ನ ಸಂಪೂರ್ಣ ಏಕಾಭಿಪ್ರಾಯವನ್ನು ಈ ಲೇಖನದಲ್ಲಿ ವ್ಯಕ್ತವಾಗಿರುವ ಭಾವನೆಗಳಿಗೆ ನೀಡಿರುವೆ.

**ವಿಲಿಯಂ ಕ್ಯಾವೆಂಡೀಶ್ ಬೆಂಟಿಂಕ್**

**ಇಂಗ್ಲಿಷ್ ಲೇಖನದ ಮೂಲ** : Minute of Education (1835) by Thoman Babinton Macauly

www.columbia.edu>medlar>prichett

## ಅನುಬಂಧ – ೩

# ಆಕರ ಗ್ರಂಥಗಳು


೧. ಅನಂತಮೂರ್ತಿ ಯು.ಆರ್ — **ಭಾರತೀಪುರ**
ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೮ (೧೯೭೩)

೨. ಕುವೆಂಪು — **ಕಾನೂರು ಹೆಗ್ಗಡಿತಿ**
ಉದಯರವಿ ಪ್ರಕಾಶನ, ಮೈಸೂರು, ೨೦೧೨ (೧೯೩೬)

**ಮಲೆಗಳಲ್ಲಿ ಮದುಮಗಳು**
ಉದಯರವಿ ಪ್ರಕಾಶನ, ಮೈಸೂರು, ೨೦೧೨ (೧೯೬೭)

೩. ಕೆರೂರು ವಾಸುದೇವಾಚಾರ್ಯ — **ಇಂದಿರಾ**
ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೮ (೧೯೦೮)

೪. ಚಂದ್ರಶೇಖರ ಕಂಬಾರ — **ಕರಿಮಾಯಿ**
ಅಂಕಿತ ಪುಸ್ತಕ, ಬೆಂಗಳೂರು, ೨೦೧೧ (೧೯೭೫)

೫. ಪುಟ್ಟಣ್ಣ ಎಂ ಎಸ್ — **ಮಾಡಿದ್ದುಣ್ಣೋ ಮಹಾರಾಯ**
ಕಾವ್ಯಾಲಯ, ಮೈಸೂರು, ೧೯೪೫ (೧೯೧೫)

೬. ಪೂರ್ಣಚಂದ್ರ ತೇಜಸ್ವಿ — **ಕರ್ವಾಲೊ**
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು, ೧೯೮೩ (೧೯೮೦)

೭. ಮಾಲಿನಿ ಮಲ್ಯ (ಸಂ) — **ಶಿವರಾಮ ಕಾರಂತರ ಕೃತಿ ಶ್ರೇಣಿ ಸಂ–೮**
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೮. ಲಂಕೇಶ್. ಪಿ — **ಬಿರುಕು**
ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೬ (೧೯೬೭)

೯. ಶಿವರಾಮ ಕಾರಂತ ಕೆ — **ಸರಸಮ್ಮನ ಸಮಾಧಿ**
ಎಸ್ ಬಿ ಎಸ್ ಪಬ್ಲಿಕೇಷನ್ಸ್
ಬೆಂಗಳೂರು, ೧೯೯೪ (೧೯೩೭)

**ಮರಳಿ ಮಣ್ಣಿಗೆ**
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು, ೨೦೦೧ (೧೯೪೧)

**ಬೆಟ್ಟದ ಜೀವ**
ಎಸ್ ಬಿ ಎಸ್ ಪಬ್ಲಿಕೇಷನ್ಸ್
ಬೆಂಗಳೂರು, ೧೯೯೮ (೧೯೪೩)

೧೦. ಶ್ರೀಕೃಷ್ಣ ಆಲನಹಳ್ಳಿ — **ಕಾಡು**
ಭಾರತಿ ಪ್ರಕಾಶನ, ಮೈಸೂರು, ೨೦೦೮ (೧೯೭೧)

**ಪರಸಂಗದ ಗೆಂಡೆತಿಮ್ಮ**
ಡಿ.ವಿ.ಕೆ ಮೂರ್ತಿ ಪ್ರಕಾಶನ
ಮೈಸೂರು, ೨೦೦೮ (೧೯೭೪)

